# ಸಿಂದ ಮನೆತನಗಳ ರಾಜಕೀಯ ಮತ್ತು ಸಾಂಸ್ಕೃತಿಕ ಅಧ್ಯಯನ

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಸಂಶೋಧನ ಮಹಾಪ್ರಬಂಧ)

ಸಂಶೋಧಕರು
ದೀಪಕ ಆಲೂರ

ಮಾರ್ಗದರ್ಶಕರು
ಡಾ. ಕೆ.ಜಿ. ಭಟ್‌ಸೂರಿ
ಸಹ ಪ್ರಾಧ್ಯಾಪಕರು ಮತ್ತು ಮುಖ್ಯಸ್ಥರು
ಶಾಸನಶಾಸ್ತ್ರ ವಿಭಾಗ



ಸಮಾಜ ವಿಜ್ಞಾನಗಳ ನಿಕಾಯ
ಶಾಸನಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೧೨

# ಸಿಂದ ಮನೆತನಗಳ ರಾಜಕೀಯ ಮತ್ತು ಸಾಂಸ್ಕೃತಿಕ ಅಧ್ಯಯನ

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಸಂಶೋಧನ ಮಹಾಪ್ರಬಂಧ)

ಸಂಶೋಧಕರು
ದೀಪಕ ಆಲೂರ

ಮಾರ್ಗದರ್ಶಕರು
ಡಾ. ಕೆ.ಜಿ. ಭಟ್‌ಸೂರಿ
ಸಹ ಪ್ರಾಧ್ಯಾಪಕರು ಮತ್ತು ಮುಖ್ಯಸ್ಥರು
ಶಾಸನಶಾಸ್ತ್ರ ವಿಭಾಗ




ಸಮಾಜ ವಿಜ್ಞಾನಗಳ ನಿಕಾಯ
ಶಾಸನಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೧೨

# ಪ್ರಮಾಣ ಪತ್ರ

**"ಸಿಂದ ಮನೆತನಗಳ ರಾಜಕೀಯ ಮತ್ತು ಸಾಂಸ್ಕೃತಿಕ ಅಧ್ಯಯನ"** ವಿಷಯದ ಕುರಿತು ಡಾ. ಕೆ. ಜಿ. ಭಟ್‌ಸೂರಿ ಅವರ ಮಾರ್ಗದರ್ಶನದಲ್ಲಿ ಸಂಶೋಧನಾ ಅಧ್ಯಯನ ಮಾಡಿ ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿದ್ದೇನೆ.

ಈ ಮಹಾಪ್ರಬಂಧವನ್ನು ಇದುವರೆಗೂ ಯಾವುದೇ ಪದವಿಗಾಗಿ ಸಲ್ಲಿಸಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

**ಸ್ಥಳ : ವಿದ್ಯಾರಣ್ಯ**
ದಿನಾಂಕ :೩೧-೧೦-೨೦೧೨

ದೀಪಕ ಆಲೂರ
ನೋಂದಣಿ ಸಂಖ್ಯೆ ೭೪೩
ಸಂಶೋಧನ ವಿದ್ಯಾರ್ಥಿ
ಶಾಸನಶಾಸ್ತ್ರ ವಿಭಾಗ ಕನ್ನಡ ವಿಶ್ವವಿದ್ಯಾಲಯ,
ಹಂಪಿ, ವಿದ್ಯಾರಣ್ಯ ೫೮೩ ೨೭೬

# ದೃಢೀಕರಣ ಪತ್ರ

**"ಸಿಂದ ಮನೆತನಗಳ ರಾಜಕೀಯ ಮತ್ತು ಸಾಂಸ್ಕೃತಿಕ ಅಧ್ಯಯನ"** ವಿಷಯದ ಕುರಿತು ಪ್ರಬಂಧವನ್ನು ದೀಪಕ ಆಲೂರ (ನೋಂದಣಿ ಸಂಖ್ಯೆ ೭೪೩), ಅವರು ನನ್ನ ಮಾರ್ಗದರ್ಶನದಲ್ಲಿ ಸಂಶೋಧನಾ ಅಧ್ಯಯನ ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿದ್ದಾರೆ.

ಈ ಮಹಾಪ್ರಬಂಧವನ್ನು ಇದುವರೆಗೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ವಿದ್ಯಾರಣ್ಯ
ದಿನಾಂಕ : ೩೧-೧೦-೨೦೧೨

ಡಾ. ಕೆ.ಜಿ. ಭಟ್‌ಸೂರಿ
ಮಾರ್ಗದರ್ಶಕರು
ಶಾಸನಶಾಸ್ತ್ರ ವಿಭಾಗ,
ಕನ್ನಡ ವಿಶ್ವವಿದ್ಯಾಲಯ,
ಹಂಪಿ, ವಿದ್ಯಾರಣ್ಯ ೫೮೩ ೨೭೬

# ಅರಿಕೆ

ಧಾರವಾಡದ ವಿದ್ಯಾನಗರಿಯಲ್ಲಿ ಹುಟ್ಟಿ ಬೆಳೆದ ನಾನು ಇಲ್ಲಿಯ ಶೈಕ್ಷಣಿಕ ವಾತಾವರಣದಲ್ಲಿರುವುದು ನನ್ನ ಸೌಭಾಗ್ಯ. ಇತಿಹಾಸ ವಿಷಯದ ಸ್ನಾತಕೋತ್ತರ ಪದವಿ ಪಡೆದು ಉಪನ್ಯಾಸಕನಾಗಿ ಕಾರ್ಯನಿರ್ವಹಿಸುತ್ತಿರುವುದು ನನ್ನ ಅದೃಷ್ಟವೇ ಎನ್ನಬಹುದು. ನನ್ನ ಹಿರಿಯ ಹಿತೈಷಿಗಳೆಲ್ಲಾ ಇತಿಹಾಸ ಕ್ಷೇತ್ರದಲ್ಲಿ ಕಾರ್ಯ ಮಾಡಲು ನೀಡಿದ ಸಲಹೆ ಹಾಗೂ ಪ್ರೋತ್ಸಾಹಗಳಿಂದ ನನ್ನ ಈ ಕಾರ್ಯಕ್ಕೆ ಹೆಚ್ಚಿನ ಒತ್ತು ಸಿಕ್ಕಿದ್ದು ನಿಜ. ಈ ಸಂದರ್ಭದಲ್ಲಿ ನನಗೆ ಪಿಎಚ್.ಡಿ. ಸಂಶೋಧನೆ ಮಾಡಲು ನೋಂದಣಿ ಕೊಟ್ಟು ಮಾರ್ಗದರ್ಶನ ಮಾಡಲು ಮುಂದಾದವರು ಸಂಶೋಧನಾ ಕ್ಷೇತ್ರದಲ್ಲಿ ವಿದ್ವಾಂಸರಾದ ಡಾ॥ ಕೆ. ಜಿ. ಭಟ್ಟಸೂರಿ ಗುರುಗಳು. ಈ ಸಂಶೋಧನಾ ಕೆಲಸದುದ್ದಕ್ಕೂ ಅವರಿಂದ ಪಡೆದ ಮಾರ್ಗದರ್ಶನ ಸಹಕಾರಗಳು ಅಪಾರ. ಅವರಿಗೆ ನನ್ನ ಹೃತ್ಪೂರ್ವಕ ನಮನಗಳು.

ನನ್ನ ಈ ಅಸೆಗೆ ನೀರೆರೆದು ಫಲಪ್ರದವನ್ನಾಗಿಸಿದವರು ದೇಶದ ಹಿರಿಯ ಸಂಶೋಧಕರಾದ ಡಾ॥ ಶ್ರೀನಿವಾಸ ರಿತ್ತಿ ಅವರು. ಅವರು ನನ್ನ ತಂದೆ ಹಾಗೂ ಗುರು ಸ್ಥಾನದಲ್ಲಿ ನಿಂತುಕೊಂಡು ಸ್ನಾನಕೋತ್ತರ ಪದವಿ ಪಡೆಯುವ ಪೂರ್ವದಿಂದಲೂ ಸನ್ಮಾರ್ಗದರ್ಶಕರಾಗಿದ್ದಾರೆ. ನನ್ನ ಮೂಲ ಪ್ರೇರಕರಾದ ಇವರು ತಮ್ಮೆಲ್ಲ ಕಾರ್ಯಬಾಹುಳ್ಯಗಳನ್ನು ಸರಿದೂರಿಕರಿಸಿ ನೀಡಿದ ಮಾರ್ಗದರ್ಶನವು ಅತ್ಯಮೂಲ್ಯ ಮತ್ತು ಅಗಣಿತ. ಅವರ ನಿಸ್ವಾರ್ಥದ ಬದುಕು, ಜೀವನ ಸದಾ ನನಗೆ ದಾರಿದೀಪ. ಸಂಶೋಧನಾ ಕ್ಷೇತ್ರದಲ್ಲಿ ಅವರು ಮತ್ತು ಅನೇಕರು ಹಿರಿಯರು ನೀಡಿದ ಆಶೀರ್ವಾದಕ್ಕೆ ನಾನು ನನ್ನ ಜನ್ಮದುದ್ದಕ್ಕೂ ಧನ್ಯತಾ ಭಾವದಿಂದ ಋಣಿಯಾಗಿರುವೆ.

ಅದೇ ರೀತಿ ಸಂಶೋಧನಾ ಕಾರ್ಯಕ್ಕೆ ಪ್ರೇರಣೆ ನೀಡಿ ಸಹಕರಿಸಿದವರಲ್ಲಿ ನನ್ನ ಕುಟುಂಬದ ಹಲವು ಹಿತೈಷಿಗಳು, ಹಿರಿಯ ಮಾರ್ಗದರ್ಶಕರು, ಸ್ನೇಹಮಯ ಮಿತ್ರವೃಂದವನ್ನು ನೆನೆಯುತ್ತೇನೆ. ಅದರಂತೆ ನನ್ನನ್ನು ಬೆಂಬಲಿಸಿದವರಲ್ಲಿ ನಾನು ಕೆಲಸ ಮಾಡುತ್ತಿರುವ ಕಾಲೇಜಿನ ಸಿಬ್ಬಂದಿ ವರ್ಗದವರು ಕೂಡಾ ಪ್ರಮುಖರಾಗಿದ್ದಾರೆ. ಅವರನ್ನು ಕೂಡಾ ಧನ್ಯತೆಯಿಂದ ಸ್ಮರಿಸುತ್ತೇನೆ.

ಸಂಶೋಧನಾ ಕಾರ್ಯಕ್ಕೆ ನಿರಂತರವಾಗಿ ಸಹಕರಿಸಿದ ನನ್ನ ಮಡದಿ ಶ್ರೀಮತಿ ಗೀತಾ ಆಲೂರ ಹಾಗೂ ಮಕ್ಕಳಾದ ಅನುರಾಗ ಮತ್ತು ಪವನ ಇವರು ಬೆಂಬಲಿಸಿದ್ದು, ಇವರನ್ನು ವಿಶೇಷವಾಗಿ ನಾನು ಸ್ಮರಿಸಲೇಬೇಕು.

ಸಂಶೋಧನಾ ಕಾರ್ಯಕ್ಕೆ ನನಗೆ ಅಮೂಲ್ಯ ಗ್ರಂಥಗಳನ್ನು ಬಳಸಿಕೊಳ್ಳಲು ಸಹಕರಿಸಿದ ಕರ್ನಾಟಕ ವಿಶ್ವವಿದ್ಯಾಲಯದ ಸಿಬ್ಬಂದಿ, ಕನ್ನಡ ಸಂಶೋಧನ ಸಂಸ್ಥೆಯ ಸಿಬ್ಬಂದಿಯವರಿಗೆ ನಾನು ಕೃತಜ್ಞನಾಗಿದ್ದೇನೆ.

ಕನ್ನಡ ವಿಶ್ವವಿದ್ಯಾಲಯದ ಶಾಸನಶಾಸ್ತ್ರ ವಿಭಾಗದ ಪ್ರಾಧ್ಯಾಪಕ ವೃಂದ ಹಾಗೂ ಸಿಬ್ಬಂದಿಯವರೆಗೆ ನಾನು ತುಂಬಾ ಆಭಾರಿಯಾಗಿದ್ದೇನೆ.

ನನ್ನ ಈ ಮಹಾ ಪ್ರಬಂಧವನ್ನು ಅಚ್ಚುಕಟ್ಟಾಗಿ ಡಿ.ಟಿ.ಪಿ ಕಾರ್ಯವನ್ನು ಮಾಡಿಕೊಟ್ಟ ಶ್ರೀಮತಿ ಸ್ಮಿತಾ, ಕುಮಾರಿ ಬಸಮ್ಮಾ, ಲಾಜಿಕ್‌ವರ್ಕ್ಸ್‌ನ ಮಾಲಿಕರು, ಶ್ರೀ ರಮೇಶ ಜಮಾದಾರ ಹಾಗೂ ಇದರೊಂದಿಗೆ ಇತರೆ ಕಾರ್ಯಗಳನ್ನು ಅಚ್ಚುಕಟ್ಟಾಗಿ ನಿರ್ವಹಿಸಿಕೊಟ್ಟ ಇತರ ಸ್ನೇಹಿತರಿಗೂ ಕೂಡಾ ನಾನು ಆಭಾರಿ. ಮಹಾಪ್ರಬಂಧವನ್ನು ಅಂದವಾಗಿ ಬೈಂಡ ಮಾಡಿಕೊಟ್ಟ ಮಹಾಂತೇಶ ಬುಕ್ ಬೈಂಡರ್ಸ ಇವರಿಗೆ ಕೂಡ ಧನ್ಯವಾದಗಳು.

ಮಹಾಪ್ರಬಂಧದ ರಚನೆಗೆ ಪರೋಕ್ಷ, ಅಪರೋಕ್ಷವಾಗಿ ಸಹಕರಿಸಿದ ಸರ್ವರಿಗೂ ನಾನು ಚಿರಋಣಿ.

ದೀಪಕ ಆಲೂರ
ಸಂಶೋಧನಾ ವಿದ್ಯಾರ್ಥಿ
ಗೀತಾಭವನ, ಸಾಧನಕೇರಿ
ಧಾರವಾಡ

## ಪರಿವಿಡಿ

## ನಕಾಶೆಗಳ ಪಟ್ಟಿ

# ಚಿತ್ರಗಳ ಪಟ್ಟಿ

## ರೇಖಾಚಿತ್ರಗಳ ಪಟ್ಟಿ



## ಛಾಯಾಚಿತ್ರಗಳ ಪಟ್ಟಿ

# ಸಂಕ್ಷೇಪಗಳ ಪಟ್ಟಿ

೧) ಎ. ಐ– ಎಪಿಗ್ರಾಫಿಯಾ ಇಂಡಿಕಾ

೨) ಎ.ಕ– ಎಪಿಗ್ರಾಫಿಯಾ ಕರ್ನಾಟಿಕಾ

೩) ಕ.ಇ– ಕರ್ನಾಟಕ ಇನಸ್ಕ್ರಿಪ್ಷನ್ಸ

೪) ಜೆ.ಬಿ.ಬಿ.ಆರ್.ಎ.ಎಸ್– ಜರ್ನಲ್ ಅಫ್ ಬಾಂಬೆ
ಬ್ರಾಂಚ್ ಆಫ್ ರಾಯಲ್ ಎಷಿಯಾಟಿಕ ಸೊಸೈಟಿ

೫) ಎಸ್.ಆಯ್.ಆಯ್– ಸೌಥ್ ಇಂಡಿಯನ್ ಇನಸ್ಕ್ರಿಪ್ಷನ್ಸ

೬) ಎಮ್. ಎ.ಆರ್– ಮೈಸೂರ ಎಫಿಗ್ರಾಫಿ ಇನಸ್ಕ್ರಿಪ್ಷನ್ಸ

ಕರ್ನಾಟಕದಲ್ಲಿ ಸಿಂದರ ಪ್ರದೇಶಗಳು




ನಕಾಶೆ ೧

# ಅಧ್ಯಾಯ ೧

## ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಪ್ರಾಚೀನ ಭಾರತದ, ವಿಶೇಷವಾಗಿ ಕರ್ನಾಟಕದ, ಆಡಳಿತ ಪದ್ಧತಿಯಲ್ಲಿ ಒಂದು ಗಮನಾರ್ಹವಾದ ಅಂಶವೆಂದರೆ, ಒಂದು ದೃಷ್ಟಿಯಿಂದ ಸಮಾನಾಂತರ ಆಡಳಿತ ವ್ಯವಸ್ಥೆ. ಅಂದರೆ ವಿಶಾಲವಾದ ಸಾಮ್ರಾಜ್ಯಗಳಲ್ಲಿ ಚಿಕ್ಕ, ದೊಡ್ಡ ಮಾಂಡಲೀಕ ಮನೆತನಗಳು ತಮ್ಮ ಪರಿಧಿಯಲ್ಲಿ ಹೆಚ್ಚು ಕಡಿಮೆ ಸ್ವತಂತ್ರ ರೀತಿಯಿಂದ ಆದರೂ ಆಳರಸರ ಅಧೀನರಾಗಿ ಆಳುತ್ತಿದ್ದರು. ಇಂತಹ ಮಾಂಡಲೀಕರು ಚಿಕ್ಕ ದೊಡ್ಡ ಪ್ರದೇಶಗಳ ಮೇಲೆ ಅಧಿಪತಿಗಳೆಂದು ನೇಮಿಸಲ್ಪಟ್ಟು ಅವರು ಆ ಪ್ರದೇಶಗಳ ಮೇಲೆ ಸಂಪೂರ್ಣ ಪ್ರಭುತ್ವ ಹೊಂದಿರುತ್ತಿದ್ದರು. ಸಾಮಾನ್ಯವಾಗಿ ಇಂಥ ಅಧೀನ ಆಡಳಿತಗಾರರು, ಮಹಾಸಾಮಂತ, ಸಾಮಂತ, ಮಂಡಲೇಶ್ವರ, ಮಹಾಮಂಡಲೇಶ್ವರ ಎಂದು ಕರೆಯಲ್ಪಡುತ್ತಿದ್ದರು. ಇಂಥ ಉಪಾಧಿಗಳು ಅವರವರ ಯೋಗ್ಯತೆ, ಪ್ರಭಾವ ಮತ್ತು ಅವರ ಅಧೀನ ಭೌಗೋಲಿಕ ವ್ಯಾಪ್ತಿಯನ್ನು ಅವಲಂಬಿಸುತ್ತಿದ್ದವು. ಸ್ಥೂಲವಾಗಿ ಇವು ಅವರ ದರ್ಜೆಯನ್ನು ಸೂಚಿಸುವಂತಿದ್ದರೂ ಇದು ಹೆಚ್ಚು, ಇದು ಕಡಿಮೆ ಎಂದು ಖಚಿತವಾಗಿ ದರ್ಜೆಯನ್ನು (Hierarchy) ನಿರ್ಧರಿಸಲಾಗುವುದಿಲ್ಲ. ಇವು ಸಾಧಾರಣವಾಗಿ ಸಮಾನಾರ್ಥ ಪದಗಳು ಎಂದು ಹೇಳಬಹುದು. ಅನೇಕ ಸಲ ಕೆಲವು ವಿದ್ವಾಂಸರು ಇವುಗಳ ನಡುವೆ ಹೆಚ್ಚು ಅಥವಾ ಕಡಿಮೆ ದರ್ಜೆಯನ್ನು ಕಾಣಲು ಯತ್ನಿಸುತ್ತಾರೆ.

ಇಂತಹ ಮಾಂಡಲೀಕರು ಚಿಕ್ಕ ದೊಡ್ಡ ಪ್ರದೇಶಗಳ ಮೇಲೆ ಅಧಿಪತಿಗಳೆಂದು ನೇಮಿಸಲ್ಪಟ್ಟು ಅವರು ಆ ಪ್ರದೇಶಗಳ ಮೇಲೆ ಸಂಪೂರ್ಣ ಪ್ರಭುತ್ವ ಹೊಂದಿರುತ್ತಿದ್ದರು. ಅಂತಹ ಪ್ರದೇಶಗಳ ಆಡಳಿತ ವ್ಯವಸ್ಥೆ, ಜನರ ಯೋಗಕ್ಷೇಮ ಇತ್ಯಾದಿ ಅವರ ಹೊಣೆಯಾಗಿರುತ್ತಿದ್ದಿತು ಅಂದರೆ ಇಡೀ ಸಾಮ್ರಾಜ್ಯಕ್ಕೆ ಆಳರಸನೇ ಅಧಿಪತಿಯಾಗಿರುತ್ತಿದ್ದನು. ಅವನಿಗೆ ಅಧೀನನಾಗಿ ಅನೇಕ ಮಾಂಡಲೀಕ ಮನೆತನಗಳು ತಮ್ಮ ತಮ್ಮ ಪ್ರದೇಶಗಳಲ್ಲಿ ರಾಜ್ಯಭಾರ ನಡೆಸುತ್ತಿದ್ದರು. ಸ್ಥೂಲವಾಗಿ ಹೇಳಬೇಕೆಂದರೆ, ಆಳರಸರ ಮತ್ತು ಮಾಂಡಲೀಕರ ನಡುವೆ ಸಂಬಂಧಗಳು ಹೆಚ್ಚಾಗಿ ಸೌಹಾರ್ದಯುತವಾಗಿರುತ್ತಿದ್ದವು. ಇವರಿಗೆ ಆಳರಸರ ಆಸ್ಥಾನದಲ್ಲಿ ಮಹತ್ವದ ಮತ್ತು ಗೌರವಯುತ ಸ್ಥಾನಮಾನಗಳಿದ್ದವು. ಯುದ್ಧ ಮುಂತಾದ ಪ್ರಸಂಗಗಳಲ್ಲಿ ಮಾಂಡಲಿಕರು ಅರಸರಿಗೆ ಬೆಂಬಲವಾಗಿ ನಿಲ್ಲುತ್ತಿದ್ದರು. ತಮ್ಮಲ್ಲಿಯ ಸೈನ್ಯದೊಡನೆ ಆಳರಸರ ಪರವಾಗಿ ಹೋರಾಡುತ್ತಿದ್ದರು. ಒಂದು ದೃಷ್ಟಿಯಿಂದ ಇವರು ಸಾಮ್ರಾಜ್ಯದ ರಕ್ಷಕರೆಂದು ಹೇಳಬಹುದು.

ಕೆಲವು ಮಾಂಡಲಿಕರು ತಮ್ಮ ಯೋಗ್ಯತೆ ಮತ್ತು ಪ್ರಭಾವಗಳಿಂದ ಅರಸನ ರಾಜ್ಯದ ಆಡಳಿತದ ಅನಿವಾರ್ಯ ಭಾಗವೆಂದು ಭಾವಿಸಲ್ಪಡುತ್ತಿದ್ದರು. ಕೇವಲ ರಾಜ್ಯ ರಕ್ಷಣೆಯಷ್ಟೇ ಅಲ್ಲ, ರಾಜ್ಯ ವಿಸ್ತರಣೆಯಲ್ಲಿಯೂ ಇವರ ಕೊಡುಗೆ ಅಪಾರವಾಗಿರುತ್ತಿದ್ದಿತು. ಅರಸನ ದಿಗ್ವಿಜಯಗಳಲ್ಲಿ ಇವರು ಹುಮ್ಮಸ್ಸಿನಿಂದ ಪಾಲ್ಗೊಳ್ಳುತ್ತಿದ್ದರು. ಅಥವಾ ಅರಸನ ಪರವಾಗಿ ವೈರಿ ರಾಜ್ಯಗಳ ಮೇಲೆ ದಂಡೆತ್ತಿ ಹೋಗುತ್ತಿದ್ದರು. ರಾಜ್ಯದಲ್ಲಿ ಬೇಡ ಮುಂತಾದ ಜನಾಂಗಗಳು ಎಬ್ಬಿಸುತ್ತಿದ್ದ ಗೊಂದಲಗಳನ್ನು ತಗ್ಗಿಸುವುದರಲ್ಲಿಯೂ ಅಥವಾ ಗೋಗ್ರಹಣದ ಕಾಳಗದಲ್ಲಿಯೂ ಇವರು ಭಾಗವಹಿಸುತ್ತಿದ್ದರು. ಹೀಗಾಗಿ ಯಾವುದೇ ಒಂದು ಸಾಮ್ರಾಜ್ಯದ ಸಮಗ್ರ ಚರಿತ್ರೆಯನ್ನು ಅರಿಯಬೇಕಾದರೆ, ಪ್ರಮುಖ ರಾಜಮನೆತನಗಳ ಅಭ್ಯಾಸದ ಜೊತೆಗೆ, ಇಂಥ ಸಾಮಂತ ಮನೆತನಗಳ ವಿಶದವಾದ ಅಭ್ಯಾಸವು ಅಗತ್ಯವಾಗುತ್ತದೆ. ಪ್ರಮುಖ ರಾಜಮನೆತನಗಳಂತೆ ಈ ಮನೆತನಗಳು ಆಯಾ ಪ್ರದೇಶಗಳ ರಾಜಕೀಯ ಮತ್ತು ಸಾಂಸ್ಕೃತಿಕ ಬೆಳವಣಿಗೆಗೆ ಅಪಾರ ಕೊಡುಗೆ ಇತ್ತಿವೆ.

ಇಂತಹ ಸಾಮಂತ ಮನೆತನಗಳ ಆಡಳಿತ ಪದ್ಧತಿ ಇಡೀ ರಾಜ್ಯದ ಆಡಳಿತ ಪದ್ಧತಿಯಂತೆಯೇ ಇರುತ್ತಿತ್ತು. ಆಳರಸರಲ್ಲಿ ಆನುವಂಶಿಕತೆ ಇದ್ದಂತೆ ಸಾಮಂತ ಮನೆತನಗಳೂ ಆನುವಂಶಿಕತೆಯನ್ನು ಅನುಸರಿಸುತ್ತಿದ್ದವು. ಅಂದರೆ ಅಧಿಕಾರವು ತಂದೆಯಿಂದ ಮಗನಿಗೆ ಕ್ರಮ ಪ್ರಾಪ್ತವಾಗಿ ಬರುತ್ತಿತ್ತು. ಒಟ್ಟಿನಲ್ಲಿ ಸಾಮ್ರಾಜ್ಯದಲ್ಲಿ ಇದ್ದಂತೆಯೇ ಇವರೂ ತಮ್ಮ ತಮ್ಮ ಪ್ರದೇಶಗಳಲ್ಲಿ ಸ್ವತಂತ್ರವಾಗಿ ರಾಜ್ಯಭಾರ ನಡೆಸುತ್ತಿದ್ದರು. ಇವರಿಗೆ ತಮ್ಮದೇ ಆದ ಅಧಿಕಾರಿವರ್ಗವಿರುತ್ತಿದ್ದಿತು. ತಮ್ಮ ಪ್ರಾದೇಶಿಕ ಭದ್ರತೆಯ ಸಲುವಾಗಿ ತಮ್ಮದೇ ಆದ ಸೈನ್ಯವನ್ನೂ ಇಟ್ಟುಕೊಂಡಿರುತ್ತಿದ್ದರು. ಅವಶ್ಯಕವೆನಿಸಿದಾಗ ಅರಸನಿಗೆ ತಮ್ಮ ಸೈನ್ಯದೊಂದಿಗೆ ನೆರವಾಗುತ್ತಿದ್ದರು. ತಮ್ಮದೇ ಆದ ಅರ್ಥವ್ಯವಸ್ಥೆಯನ್ನು ರೂಪಿಸಿಕೊಂಡಿರುತ್ತಿದ್ದರು. ಅವಶ್ಯಕ ವಸ್ತುಗಳ ಮೇಲೆ ಕರಾಕರಣೆ, ಅದಕ್ಕೆ ಸಂಬಂಧಿಸಿದಂತೆ ಅಧಿಕಾರಿಗಳು, ದತ್ತಿ ದಾನಗಳು ಇವೆಲ್ಲವುಗಳು ಇವರ ಕಾರ್ಯವ್ಯಾಪ್ತಿಗೆ ಬರುತ್ತಿದ್ದವು. ಆಳರಸರಂತೆ ತಮ್ಮ ತಮ್ಮ ಪ್ರದೇಶಗಳಲ್ಲಿ ಧರ್ಮ, ಸಾಹಿತ್ಯ, ಸಂಸ್ಕೃತಿ, ಶಿಕ್ಷಣ ಮುಂತಾದವುಗಳ ಬೆಳವಣಿಗೆಗೆ ಅಷ್ಟೇ ಲಕ್ಷ್ಯ ಕೊಡುತ್ತಿದ್ದರು. ಕೆರೆಕಟ್ಟೆಗಳ ನಿರ್ಮಾಣ, ನಿರ್ವಹಣೆ, ದೇವಾಲಯಗಳ ನಿರ್ಮಾಣ, ವಿದ್ಯಾಸಂಸ್ಥೆಗಳ ನಿರ್ವಹಣೆ, ವಿವಿಧ ಧರ್ಮಗಳ, ಸಂಸ್ಥೆಗಳ ಯತಿಗಳ ಸಂರಕ್ಷಣೆ, ಪ್ರೋತ್ಸಾಹ ಇವೆಲ್ಲವೂ ಅವರ ಕರ್ತವ್ಯವಾಗಿರುತ್ತಿದ್ದವು. ಹೀಗಾಗಿ ಸಾಮ್ರಾಜ್ಯಗಳ ಸರ್ವಾಂಗೀಣ ಬೆಳವಣಿಗೆಯಲ್ಲಿ ಇವರ ಪಾತ್ರ ಹಿರಿದಾಗಿದ್ದಿತು.

ಎಷ್ಟೋ ಸಲ ಬಲಿಷ್ಠ ಮಾಂಡಲಿಕರು ಅವಕಾಶಗಳನ್ನು ಬಳಸಿಕೊಂಡು ಆಳರಸರ ವಿರುದ್ಧವೇ ಎದ್ದು ನಿಂತು ತಾವೇ ಸ್ವತಂತ್ರ ರಾಜ್ಯಗಳನ್ನು ಸ್ಥಾಪಿಸಿಕೊಂಡ ಉದಾಹರಣೆಗಳೂ ಇವೆ. ಕರ್ನಾಟಕದ ಪ್ರಮುಖ ರಾಜಮನೆತನಗಳಾದ ಚಾಲುಕ್ಯ, ರಾಷ್ಟ್ರಕೂಟ, ಹೊಯ್ಸಳ, ಸೇವುಣ ಮನೆತನಗಳು ಇಂಥ ಅವಕಾಶಗಳಿಂದಲೇ ಪ್ರವರ್ಧಮಾನವಾದವು. ಎಷ್ಟೋ ಸಾಮಂತಮನೆತನಗಳು ರಾಜಕೀಯ ಕ್ಷೇತ್ರದಲ್ಲಿ ತಮ್ಮ ಗಣ್ಯ ಸ್ಥಾನಗಳನ್ನು ಉಪಯೋಗಿಸಿಕೊಂಡು ಅರಸುಮನೆತನಗಳೊಡನೆ ವೈವಾಹಿಕ ಸಂಬಂಧಗಳನ್ನು ಬೆಳೆಸಿ ತಮ್ಮ ಪ್ರತಿಷ್ಠೆಯನ್ನು ಹೆಚ್ಚಿಸಿಕೊಳ್ಳುತ್ತಿದ್ದವು. ಎಷ್ಟೋ ಸಲ ಆಳರಸರಿಗೆ ಬೆಂಬಲವಾಗಿ ನಿಂತು ರಾಜ್ಯ ಮತ್ತು ರಾಜಮನೆತನಗಳ ರಕ್ಷಣೆಯಲ್ಲಿ ಇವರು ಪ್ರಮುಖ ಪಾತ್ರವಹಿಸುತ್ತಿದ್ದರು. ಕಲ್ಯಾಣ ಚಾಲುಕ್ಯ ಮನೆತನದ ೧ನೇ ಸೋಮೇಶ್ವರ ಮತ್ತು ಅವನ ಸಾಮಂತನಾದ ಸೇವುಣ ಭಿಲ್ಲಮನ ಉದಾಹರಣೆಯನ್ನು ಇಲ್ಲಿ ಗಮನಿಸಬಹುದು. ಸೇವುಣ ೩ನೇ ಭಿಲ್ಲಮನು ಚಾಲುಕ್ಯ ಸಾಮ್ರಾಜ್ಯದ ಉತ್ತರದ ಗಡಿಯಲ್ಲಿ ಸಾಮಂತನಾಗಿದ್ದು, ರಾಜ್ಯ ರಕ್ಷಣೆಗೆ ಅವನ ಅವಶ್ಯಕತೆಯನ್ನು ಗುರುತಿಸಿ ಸೋಮೇಶ್ವರನು ತನ್ನ ತಂಗಿಯಾದ ಅವ್ವಲದೇವಿಯನ್ನು ಅವನಿಗೆ ಮದುವೆ ಮಾಡಿಕೊಟ್ಟು, ಅವನನ್ನು ನೆಚ್ಚಿನ ಸಾಮಂತನನ್ನಾಗಿ ಮಾಡಿಕೊಂಡನು.[೧] ಹೀಗಾಗಿ ಪ್ರಮುಖ ರಾಜಮನೆತನಗಳ ಅಭ್ಯಾಸದ ಜೊತೆಗೆ ಇಂಥ ಸಾಮಂತಮನೆತನಗಳ ಅಭ್ಯಾಸವು ಅಗತ್ಯವಾಗಿದೆ.

ಇನ್ನೊಂದು ದೃಷ್ಟಿಯಿಂದ ಹೇಳಬೇಕೆಂದರೆ, ಸಾಮಂತಮನೆತನಗಳ ಇತಿಹಾಸವು ರಾಜ ಮನೆತನಗಳ ಇತಿಹಾಸದಲ್ಲಿ ಹಾಸು ಹೊಕ್ಕಾಗಿ ಸೇರಿಕೊಂಡಿದೆ. ಈ ದೃಷ್ಟಿಯಿಂದಲೂ ಕರ್ನಾಟಕದ ಇತಿಹಾಸದಲ್ಲಿ ಸಾಮಂತಮನೆತನಗಳ ಇತಿಹಾಸವೂ ಪ್ರಮುಖ ಸ್ಥಾನ ಪಡೆಯುತ್ತದೆ. ಕರ್ನಾಟಕದ ಇತಿಹಾಸದಲ್ಲಿ ಇಂಥ ಸಾಮಂತ ಮನೆತನಗಳ ಅನೇಕ ಉದಾಹರಣೆಗಳು ದೊರೆಯುತ್ತವೆ. ಅಲ್ಲದೆ ಈ ಮನೆತನಗಳ ವಿಶದವಾದ ಅಭ್ಯಾಸ ಅನಿವಾರ್ಯವಾಗುತ್ತದೆ. ಈ ದೃಷ್ಟಿಯಿಂದಲೇ ಪ್ರಾಚೀನ ಕರ್ನಾಟಕದಲ್ಲಿ ಪ್ರಸಿದ್ಧಿ ಪಡೆದಿದ್ದ *ಸಿಂದ* ಎಂಬ ಸಾಮಂತಮನೆತನಗಳ ಅಭ್ಯಾಸವನ್ನು ಇಲ್ಲಿ ಕೈಕೊಳ್ಳಲಾಗಿದೆ.

ಇತಿಹಾಸ ಕಾಲದಲ್ಲಿ ಸಾಮಂತಮನೆತನಗಳ ಉಗಮಕ್ಕೆ ಎರಡು ಮುಖ್ಯ ಕಾರಣಗಳನ್ನು ಹೇಳಬಹುದು. ಒಂದೆಂದರೆ ಸಾಮ್ರಾಜ್ಯವು ಬಹಳ ದೊಡ್ಡದಾದಾಗ ಅದನ್ನು ಆಡಳಿತದ ಅನುಕೂಲಕ್ಕೆ ಅನೇಕ ವಿಭಾಗಳಾಗಿ ವಿಂಗಡಿಸಿ, ಒಂದೊಂದು ಪ್ರಾಂತಕ್ಕೂ ಒಬ್ಬ ಆಡಳಿತಾಧಿಕಾರಿಯು ನೇಮಿಸಲ್ಪಡುತ್ತಿದ್ದನು. ಇದು ಅಗತ್ಯವಾದ ಕ್ರಮವೇ ಆಗಿದ್ದಿತು. ವಿಶಾಲವಾದ ಸಾಮ್ರಾಜ್ಯದ ಮೇಲೆ ದೂರದ ರಾಜಧಾನಿಯಿಂದ ಅರಸನೊಬ್ಬನೆ ಆಗಲಿ

ಅಧಿಕಾರಿಗಳ ಮುಖಾಂತರವಾಗಲಿ, ನಿಯಂತ್ರಣವನ್ನು ಇಟ್ಟುಕೊಳ್ಳಲು ಸಾಧ್ಯವಾಗುತ್ತಿರಲಿಲ್ಲ. ಎಷ್ಟೋ ಸಲ ಅರಸನ ಮಕ್ಕಳು, ತಮ್ಮಂದಿರು ಅಥವಾ ಇತರ ಸಂಬಂಧಿಗಳು ಆಡಳಿತಾಧಿಕಾರಿಗಳಾಗಿ ನೇಮಿಸಲ್ಪಡುತ್ತಿದ್ದರು. ಹೀಗೆ ನೇಮಿಸಲ್ಪಟ್ಟ ಆಡಳಿತಾಧಿಕಾರಿಗಳನ್ನು ಬೇರೆ ಬೇರೆ ವಿಭಾಗಳಿಗೆ ವರ್ಗಾಯಿಸುತ್ತಿದ್ದ ಉದಾಹರಣೆಗಳಿದ್ದು, ಅರಸನ ಸಂಬಂಧಿಕರು ಇಂಥ ವಿಭಾಗಗಳ ಮೇಲೆ ತಮ್ಮ ಸಂಪೂರ್ಣ ಅಧಿಕಾರ ಸ್ಥಾಪಿಸಿ ಅದು ತಮ್ಮದೇ ರಾಜ್ಯವೆಂಬಂತೆ ವರ್ತಿಸುತ್ತಿದ್ದರು. ಕಾಲಾಂತರದಲ್ಲಿ ಇವು ಆನುವಂಶಿಕ ಮನೆತನಗಳಾಗಿ ರೂಪಗೊಳ್ಳುತ್ತಿದ್ದವು.

ಇಂಥ ಸಾಮಂತ ಮನೆತನಗಳ ಸೃಷ್ಟಿಗೆ ಇನ್ನೊಂದು ಕಾರಣವೆಂದರೆ ಯುದ್ಧ ಮುಂತಾದ ಸಮಯಗಳಲ್ಲಿ ಅನುಪಮ ಶೌರ್ಯ ತೋರಿದ ದಂಡಾಧಿಕಾರಿಗಳಿಗೆ ಅರಸರು ಬಳುವಳಿಯಾಗಿ ನಿರ್ದಿಷ್ಟ ಪ್ರದೇಶಗಳನ್ನು ಉಂಬಳಿಯಾಗಿ ಕೊಟ್ಟು, ಅವರನ್ನು ಮೇಲಾಧಿಕಾರಿಗಳಾಗಿ ನೇಮಿಸುತ್ತಿದ್ದರು. ಅವು ಅವರಿಗೆ ವೈಯಕ್ತಿಕ ಆಸ್ತಿಯಂತಾಗುತ್ತಿದ್ದವು. ಅವರೇ ಅದರ ಆಡಳಿತ ಅಧಿಕಾರವನ್ನು ನಡೆಸುತ್ತಿದ್ದರು. ಹೀಗೆ ಬಳುವಳಿಯನ್ನು ಪಡೆದ ಅಧಿಕಾರಿಗಳ ವಂಶಸ್ಥರು ಈ ಅಧಿಕಾರವನ್ನು ಉಪಭೋಗಿಸುತ್ತಿದ್ದರು. ಇವೇ ಮುಂದೆ ಸಾಮಂತ ಮನೆತನಗಳಾಗಿ ರೂಪುಗೊಂಡವು. ಎಷ್ಟೋ ಸಲ ಪ್ರಭಾವಶಾಲಿ ಅರಸರು ತಾವು ಯುದ್ಧದಲ್ಲಿ ಗೆದ್ದ ಪ್ರದೇಶಗಳನ್ನು, ಸೋತವರಿಗೆ ತಿರುಗಿ ಒಪ್ಪಿಸಿ ಬಿಡುತ್ತಿದ್ದರು. ಇಂಥವರು ತಮ್ಮ ಪ್ರದೇಶಗಳನ್ನು ಗೆದ್ದ ಅರಸನ ಅಧೀನತ್ವವನ್ನು ಒಪ್ಪಿಕೊಂಡು ತಮ್ಮ ಪ್ರದೇಶದಲ್ಲಿ ಸ್ವತಂತ್ರವಾಗಿ ಆಳುತ್ತಿದ್ದರು. ಇದು ಆಡಳಿತ ಪದ್ಧತಿಯ ಒಂದು ನೀತಿಯೇ ಆಗಿದ್ದಿತು. ಅಂದರೆ ಎಲ್ಲ ಪ್ರಸಂಗಗಳಲ್ಲಿಯೂ ಸೋತವನನ್ನು ನಿರ್ನಾಮ ಮಾಡಿ ಅವನ ರಾಜ್ಯವನ್ನು ವಶಪಡಿಸಿಕೊಳ್ಳುವುದು ರಾಜಧರ್ಮಕ್ಕೆ ವಿರೋಧವಾದುದು ಎಂಬುದು ನಂಬಿಕೆ ಅಷ್ಟೇ ಅಲ್ಲ, ಒಂದು ತತ್ವವೂ ಆಗಿದ್ದಿತು. ಕೌಟಿಲ್ಯನು ಇದನ್ನು ಧರ್ಮವಿಜಯ ಎಂದು ಕರೆದಿದ್ದಾನೆ. ಹೀಗಾಗಿ ಅನೇಕ ಸಲ ಬಲಿಷ್ಠ ಅರಸರು ತಾವು ಗೆದ್ದ ಪ್ರದೇಶವನ್ನು ಸೋತವನಿಗೆ ಮರಳಿ ಒಪ್ಪಿಸುತ್ತಿದ್ದರು. ಇಂಥ ನೀತಿಯನ್ನು ಸಮುದ್ರಗುಪ್ತನು ಅನುಸರಿಸಿದನೆಂದು ಅವನ ಅಲಹಾಬಾದ ಶಾಸನದಿಂದ ತಿಳಿದು ಬರುತ್ತದೆ.[೨] ಬಾದಾಮಿ ಚಾಲುಕ್ಯ ೨ನೇ ಪುಲಕೇಶಿಯ ಉದಾಹರಣೆಯನ್ನು ಗಮನಿಸಬಹುದು.[೩] ಇಂಥ ಪ್ರಸಂಗಗಳು ಸಾಮಂತ ಮನೆತನಗಳ ಉಗಮಕ್ಕೆ ಕಾರಣವಾದವು ಎಂದು ಹೇಳಬಹುದು.

ಕೆಲವು ಆಧುನಿಕ ವಿದ್ವಾಂಸರು ಇಂಥ ಸಾಮಂತ ಮನೆತನಗಳ, ರಾಜ್ಯಗಳ ಉದಯಕ್ಕೆ ತಮ್ಮದೇ ಆದ ಕಾರಣಗಳನ್ನು ಕೊಡುತ್ತಾರೆ. ಉದಾಹರಣೆಗೆ–ಆರ್.ಎಸ್. ಶರ್ಮಾ ಎಂಬ ಪ್ರಸಿದ್ಧ ವಿದ್ವಾಂಸರು ಗುಪ್ತರ ಕಾಲದಲ್ಲಿ ಬ್ರಾಹ್ಮಣರಿಗೆ ಭೂಮಿಯನ್ನು ದಾನ ಮಾಡುತ್ತಿದ್ದ ಕಾರಣಕ್ಕಾಗಿ

ಇಂತಹ ಸಾಮಂತ ಮನೆತನಗಳು ಹುಟ್ಟಿಕೊಂಡವು ಎಂದು ಪ್ರತಿಪಾದಿಸುತ್ತಾರೆ. ಆದರೆ ನಮ್ಮ ಅಭಿಪ್ರಾಯದಲ್ಲಿ ಭೂದಾನಕ್ಕೂ ಸಾಮಂತ ಮನೆತನಗಳ ಉದಯಕ್ಕೂ ಯಾವುದೇ ಸಂಬಂಧವಿಲ್ಲ. ಮುಖ್ಯವಾಗಿ ಬ್ರಾಹ್ಮಣರಿಗೆ ಭೂದಾನ ಮಾಡುತ್ತಿದ್ದುದು ಅವರು ಧಾರ್ಮಿಕ, ಆಧ್ಯಾತ್ಮಿಕ, ಶೈಕ್ಷಣಿಕ ಚಟುವಟಿಕೆಗಳನ್ನು ಪಾಲಿಸಿಕೊಂಡು ಬರುವುದರ ಸಲುವಾಗಿ ಅವರ ಉಪಜೀವನಕ್ಕೆ ಕೊಟ್ಟಂತಹುಗಳು. ಅಂತಹ ಭೂಮಿಯ ಮೇಲೆ ಸಂಪೂರ್ಣ ಒಡೆತನವಿದ್ದರೂ ಅವರು ಆಡಳಿತ ಕೈಗೆ ತೆಗೆದುಕೊಂಡು ಸಾಮಂತರಾಗಿ ಬೆಳೆಯಲು ಅವಕಾಶವಿರಲಿಲ್ಲ. ಅವರಿಗೆ ಭೂಮಿಯ ಉತ್ಪನ್ನವನ್ನು ಉಪಜೀವನಕ್ಕಾಗಿ ಬಳಸಬಹುದಿತ್ತೇ ಹೊರತು ಅವರಿಗೆ ಅದರ ಮೇಲೆ ಆಡಳಿತ್ಮಾತಕ ನಿಯಂತ್ರಣವಿರುತ್ತಿದ್ದಿರಲಿಲ್ಲ. ಆ ಉದ್ದೇಶಕ್ಕಾಗಿ ಗೌಡ, ನಾಡಪ್ರಭು ಇತ್ಯಾದಿ ಅಧಿಕಾರಿಗಳು ಇರುತ್ತಿದ್ದರು. ಉಪಜೀವನಕ್ಕಾಗಿ ಭೂಮಿಯನ್ನು ಪಡೆದುಕೊಂಡ ಬ್ರಾಹ್ಮಣರು ಸಾಮಂತರಾಗಿ ಬೆಳೆದ ಉದಾಹರಣೆಗಳಿಲ್ಲ. ಅಲ್ಲದೆ ಈ ಭೂಮಿದಾನದ ಪದ್ಧತಿ ಎಂದರೆ ಒಂದು ಗ್ರಾಮದಲ್ಲಿ ವಿವಿಧ ಗೋತ್ರಗಳ ವಿಭಿನ್ನ ಕುಟುಂಬಗಳಿಗೆ ಅವರವರ ಭಾಗದ ಭೂಮಿ ದೊರೆಯುತ್ತಿದ್ದಿತು. ಇಂಥ ಪ್ರಸಂಗಗಳಲ್ಲಿ ಹಲವಾರು ಕುಟುಂಬಗಳಲ್ಲಿ ಯಾವುದೇ ಒಂದು ಕುಟುಂಬಕ್ಕೆ ಆಡಳಿತದ ನಿಯಂತ್ರಣ ಹೊಂದಿ ಮೇಲೆರುವ ಅವಕಾಶವಿರಲಿಲ್ಲ. ಭೂದಾನ ಪಡೆದ ಕುಟುಂಬಗಳಲ್ಲೆವು ಸಾಮಂತ ಮನೆತನಗಳಾಗಿ ಮಾರ್ಪಟ್ಟಿದ್ದರೆ ಸಾಮ್ರಾಜ್ಯದ ಆಡಳಿತ ಪರಿಸ್ಥಿತಿಯು ಯಾವ ರೀತಿಯಾಗಿರುತ್ತಿದ್ದಿತೋ ಎಂಬುದು ಊಹಿಸಲು ಅಸಾಧ್ಯ. ಝುಕೀಯಾ ಖಾನಂ ಅನ್ಸಾರಿಯವರು ತಮ್ಮ ಗ್ರಂಥದಲ್ಲಿ ಇಂಥದೇ ಅಭಿಪ್ರಾಯವನ್ನು ಹೊಂದಿದ್ದಾರೆ.[೪]

## ಸಾಮಂತ ಮನೆತನ ಅಭ್ಯಾಸದ ಇತಿಹಾಸ

ಕರ್ನಾಟಕದ ಸಾಮಂತ ಮನೆತನಗಳ ಇತಿಹಾಸವನ್ನು ಅಭ್ಯಸಿಸಲು ನಾಂದಿಯನ್ನು ಹಾಡಿದವರು ಜೆ.ಎಫ್. ಫ್ಲೀಟ್‌ರವರು. ಐ.ಸಿ.ಎಸ್ ಅಧಿಕಾರಿಗಳಾಗಿದ್ದ ಈ ಬ್ರಿಟಿಶ ಅಧಿಕಾರಿಯು ಉತ್ತರ ಕರ್ನಾಟಕದ ಭಾಗದಲ್ಲಿ ರೆವ್ಹಿನ್ಯೂ ಅಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಅಲ್ಲಲ್ಲಿ ಕಾಣಸಿಗುತ್ತಿದ್ದ ಶಿಲಾಲಿಪಿಗಳು ಅವರನ್ನು ಆಕರ್ಷಿಸಿದವು. ಸಂಸ್ಕೃತ ವಿದ್ವಾಂಸರಾಗಿದ್ದ ಅವರು ಕುತೂಹಲಕ್ಕೆಂದು ಅವುಗಳ ಅಭ್ಯಾಸ ಆರಂಭಿಸಿ ಅದರಲ್ಲಿಯೆ ನಿಷ್ಣಾತರೆನಿಸಿದರು. ಕನ್ನಡ ಲಿಪಿ ಮತ್ತು ಭಾಷೆಗಳ ಅಭ್ಯಾಸದಲ್ಲಿ ಪರಿಣಿತರಾಗಿದ್ದರು. ಹಳ್ಳಿ ಹಳ್ಳಿಗಳಲ್ಲಿರುವ ಶಿಲಾಶಾಸನಗಳನ್ನು ಪ್ರತಿಮಾಡಿಕೊಂಡು, ಓದಿ, ಅಭ್ಯಸಿಸಿ ಕರ್ನಾಟಕಚರಿತ್ರೆಯನ್ನು ಬರೆದರು. ಅವರ ಮೇರು ಕೃತಿ[೫] ಇದರ ಪರಿಷ್ಕೃತ ಆವೃತ್ತಿಯು ಮುಂಬಯಿ ಗೆಝೆಟಿಯರ್‌ದ ೧ನೇ ಸಂಪುಟದ ೨ನೆಯ ಭಾಗವಾಗಿ ಪ್ರಕಟವಾಗಿದೆ (೧೮೯೬). ಒಂದು ಶತಮಾನಕ್ಕಿಂತಲೂ ಹಿಂದೆ ಪ್ರಕಟವಾಗಿದ್ದರೂ ಈ

ಕೃತಿ ಕರ್ನಾಟಕದ ಚರಿತ್ರೆಯ ಅಭ್ಯಾಸಕ್ಕೆ ಇನ್ನೂ ಅಡಿಪಾಯದಂತಿದೆ. ಇವರು ಈ ಗ್ರಂಥದಲ್ಲಿ ಪ್ರಮುಖ ಮಾಂಡಲಿಕ ಮನೆತನಗಳಾಗಿದ್ದ ಗೋವೆ ಮತ್ತು ಹಾನಗಲ್ ಕದಂಬರು, ಯಲಬುರ್ಗಿ ಸಿಂದರು, ರಟ್ಟರು, ಗುತ್ತರು ಮುಂತಾದ ಮನೆತನಗಳ ವಂಶಾವಳಿ, ಕಾಲಾನುಕ್ರಮಗಳನ್ನೊಳಗೊಂಡ ಸ್ಥೂಲಚರಿತ್ರೆಯನ್ನು ಬರೆದರು. ಇಂತಹ ಮನೆತನಗಳ ವಿಸ್ತಾರವಾದ ಚರಿತ್ರೆಯ ಮುಂದಿನ ಗ್ರಂಥ ದಿನಕರ ದೇಸಾಯಿಯವರ[೬] ಇದು ಸಾಮಂತ ಮನೆತನಗಳ ವಿಶದವಾದ ಅಭ್ಯಾಸ ಮಾಡಿದ ಮೊದಲ ಕೃತಿ. ಮುಂದೆ ಮುಂಬಯಿಯ ಸೇಂಟ್ ಝೇವಿಯರ್ ಕಾಲೇಜಿನ ಇತಿಹಾಸ ಪ್ರಾಧ್ಯಾಪಕರಾಗಿದ್ದ ಜೆ.ಎಂ. ಮೋರೆಸ್‌ರವರು ವಿವಿಧ ಕದಂಬ ಮನೆತನಗಳ ಅಭ್ಯಾಸವನ್ನು ಒಳಗೊಂಡ[೭] ಗ್ರಂಥವನ್ನು ಪ್ರಕಟಿಸಿದರು. ಈ ಅಭ್ಯಾಸಗಳ ಜೊತೆಗೆ ಮುಖ್ಯ ರಾಜಮನೆತನಗಳನ್ನು ಕುರಿತಾದ ಗ್ರಂಥಗಳಲ್ಲಿಯೂ, ಅನೇಕ ಸಾಮಂತ ಮನೆತನಗಳ ಚರಿತ್ರೆಯು ದೊರೆಯುತ್ತದೆ. ಎ.ಎಸ್. ಅಳತೇಕರ್[೮], ವಿಲಿಯಂ ಕೋಹಿಲೋ[೯] ಶ್ರೀನಿವಾಸ ರಿತ್ತಿ[೧೦], ಬಿ.ಆರ್. ಗೋಪಾಲ[೧೧] ಮುಂತಾದವರ ಗ್ರಂಥಗಳಲ್ಲಿಯೂ ಆಯಾ ಕಾಲ ಖಂಡದಲ್ಲಿ ಅಧಿಕಾರದಲ್ಲಿದ್ದ ವಿವಿಧ ಸಾಮಂತ ಮನೆತನಗಳ ಚರಿತ್ರೆಯೂ ದೊರೆಯುತ್ತದೆ. ನಂತರದ ದಿನಗಳಲ್ಲಿ ಬಿ.ಆರ್. ಗೋಪಾಲ[೧೨] ಅವರು ಉಪಯುಕ್ತವಾದ ಗ್ರಂಥವೊಂದನ್ನು ಪ್ರಕಟಿಸಿದ್ದಾರೆ. ಗುಲಬರ್ಗಾ ವಿಶ್ವವಿದ್ಯಾಲಯದ ಇತಿಹಾಸ ಪ್ರಾಧ್ಯಾಪಕಿಯಾದ ಝುಕಿಯಾ ಖಾನುಮ್ ಅನ್ಸಾರಿ ಅವರು ತಮ್ಮ[೧೩] ಗ್ರಂಥದಲ್ಲಿ ಹಲವಾರು ಸಾಮಂತ ಮನೆತನಗಳ ಚರಿತ್ರೆಯನ್ನು ಒದಗಿಸಿದ್ದಾರೆ. ಬಾಲಾಂಬಾಳ್[೧೪] ಅವರು ಹೆಚ್ಚಾಗಿ ತಮಿಳುನಾಡಿನ ಸಾಮಂತ ಮನೆತನಗಳ ಅಭ್ಯಾಸವನ್ನು ಒಳಗೊಂಡಿದೆ. ಇದೆ ಅವಧಿಯಲ್ಲಿ ಬಿ.ವಿ. ಶಿರೂರ[೧೫] ಚಿಕ್ಕದಾದರು ಉಪಯುಕ್ತವಾದ ಪುಸ್ತಕವೊಂದು ಕರ್ನಾಟಕ ವಿಶ್ವವಿದ್ಯಾಲಯದ ಪ್ರಸಾರಾಂಗದ ಮೂಲಕ ಪ್ರಕಟವಾಗಿದೆ.

ಈ ಕ್ಷೇತ್ರದಲ್ಲಿ ನಂತರ ಬಂದ ಗಮನಾರ್ಹವಾದ ಗ್ರಂಥವೆಂದರೆ, ಚನ್ನಬಸಯ್ಯ ಹಿರೇಮಠ[೧೬] ಅವರ ಕುರುಗೋಡಿನ ಸಿಂದರು. ಈ ಚಿಕ್ಕ ಸಾಮಂತ ಮನೆತನವನ್ನು ಇವರು ತಮ್ಮ ಅಭ್ಯಾಸದ ಮುಖ್ಯ ಗುರಿಯನ್ನಾಗಿ ಇಟ್ಟುಕೊಂಡಿದ್ದರೂ, ಗ್ರಂಥದ ಹರವು ವಿಸ್ತಾರವಾಗಿದೆ. ಕುರುಗೋಡಿನ ಸಿಂದರಲ್ಲದೆ ಉಳಿದೆಲ್ಲ ಸಿಂದ ಮನೆತನಗಳು ಸಿಂದ ಎಂಬ ಹೆಸರಿನ ವ್ಯಕ್ತಿಗಳು ಆಯಾ ಮನೆತನಗಳು ಆಳುತ್ತಿದ್ದ ಪ್ರದೇಶಗಳು, ಆಯಾ ಪ್ರದೇಶಗಳಲ್ಲಿ ಪ್ರಬಲವಿದ್ದ ಆಡಳಿತ ವ್ಯವಸ್ಥೆ, ಧರ್ಮ, ಸಾಹಿತ್ಯ ಇತ್ಯಾದಿಗಳ ಕುಲಕೂಂಷವಾದ ಮತ್ತು ವಿಸ್ತಾರವಾದ ಚರ್ಚೆಯನ್ನು ಇದು ಒಳಗೊಂಡಿದೆ. ಅಲ್ಲದೆ ಈ ವಿಷಯಕ್ಕೆ ಸಂಬಂಧಿಸಿದ ಅನೇಕ ಶಾಸನ ಪಾಠಗಳನ್ನು

ಇವರು ಗ್ರಂಥದಲ್ಲಿ ಸೇರಿಸಿದ್ದಾರೆ. ಎಷ್ಟೋ ಸಲ ಗ್ರಂಥದ ಮುಖ್ಯ ವಿಷಯಕ್ಕೆ ಸಂಬಂಧಿಸಿರದ ಚರ್ಚೆಗಳು ಇಲ್ಲಿ ಇವೆ ಎನಿಸಿದರೂ ಸಾಮಂತ ಮನೆತನಗಳ ಇತಿಹಾಸದ ಅಭ್ಯಾಸಕ್ಕೆ ಇದೊಂದು ಅತ್ಯಂತ ಪ್ರಮುಖವಾದ ಅಗತ್ಯವಾದ ಆಕರ ಗ್ರಂಥವಾಗಿದೆ. ಆದ್ದರಿಂದ ಇಂಥ ಅಭ್ಯಾಸಗಳು ಒಂದು ದೃಷ್ಟಿಯಿಂದ ಪುನರುಕ್ತಿ ಎನಿಸಿದರೂ ಅವುಗಳ ಮಹತ್ವವನ್ನು ಅಲ್ಲಗಳೆಯುವಂತಿಲ್ಲ. ಈ ದೃಷ್ಟಿಯಿಂದಲೆ ಪ್ರಸಕ್ತ ಸಿಂದ ಮನೆತನಗಳ ಅಭ್ಯಾಸವನ್ನು ಇಲ್ಲಿ ಕೈಗೊಳ್ಳಲಾಗಿದೆ.

ಈ ಅಭ್ಯಾಸಕ್ಕೆ ಮೂಲ ಸಾಧನ ಸಾಮಗ್ರಿಗಳು ಮುಖ್ಯವಾಗಿ ಶಾಸನಗಳು. ಶಾಸನಗಳೆಂದರೆ. ಒರತೆಯ ನೀರಿದ್ದಂತೆ ಬಗೆದಷ್ಟೂ ಹೊಸ ವಿಷಯಗಳು ಬೆಳಕಿಗೆ ಬಂದೇ ಬರುತ್ತವೆ. ವಿವಿಧ ದೃಷ್ಟಿಕೋನಗಳಿಂದ ಅಭ್ಯಾಸ ಮಾಡಿದಾಗ ಹೊಸ ಹೊಸ ಅರ್ಥಗಳು, ವಿಷಯಗಳು ಸ್ಫುಟವಾಗುತ್ತವೆ. ಹೊಸ ಹೊಸ ಶಾಸನಗಳು ದೊರೆತಾಗ ವಂಶಾವಳಿ, ಕಾಲನುಕ್ರಮ, ಅರ್ಥವ್ಯವಸ್ಥೆ, ಧರ್ಮ, ಸಂಸ್ಕೃತಿಗಳ ಬಗ್ಗೆ ಹೊಸ ವಿಷಯಗಳು ದೊರೆಯುತ್ತವೆ. ಇವೆಲ್ಲವುಗಳಿಂದ ಈ ವಿಷಯಗಳ ಪುನರ ಅಭ್ಯಾಸವು ಫಲಪ್ರದವಾಗುತ್ತದೆ.

**ಪ್ರಸಕ್ತ ಅಭ್ಯಾಸದ ಮೂಲ ಸಾಧನ ಸಾಮಗ್ರಿಗಳು**

ಸಿಂದರನ್ನು ಕುರಿತ ಬರಹಗಳಲ್ಲಿ ಪ್ರಮುಖವಾದವು ಮೇಲೆ ಉಲ್ಲೇಖಿಸಿದ ಫ್ಲೀಟ ಅವರ ಗ್ರಂಥವಲ್ಲದೇ ೧೯೩೫ ರಲ್ಲಿ ಪ್ರಕಟವಾದ ದಿನಕರ ದೇಸಾಯಿಯವರ ಗ್ರಂಥ ಮತ್ತು ೧೯೮೭ ರಲ್ಲಿ ಪ್ರಕಟವಾದ ಬಿ.ಆರ್. ಗೋಪಾಲ ಅವರ ಗ್ರಂಥ, ಚನ್ನಬಸಯ್ಯ ಹಿರೇಮಠ ಅವರ ಗ್ರಂಥ (೧೯೯೫) ಇವನ್ನು ಬಿಟ್ಟರೆ ಕೆಲವು ಇತ್ತೀಚಿನ ಗ್ರಂಥಗಳಲ್ಲಿ ಈ ಮಾಂಡಲೀಕರ ಬಗ್ಗೆ ಅಲ್ಪ ಸ್ವಲ್ಪ ಮಾಹಿತಿಗಳು ದೊರೆಯುತ್ತವೆ. ಇವೆಲ್ಲದೆ ಎಪಿಗ್ರಾಫಿಯಾ ಇಂಡಿಕಾ[೧೭], ಎಪಿಗ್ರಾಫಿಯಾ ಕರ್ನಾಟಿಕಾ[೧೮] ಕನ್ನಡ ಸಂಶೋಧನ ಸಂಸ್ಥೆಯ (ಕ.ವಿ.ವಿ) ಕರ್ನಾಟಕ ಇನಸ್ಕ್ರಿಪ್ಸನ್ಸ್[೧೯] ಹಂಪಿ ವಿಶ್ವವಿದ್ಯಾಲಯದ ಶಾಸನ ಸಂಪುಟಗಳು[೨೦] ಸೌಥ್ ಇಂಡಿಯನ್ ಇನಸ್ಕ್ರಿಪ್ಸನ್ಸ್ [೨೧] ಇತ್ಯಾದಿ ಶಾಸನ ಸಂಪುಟಗಳಲ್ಲಿ ಸಿಂದ ಮನೆತನಗಳಿಗೆ ಸಂಬಂಧಿಸಿದ ಶಾಸನಗಳು ದೊರೆಯುತ್ತವೆ. ಇವಲ್ಲದೇ ಕರ್ನಾಟಕ ಭಾರತಿ, ಪ್ರಭುದ್ಧ ಕರ್ನಾಟಕ, ಇತಿಹಾಸ ದರ್ಶನ ಮುಂತಾದ ನಿಯತಕಾಲಿಕೆಗಳಲ್ಲಿಯೂ ಆಗಾಗ ಕೆಲವು ಶಾಸನಗಳು, ಉಲ್ಲೇಖಗಳು ಪ್ರಕಟಿಸಲ್ಪಟ್ಟಿವೆ. ಇವುಗಳಲ್ಲಿಯ ಹೊಸ ವಿಷಯಗಳೊಂದಿಗೆ ಈ ಮನೆತನಗಳ ಚರಿತ್ರೆಯನ್ನು ಈ ಪ್ರಬಂಧದಲ್ಲಿ ಪ್ರಸ್ತುತಪಡಿಸಲಾಗಿದೆ.

ಸಾಮಾನ್ಯವಾಗಿ ಇತಿಹಾಸ ರಚನೆಗೆ ದೇವಾಲಯ ಮುಂತಾದ ವಾಸ್ತು ನಿರ್ಮಿತಿಗಳು, ನಾಣ್ಯಗಳು, ಸಾಹಿತ್ಯ ಕೃತಿಗಳು ಸಾಮಗ್ರಿಯನ್ನು ಒದಗಿಸುತ್ತವೆ. ಸಿಂದ ಮನೆತನಗಳ ಕಾಲದಲ್ಲಿ ಕೆಲವು ದೇವಾಲಯಗಳು ನಿರ್ಮಿತವಾಗಿವೆ. ಇವುಗಳು ಅಂದಿನ ಧಾರ್ಮಿಕ ಸ್ಥಿತಿಗತಿಗಳನ್ನು ಅರಿಯಲು ಸಹಾಯವಾಗುತ್ತವೆ. ಈ ಕಾಲದಲ್ಲಿ ಹೆಚ್ಚಾಗಿ ನಿರ್ಮಿತವಾದ ದೇವಾಲಯಗಳು, ಶೈವ ದೇವಾಲಯಗಳು, ಕಾಳಾಮುಖ ಯತಿಗಳಿಗೆ ದಾನವಾಗಿ ಕೊಡಲ್ಪಟ್ಟವುಗಳು ಇವುಗಳ ವಿಸ್ತೃತ ಸಮೀಕ್ಷೆಯನ್ನು ಮುಂದಿನ ಸಂಬಂಧಿತ ಅಧ್ಯಾಯದಲ್ಲಿ ಮಾಡಲಾಗುವುದು. ಸಿಂದರ ಕಾಲದ ನಾಣ್ಯಗಳು ಈವರೆಗೆ ಎಲ್ಲಿಯೂ ದೊರೆತಿಲ್ಲ. ಶಾಸನಗಳಲ್ಲಿ ನಾಣ್ಯಗಳ ಹೆಸರುಗಳು ಬರುತ್ತವೆಯಾದರೂ ಸಿಂದ ಸಾಮಂತರ ಹೆಸರಿನ ನಾಣ್ಯಗಳು ಯಾವುದು ದೊರೆತಿಲ್ಲ. ಇವರನ್ನು ಕುರಿತಾದ ಹೆಚ್ಚಿನ ಮಾಹಿತಿಯನ್ನು ಒದಗಿಸುವ ಸಾಹಿತ್ಯ ಕೃತಿಗಳು ಅಷ್ಟಾಗಿ ಇಲ್ಲ.

## ಶಾಸನಗಳ ಅಭ್ಯಾಸ

ಕನ್ನಡ ನಾಡಿನ ಶಾಸನಗಳ ಅಭ್ಯಾಸಕ್ಕೆ ಸುಧೀರ್ಘವಾದ ಇತಿಹಾಸವಿದೆ. ಮೇಲೆ ಹೇಳಿದಂತೆ ಈ ಅಭ್ಯಾಸವನ್ನು ಶಾಸ್ತ್ರೀಯವಾಗಿ ಆರಂಭಿಸಿದವರು ಜೆ. ಎಫ್. ಫ್ಲೀಟರವರು ಅವರು ಮೂಲ ಶಾಸನಗಳನ್ನು ಸ್ವತಃ ಪ್ರತಿ ಮಾಡಿಕೊಂಡು, ಅಭ್ಯಸಿಸಿ ಅನೇಕ ಲೇಖನಗಳನ್ನು ಬಾರ್ನೆಟ್ .ಎಲ್.ಡಿ., ಇಂಡಿಯನ್ ಎಂಟಿಕ್ವರಿ[೨೨], ಜರ್ನಲ್ ಆಫ್ ಬಾಂಬೆ ಬ್ರ್ಯಾಂಚ ಆಫ್ ರಾಯಲ್ ಏಶಿಯಾಟಿಕ್ ಸೊಸೈಟಿ[೨೩] ಮತ್ತು ಬಾರ್ನೆಟ್ .ಎಲ್.ಡಿ., ಎಪಿಗ್ರಾಫಿಯಾ ಇಂಡಿಕಾ[೨೪] ಎಂಬ ನಿಯತಕಾಲಿಕೆಗಳಲ್ಲಿ ಪ್ರಕಟಿಸಿದರು. ಇಂತಹ ಶಾಸನಗಳಲ್ಲಿ ಸಿಂದ ಮನೆತನಗಳ ಅನೇಕ ಶಾಸನಗಳು ಇವೆ. ಅದೇ ರೀತಿ ಎಲ್.ಡಿ. ಬಾರ್ನೆಟ್ ಎಂಬ ಬ್ರಿಟಿಶ ವಿದ್ವಾಂಸರು ಕರ್ನಾಟಕದ ಅನೇಕ ಶಾಸನಗಳನ್ನು ಎಪಿಗ್ರಾಫಿಯಾ ಇಂಡಿಕಾ[೨೫] ದಲ್ಲಿ ಪ್ರಕಟಿಸಿದರು. ಕರ್ನಾಟಕದ ಶಾಸನಗಳ ಅಭ್ಯಾಸಕ್ಕೆ, ತನ್ಮೂಲಕ ಕರ್ನಾಟಕದ ಚರಿತ್ರೆಯನ್ನು ಅಭ್ಯಸಿಸಲಿಕ್ಕೆ ಎಪಿಗ್ರಾಫಿಯಾ ಕರ್ನಾಟಿಕಾ[೨೬] ಎಂಬ ಅತ್ಯಂತ ಪ್ರಮುಖವಾದ ಆಕರ ಸಾಹಿತ್ಯ ಪ್ರಕಟಿಸಲಾಗಿದೆ. ಕರ್ನಾಟಕದ ಶಾಸನಗಳ ಅಭ್ಯಾಸಕ್ಕೆ ಅಪೂರ್ವವಾದ ಈ ಕೊಡುಗೆಯನ್ನಿತ್ತವರು ಹಿಂದಿನ ಮೈಸೂರು ಸಂಸ್ಥಾನದಲ್ಲಿ ಪುರಾತತ್ವ ನಿರ್ದೇಶಕರಾಗಿದ್ದ ಬಿ.ಎಲ್. ರೈಸರವರು. ಎಪಿಗ್ರಾಫಿಯಾ ಕರ್ನಾಟಿಕಾ[೨೭] ಎಂಬ ಮಾಲಿಕೆಯಲ್ಲಿ ಅವರು ಹಳೆಯ ಮೈಸೂರು ಸಂಸ್ಥಾನದ ೧೨ ಜಿಲ್ಹೆಗಳಲ್ಲಿ ದೊರೆತ ಸಹಸ್ರಾರು ಶಾಸನಗಳನ್ನು ೧೨ ಸಂಪುಟಗಳಲ್ಲಿ ಪ್ರಕಟಿಸಿ ಕರ್ನಾಟಕದ ಚರಿತ್ರೆಯ ಅಭ್ಯಾಸಿಗಳಿಗೆ ಒಂದು ಅಖಂಡ ನಿಧಿಯನ್ನೇ ಒದಗಿಸಿದ್ದಾರೆ. ಇವುಗಳಲ್ಲಿ ಬಹಳಷ್ಟು ಶಾಸನಗಳು ವಿಶೇಷವಾಗಿ ಶಿವಮೊಗ್ಗ ಜಿಲ್ಲೆ ಶಾಸನಗಳು ಪ್ರಸ್ತುತ ಅಭ್ಯಾಸಕ್ಕೆ ಅಗತ್ಯವಾದ ಮಾಹಿತಿಯನ್ನು ಒದಗಿಸುತ್ತವೆ.

ಇದೇ ರೀತಿಯಾಗಿ ಭಾರತ ಸರ್ಕಾರದ ಸೌಥ ಇಂಡಿಯನ್ ಇನಸ್ಕ್ರೀಪ್ಸನ್[೨೮] ಎಂಬ ಮಾಲಿಕೆಯ ಸಂಪುಟಗಳಲ್ಲಿ ಬಹಳಷ್ಟು ಮಾಹಿತಿಯಿದೆ. ಉದಾಹರಣೆಗೆ ಈ ಮಾಲಿಕೆಯ ೯ನೆಯ ಸಂಪುಟ ೧ ನೆಯ ಭಾಗದಲ್ಲಿ ಬಳ್ಳಾರಿ ಜಿಲ್ಲೆಯ ಅನೇಕ ಶಾಸನಗಳು ಪ್ರಕಟವಾಗಿದ್ದು, ಕುರುಗೋಡು ಸಿಂದ ಮನೆತನದ ಅಭ್ಯಾಸಕ್ಕೆ ಬಹಳಷ್ಟು ಮಹತ್ವದ್ದಾಗಿವೆ. ಈ ಮಾಲಿಕೆಯ ಹೊಸ ಹೊಸ ಸಂಪುಟಗಳು ಪ್ರಕಟವಾಗುತ್ತಿದ್ದು ಹೊಸ ಹೊಸ ವಿಷಯಗಳು ದೊರೆಯುತ್ತಲೇ ಇವೆ. ಇವು ಎಲ್ಲರಿಗೂ ಪರಿಚಿತವಾದ ಶಾಸನ ಸಂಪುಟಗಳಾದರೆ, ಇತ್ತೀಚಿನ ದಿನಗಳಲ್ಲಿ ಹಲವಾರು ಶಾಸನ ಸಂಪುಟಗಳು ಹೊರ ಬಂದಿವೆ. ಅವುಗಳಲ್ಲಿ ಧಾರವಾಡದ ಕರ್ನಾಟಕದ ವಿಶ್ವವಿದ್ಯಾಲಯದ ಕನ್ನಡ ಸಂಶೋಧನ ಸಂಸ್ಥೆಯ ಕರ್ನಾಟಕ ಇನಸ್ಕ್ರಿಪಶನ್[೨೯] ಎಂಬ ಸಂಪುಟಗಳನ್ನು ಹೆಸರಿಸಬಹುದು. ಹಂಪಿಯ ಕನ್ನಡ ವಿಶ್ವವಿದ್ಯಾಲಯದಿಂದ ಪ್ರಕಟಗೊಂಡ ಶಾಸನ ಸಂಪುಟಗಳು ನಮ್ಮ ಅಭ್ಯಾಸಕ್ಕೆ ಒದಗಿಸಿರುವ ಹೊಸ ಸಾಮಗ್ರಿಗಳು. ರಮೇಶ  ಕೆ.ವಿ. ಇನ್ಸ್ಕೃಪಿಶನ್ಸ್ ಆಫ್ ವೆಸ್ಟರ್ನ ಗಂಗಸ್[೩೦] ನವದೆಹಲಿಯ ಐಸಿಎಚ್‌ಆರ್ ಎಂಬ ಸಂಸ್ಥೆಯಿಂದ ಹೊರಬಂದ ಜಿ.ಎಸ್. ಗಾಯಿ ಅವರ *ಕದಂಬರ ಶಾಸನಗಳು*[೩೧] ಮತ್ತು *ಬಾದಾಮಿ ಚಾಲುಕ್ಯರ* ಶ್ರೀನಿವಾಸ ಪಾಡಿಗಾರ[೩೨] ಅವರ ಶಾಸನಗಳ ಸಂಪುಟಗಳು ಹೆಚ್ಚಿನ ಮಾಹಿತಿ ಒದಗಿಸುತ್ತವೆ. ತೀರಾ ಇತ್ತೀಚಿಗೆ ಮೈಸೂರು ವಿಶ್ವವಿದ್ಯಾಲಯವು ಕಲ್ಯಾಣ ಚಾಲುಕ್ಯ ಮತ್ತು ರಾಷ್ಟ್ರಕೂಟರ ಶಾಸನಗಳ ಸಂಪುಟಗಳನ್ನು ಪ್ರಕಟಿಸಿದ್ದಾರೆ. ಇವುಗಳಿಂದಲೂ ಹೊಸ ಮಾಹಿತಿ ದೊರೆಯುತ್ತದೆ. ಇವಲ್ಲದೆ ಹಲವು ವಿದ್ವಾಂಸರು ಸ್ವತಃ ಶಾಸನ ಸಂಪುಟಗಳನ್ನು ಪ್ರಕಟಿಸಿದ್ದಾರೆ. ಅಂಥವರಲ್ಲಿ ಪಿ.ಬಿ. ದೇಸಾಯಿಯವರ ಜೈನಿಜಮ್ ಇನ್ ಸೌಥ್ ಇಂಡಿಯಾ ಆ್ಯಂಡ್ ಜೈನ ಎಫಿಗ್ರಾಫಿಯಾ[೩೩] ಮತ್ತು ಶ್ರೀನಿವಾಸ ರಿತ್ತಿ ಅವರ., ಇನ್‌ಸ್ಕ್ರೀಪನ್ಸ ಫ್ರಾಮ್ ನಾಂದೇಡ ಡಿಸ್ಟ್ರೀಕ್ಟ್[೩೪], ಇನ್‌ಸ್ಕ್ರೀಪನ್ಸ ಫ್ರಾಮ್ ಸೊಲ್ಲಾಪೂರ ಡಿಸ್ಟ್ರೀಕ್ಟ್[೩೫] ಮತ್ತು ಇನ್‌ಸ್ಕ್ರೀಪನ್ಸ ಫ್ರಾಮ್ ಕೊಲ್ಹಾಪುರ ಡಿಸ್ಟ್ರೀಕ್ಟ್[೩೬] ಎಂಬ ಗ್ರಂಥಗಳು ಉಪಯುಕ್ತ ವಿಷಯಗಳನ್ನೊಳಗೊಂಡಿವೆ. ಇವಲ್ಲದೆ ಪ್ರಬುದ್ಧ ಕರ್ನಾಟಕ, ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ಮಾನವಿಕ ಕರ್ನಾಟಕ, ಕರ್ನಾಟಕ ಭಾರತಿ, ಇತಿಹಾಸ ದರ್ಶನ ಮುಂತಾದ ನಿಯತಕಾಲಿಕೆಗಳಲ್ಲಿ ಆಗಾಗ ಪ್ರಕಟಗೊಂಡಿರುವ ಶಾಸನಗಳು ಮತ್ತು ಅವುಗಳ ಕುರಿತು ಲೇಖನಗಳು ನಮ್ಮ ಅಭ್ಯಾಸಕ್ಕೆ ಸಹಾಯವನ್ನು ಒದಗಿಸುತ್ತವೆ.

ಈ ಸಂದರ್ಭದಲ್ಲಿ ಭಾರತ ಸರ್ಕಾರದ ಪ್ರಕಟಣೆಗಳಾದ ಎನುವಲ್ ರಿಪೋರ್ಟ್ಸ್‌ಆನ್ ಸೌಥ್ ಇಂಡಿಯನ್ ಎಫಿಗ್ರಾಫಿಯಾ, ಎನುವಲ್ ರಿಪೋರ್ಟ್ಸ್ ಆನ್ ಇಂಡಿಯನ್ ಎಫಿಗ್ರಾಫಿ[೩೭] ಎಂಬ ವಾರ್ಷಿಕ ವರದಿಗಳನ್ನು ಹೆಸರಿಸಬೇಕು. ಇವುಗಳಲ್ಲಿ ಶಾಸನಗಳ ಪೂರ್ಣ ಪಾಠಗಳು

ಕೊಡಲ್ಪಟ್ಟಿರದಿದ್ದರೂ. ಅವುಗಳನ್ನು ಕುರಿತಾದ ಚರ್ಚೆ ಮತ್ತು ಸಾರಾಂಶಗಳನ್ನು ಒಳಗೊಂಡಿರುತ್ತವೆ. ಇವು ನಮ್ಮ ಅಭ್ಯಾಸಕ್ಕೆ ಅಮೂಲ್ಯ ಸಾಧನವಾಗಿವೆ. ಉದಾಹರಣೆಗೆ ರಾಯಚೂರ, ಕೊಪ್ಪಳ, ಗುಲಬರ್ಗಾ ಮುಂತಾದ ಜಿಲ್ಲೆಯ ಶಾಸನಗಳ ಸಾರಾಂಶಗಳು ಆಯಾ ವರ್ಷದ ವರದಿಗಳಲ್ಲಿವೆ. ಇವುಗಳಲ್ಲಿ ಅನೇಕ ಶಾಸನಗಳು ಸಿಂದರ ಬಗ್ಗೆ ಹೊಸ ವಿಷಯಗಳನ್ನು ತಿಳಿಸುತ್ತವೆ.

ಇದು ನಮ್ಮ ಅಭ್ಯಾಸಕ್ಕೆ ಸಾಧನ ಸಾಮಗ್ರಿಗಳನ್ನು ಒದಗಿಸುವ ಆಕರಗಳ ಸ್ಥೂಲ ಪರಿಚಯವಷ್ಟೆ. ಇನ್ನೂ ಅನೇಕ ಚಿಕ್ಕ ಪುಟ್ಟ ಶಾಸನ ವಿಷಯಕ ಪ್ರಕಟಣೆಗಳು ಆಗಾಗ ಬರುತ್ತಲೇ ಇರುತ್ತವೆ. ನಮಗೆ ದೊರೆತ ಅಂಥವುಗಳನ್ನೆಲ್ಲ ಪ್ರಸಂಗಾನುಸಾರವಾಗಿ ಪ್ರಸ್ತುತ ಪ್ರಬಂಧಗಳಲ್ಲಿ ಬಳಿಸಿಕೊಳ್ಳಲಾಗಿದೆ.

## ಅಭ್ಯಾಸಕ್ಕಾಗಿ ಆರಿಸಿಕೊಂಡ ಸಿಂದ ಮನೆತನಗಳ ಪ್ರಮುಖ ಶಾಸನಗಳು, ಅವುಗಳ ಸ್ಥೂಲ ಪರಿಚಯ

ಸಿಂದ ಮನೆತನಗಳ ಪ್ರಾಚೀನತೆ ಬಹಳಷ್ಟು ಹಿಂದಕ್ಕೆ ಹೋಗುತ್ತದೆ. ಬನವಾಸಿ ಕದಂಬ ಮತ್ತು ಚಾಲುಕ್ಯರ ಕಾಲದಲ್ಲಿ ಬರುವ ಸೇಂದ್ರಕರು ಸಿಂದ ವಂಶದ ಪ್ರಾಚೀನತಮ ವಂಶವಿರಬಹುದೆಂದು ಊಹಿಸಲಾಗಿದೆ. ಆಧಾರಗಳಿವೆ ಈ ವಿಷಯವನ್ನು ಮುಂದೆ ಚರ್ಚಿಸಲಾಗುವುದು. ಕದಂಬರ ಮಯೂರವರ್ಮನ[೩೮] ಶಾಸನದಲ್ಲಿ ಬರುವ ಸಯಿಂದಕ ಎಂಬ ಮನೆತನವು ಸೇಂದ್ರಕ ಮನೆತನವೆಂದೇ ಊಹಿಸಲಾಗಿದೆ. ಪಲ್ಲವ ಸಿಂಹವರ್ಮನ ಸಕ್ಕರೆಪಟ್ಟಣ ತಾಮ್ರ ಶಾಸನದಲ್ಲಿ ಸೇಂದ್ರಕ ರಾಜ್ಯ ಎಂಬ ಉಲ್ಲೇಖ ಬರುತ್ತದೆ. ಈ ಶಾಸನವು ಕ್ರಿ.ಶ. ೫ನೇ ಶತಮಾನಕ್ಕೆ ಸೇರಿದ್ದು, ಇದು ಸೇಂದ್ರಕ ರಾಜ್ಯದಲ್ಲಿಯ ಪ್ರಾಚೀನತಮ ಉಲ್ಲೇಖವೆಂದು ಹೇಳಬಹುದು. ಸೇಂದ್ರಕ ರಾಜ್ಯದಲ್ಲಿಯ 'ವಳವಿಲ್ಲಿ', 'ವಳ್ಳವಿಳ್ಳಿ' ಎಂಬ ಅಗ್ರಹಾರದ ಉಲ್ಲೇಖ ಬರುತ್ತದೆ. ಸುಮಾರು ೬-೭ ಶತಮಾನಕ್ಕೆ ಸೇರಿದ ಶಿರಗುಪ್ಪಿ ಶಾಸನದಲ್ಲಿ ವಾಣಸತ್ತಿಯರಸ ಎಂಬ ಸಾಮಂತನ ಹೆಸರಿದ್ದು ಇವನು ಸೇಂದ್ರಕ ವಂಶಕ್ಕೆ ಸೇರಿದವನು ಎಂದು ಊಹಿಸಲಾಗಿದೆ.[೩೯] ಸುಮಾರು ಇದೇ ಕಾಲಕ್ಕೆ ಸೇರಿದ ಬಾದಾಮಿ ಚಾಲುಕ್ಯ ವಂಶದ ೧ನೇ ವಿಕ್ರಮಾದಿತ್ಯನ ಒಂದು ಶಾಸನದಲ್ಲಿ 'ಕಲಿ ಸಿಂದ' ಎಂಬವನ ಹೆಸರಿದೆ.[೪೦] ಇವನ ಬಿನ್ನಹದ ಮೇರೆಗೆ ಅರಸನಾದ ವಿಕ್ರಮಾದಿತ್ಯನು ಕೆಲವೊಂದು ದಾನಗಳನ್ನು ಮಾಡಿದನೆಂದು ಇದರಲ್ಲಿ ಹೇಳಲಾಗಿದೆ. ಶಾಸನವು ಬಹಳಷ್ಟು ಒಡೆದು ಹೋಗಿದ್ದು, ಹೆಚ್ಚಿನ ವಿವರಗಳು ಸಿಗುವುದಿಲ್ಲ. ಮುಖ್ಯವಾಗಿ ಗಮನಿಸಬಹುದಾದ ಅಂಶ ಎಂದರೆ 'ಸಿಂದ' ಎಂಬ ಹೆಸರಿನ ಪ್ರಾಚೀನತಮ ಉಲ್ಲೇಖವಿಲ್ಲಿದೆ.

ಇದೇ ಮನೆತನದ ಮಂಗಲರಾಜ ಅಥವಾ ಮಂಗಲೇಶನ ಶಾಸನದಲ್ಲಿ ಸೆಂದ್ರಕ ಕಣ್ಣಶಕ್ತಿ ಮತ್ತು ರವಿಶಕ್ತಿ ಎಂಬ ಹೆಸರುಗಳು ಸಿಗುತ್ತವೆ.[೪೧] ಲಕ್ಷ್ಮೇಶ್ವರದ ೨ ನೆಯ ಪುಲಕೇಶಿಯ ಶಾಸನದಲ್ಲಿ ವಿಜಯಶಕ್ತಿ, ದುರ್ಗಶಕ್ತಿ ಮತ್ತು ಕುಂದಶಕ್ತಿ ಎಂಬ ಸೆಂದ್ರಕ ಹೆಸರುಗಳು ಬರುತ್ತವೆ.[೪೨] ಇವೆಲ್ಲ ಸಿಂದ ಮನೆತನಗಳ ಪ್ರಾಚೀನತೆಯನ್ನು ಅಭ್ಯಸಿಸಲು ಉಪಯುಕ್ತ ಆಕರಗಳಾಗಿವೆ.

ಸಿಂದ ಮನೆತನಗಳು ಪ್ರಮುಖವಾಗಿ ಬೆಳಕಿಗೆ ಬಂದಿದ್ದು ರಾಷ್ಟ್ರಕೂಟರ ಮತ್ತು ಕಲ್ಯಾಣ ಚಾಲುಕ್ಯರ ಕಾಲದಿಂದ, ಕಲಚುರಿ, ಹೊಯ್ಸಳ ಮತ್ತು ಸೇವುಣ ರಾಜ್ಯಗಳಲ್ಲಿಯೂ ಅವರು ಪ್ರಬಲರಾಗಿದ್ದರು. ಈ ಕಾಲದಲ್ಲಿಯ ಅವರ ಅನೇಕ ಶಾಸನಗಳು ದೊರೆಯುತ್ತವೆ.

**ಬೆಳಗುತ್ತಿ ಸಿಂದರು**

ಸಿಂದ ವಂಶವು ಮೂಲತಃ ಒಂದೇ ಇದ್ದು ಕಾಲಾಂತರದಲ್ಲಿ ವಿವಿಧ ಶಾಖೆಗಳಾಗಿ ವಿಭಾಗಿಸಲ್ಪಟ್ಟವು. ಹೆಚ್ಚು ಕಡಿಮೆ ಒಂದೇ ಕಾಲಕ್ಕೆ ಹೀಗೆ ವಿಭಜಿಸಲ್ಪಟ್ಟ ಮನೆತನಗಳು ಬೇರೆ ಬೇರೆ ಪ್ರದೇಶಗಳಲ್ಲಿ ಸಾಮಂತರಾಗಿ ಆಳತೊಡಗಿದವು. ಪ್ರಸ್ತುತ ಅಭ್ಯಾಸಕ್ಕೆ ಆರಿಸಿಕೊಂಡ ಬೆಳಗುತ್ತಿ, ಯಲಬುರ್ಗಿ, ಬಾಗಡಗೆ, ಕುರುಗೋಡು ಮತ್ತು ಪ್ರತ್ಯಂಡಕ ಈ ಮನೆತನಗಳ ಪ್ರಮುಖ ಶಾಸನಗಳ ಸ್ಥೂಲ ಪರಿಚಯವನ್ನು ಇಲ್ಲಿ ಮಾಡಲಾಗಿದೆ. ಬೆಳಗುತ್ತಿ ಸಿಂದರು ಕರ್ನಾಟಕ ಚರಿತ್ರೆಯಲ್ಲಿ ರಾಷ್ಟ್ರಕೂಟ, ಹೊಯ್ಸಳ, ಕಲ್ಯಾಣ ಚಾಲುಕ್ಯ ಕಾಲದಲ್ಲಿ ಪ್ರಮುಖ ಪಾತ್ರವಹಿಸಿದ್ದರು. ಕೆಲವು ಶಾಸನಗಳಲ್ಲಿ ಕರಹಾಟಪುರವರಾಧೀಶ್ವರ ಎಂದರೆ ಕರ್ಹಾಟದ ಅಧಿಪತಿ ಎಂದೇ ಕರೆಯಲ್ಪಟ್ಟಿದ್ದಾರೆ. ಕರಹಾಟವು ಇಂದಿನ ಮಹಾರಾಷ್ಟ್ರ ರಾಜ್ಯದಲ್ಲಿಯ ಕರ್ಹಾಡ (ಕರಾಡ) ಎಂಬ ಊರು. ನಮಗೆಲ್ಲ ತಿಳಿದಂತೆ ಕರ್ಹಾಟವು ಕರ್ಹಾಡ ಇನ್ನೊಂದು ಪ್ರಮುಖ ಸಾಮಂತ ಮನೆತನವೆನಿಸಿಕೊಂಡಿದ್ದ. ಶಿಲಾಹಾರ ಮನೆತನದ ಮೂಲಸ್ಥಳ. ಸಿಂದರಿಗೂ ಈ ಊರಿಗೂ ಹೇಗೆ ಸಂಪರ್ಕ ಒದಗಿತೋ ತಿಳಿಯದು. ಬಹುಶಃ ಮೂಲತಃ ಇವರು ಈ ಪ್ರದೇಶಕ್ಕೆ ಸೇರಿದ್ದು ನಂತರ ಶಿವಮೊಗ್ಗ ಪ್ರದೇಶಕ್ಕೆ ವಲಸೆ ಬಂದಿರಬೇಕು. ಈ ನಿರ್ಣಯಕ್ಕೆ ಬರಲು ಸ್ಪಷ್ಟವಾದ ಸಾಕ್ಷ್ಯಾಧಾರಗಳು ಇಲ್ಲ.

ಶಿವಮೊಗ್ಗ ಜಿಲ್ಲೆಯ ಹೊನ್ನಾಳಿ ತಾಲೂಕಿನ ಬೆಳಗುತ್ತಿ ಪ್ರದೇಶವು ಇವರ ಪ್ರಮುಖ ಕಾರ್ಯಕ್ಷೇತ್ರವಾಗಿದ್ದಿತು. ಇವರ ಶಾಸನಗಳು ಹೆಚ್ಚಾಗಿ ಈ ಪ್ರದೇಶದಲ್ಲಿ ದೊರೆತಿವೆ. ಈ ಮನೆತನಕ್ಕೆ ಸಂಬಂಧಿಸಿದ ಶಾಸನಗಳಲ್ಲಿ ಕೆಲವು ಶಾಸನಗಳು ಈ ಮನೆತನದ ಮೂಲದ ಬಗ್ಗೆ ವಿವರಗಳನ್ನು ನೀಡುತ್ತವೆ. ಬೆಳಗುತ್ತಿಯ ಒಂದು ಶಾಸನದಲ್ಲಿ[೪೩] ಶಿವ ಮತ್ತು ಸಿಂಧು ಇವರ

ಸಂಗದಿಂದ ಒಬ್ಬ ಕುಮಾರನು ಜನಿಸಿದನೆಂದೂ ಅವನೇ ನಿಡುದೋಳ ಸಿಂದನೆಂದು ಹೆಸರಾದನೆಂದೂ ಹೇಳಲಾಗಿದೆ. ಈ ಶಾಸನದಲ್ಲಿ ಈ ಸಿಂದ ವಂಶದ ನಂತರ ಬಂದ ಸಾಮಂತರ ವಂಶಾವಳಿಯು ಕೊಡಲ್ಪಟ್ಟಿದೆ. ಇದೇ ಕಥೆಯು ವಿಸ್ತಾರವಾಗಿ ಹರಿಹರದ ಶಾಸನದಲ್ಲಿಯೂ ಬರುತ್ತದೆ[೪೪] ಈ ಕಥೆಯ ಪ್ರಕಾರ ಶಿವ ಮತ್ತು ಸಿಂದು ಇವರ ಸಂಗದಿಂದ ಹುಟ್ಟಿದ ಕುಮಾರನಿಗೆ ಸೈಂಧವ ಎಂದು ಹೆಸರಿಟ್ಟನು ಅವನು ಹುಲಿಯ ಹಾಲನ್ನು ಕುಡಿದು ಶೂರನಾಗಬೇಕೆಂದು ಶಿವನು ಒಂದು ಹುಲಿಯನ್ನು ನಿರ್ಮಿಸಿದನು ಮತ್ತು ಅವನಿಗೆ ನಿಡುದೋಳ ಸಿಂದನೆಂಬ ಹೆಸರು ಕೊಟ್ಟನು. ಹೆಚ್ಚು ಕಡಿಮೆ ಇದೇ ಕಥೆ ಹಳ್ಳೂರಿನ ಒಂದು ಶಾಸನದಲ್ಲಿ ಸಿಗುತ್ತದೆ. ಕರಹಾಟವೆಂಬ ಯೋಗ ಪೀಠವು ಅವನ ನೆಲೆಯಾಗಿತ್ತೆಂದು ಇದರಲ್ಲಿ ಹೇಳಿದೆ.[೪೫] ಶಿಕಾರಿಪುರ ತಾಲೂಕಿನ ಗೊಗ್ಗ ಎಂಬ ಗ್ರಾಮದಲ್ಲಿ ದೊರೆತ ಶಾಸನವು[೪೬] ಈ ಮನೆತನದ ಚಟ್ಟರಸನನ್ನು ಹೆಸರಿಸುತ್ತದೆ. ಇದರಲ್ಲಿ ಅವನು ಕರಹಾಟಪುರವರಾಧೀಶ್ವರ ಎಂದು ಕರೆಯಲ್ಪಟ್ಟಿದ್ದಾನೆ. *ಮಾಳಚೀದೇವಿಲಬ್ಧವರಪ್ರಸಾದ* ಎಂಬ ಬಿರುದು ಅವನಿಗಿದ್ದಿತು. ಈ ಬಿರುದುಗಳಿಂದ ಅವನು ನಿಡುದೋಳ ಸಿಂದ ವಂಶಕ್ಕೆ ಸೇರಿದವನೆಂದು ಸೂಚಿತವಾಗುತ್ತದೆ. ಬಾಗಲಕೋಟ ಜಿಲ್ಲೆಯ ಹೊಸವೂರು ಎಂಬಲ್ಲಿ ದೊರೆತ ಶಾಸನವು ಈ ಮನೆತನದ ಚಾವುಂಡನನ್ನು 'ಸಿಂದ ಮುಕುಂದ ಎಂದು ಕರೆದಿದೆ. ವಿಶೇಷವೆಂದರೆ ಈ ಶಾಸನದಲ್ಲಿ ಚಾವುಂಡನ ಹೆಂಡತಿ ಲಕ್ಷ್ಮೀದೇವಿಯ ವರ್ಣನೆಯಿದ್ದು, ಅವಳು ದಾನ ಚಿಂತಾಮಣಿ ಎಂದು ಕರೆಯಲ್ಪಟ್ಟಿದ್ದಾಳೆ. ಅವಳು ಹೊಸವೂರು, ಸೂಂಡಿ ಎಂಬ ಗ್ರಾಮಗಳನ್ನು ಆಳುತ್ತಿದ್ದಳು ಎಂದು ಹೇಳಿದೆ. ಪೆರ್ಗಡೆ ಸೋಮನಾಥ ನಾಯಕ ಮತ್ತು ಇತರ ಅಧಿಕಾರಿಗಳು ಲಕ್ಷ್ಮೀದೇವಿಗೆ ಬಿನ್ನಹವನ್ನು ಮಾಡಿ ಕಪಿಲಾಶ್ರಮದ ಮಲ್ಲಿಕಾರ್ಜುನ ದೇವರಿಗೆ ದತ್ತಿ ಬಿಟ್ಟ ವಿಷಯವಿದೆ. ಶಾಸನದ ಕಾಲ ೧೧೫೫[೪೭] ಹಿರೇಕೆರೂರು ತಾಲೂಕಿನ ಖಂಡೇಬಾಗೂರು ಎಂಬಲ್ಲಿ ರಾಷ್ಟ್ರಕೂಟರ ೩ನೇ ಇಂದ್ರನ ಕ್ರಿ.ಶ. ೯೨೪ರ ಒಂದು ಶಾಸನದಲ್ಲಿ ಸಿಂದರಸ ಎಂಬ ಒಂದು ಹೆಸರು ಬರುತ್ತದೆ.[೪೮] ಇದರಲ್ಲಿ ಸಿಂದರಸ ಮತ್ತು ಅವನ ಮಕ್ಕಳ ಹೆಸರುಗಳು ಸಿಗುತ್ತವೆ. ಇವನೇ ಬೆಳಗುತ್ತಿ ಸಿಂದ ವಂಶದ 'ಮೊದಲ ಐತಿಹಾಸಿಕ ವ್ಯಕ್ತಿ' ಎಂದು ಊಹಿಸಲಾಗಿದೆ.[೪೯] ಆದರೆ ಎಡವಟ್ಟೆ-೭೦ ಎಂಬ ಉಲ್ಲೇಖವನ್ನು ಬಿಟ್ಟರೆ ಇವನು ಬೆಳಗುತ್ತಿ ಸಿಂದ ವಂಶಕ್ಕೆ ಸೇರಿದವನೆಂದು ಹೇಳಲು ಯಾವ ಆಧಾರಗಳು ಇಲ್ಲ.

ಹಿರೇಕೆರೂರು ತಾಲೂಕಿನಲ್ಲಿಯ ಮೇದೂರ ಎಂಬಲ್ಲಿಯ ಶಾಸನವು ಒಡೆದು ಎರಡು ತುಂಡಾಗಿದ್ದರೂ ಈ ವಂಶದ ಅಯ್ಯಣಜೋಗರಸನ ಕುರಿತು ಹೆಚ್ಚಿನ ವಿಷಯಗಳನ್ನು

ತಿಳಿಸುತ್ತದೆ.[೫೦] ಇವನಿಗೂ ಕರಹಾಟಪುರವರಾಧೀಶ್ವರ, *ಮಾಳಚೀದೇವಿಲಬ್ಧವರಪ್ರಸಾದ* ಎಂಬ ಬಿರುದುಗಳಿದ್ದುದು ಗಮನಾರ್ಹವಾಗಿದೆ. ಹೀಗೆಯೇ ಹೊನ್ನಾಳಿ ತಾಲೂಕಿನ ಅನೇಕ ಶಾಸನಗಳು ಈ ಮನೆತನದ ಸಾಮಂತರ ಬಗ್ಗೆ, ಅವರ ಆಳಿಕೆಯ ಬಗ್ಗೆ ಮತ್ತು ಆ ಕಾಲದ ಪರಿಸ್ಥಿತಿಗಳ ಬಗ್ಗೆ ಹೆಚ್ಚಿನ ಮಾಹಿತಿ ಒದಗಿಸುತ್ತವೆ. ಇವೆಲ್ಲವುಗಳನ್ನು ಮುಂದಿನ ಅಧ್ಯಾಯಗಳಲ್ಲಿ ಸೂಕ್ತವಾಗಿ ಬಳಸಿಕೊಳ್ಳಲಾಗಿದೆ.

## ಯಲಬುರ್ಗಿ ಸಿಂದರು

ಯಲಬುರ್ಗಿಯ ಸಿಂದರದು, ಸಿಂದ ವಂಶದ ಒಂದು ಮಹತ್ವದ ಶಾಖೆಯಾಗಿದ್ದಿತು. ತುಲನಾತ್ಮಕವಾಗಿ ನೋಡಿದರೆ, ಈ ಶಾಖೆಯು ಇತರ ಎಲ್ಲ ಶಾಖೆಗಳಿಗಿಂತ ಹೆಚ್ಚು ಪ್ರಬಲವಾಗಿದ್ದಿತು ಎಂದು ಭಾಸವಾಗುತ್ತದೆ. ವಿಶೇಷವೆಂದರೆ, ಈ ಶಾಖೆಯ ಶಾಸನಗಳು ಸಿಂದರ ಉಗಮದ ಬಗ್ಗೆ ಏನೂ ಹೇಳುವುದಿಲ್ಲ. ನಿಡುದೋಳ ಸಿಂದನ ಕಥೆಯೂ ಈ ಶಾಸನಗಳಲ್ಲಿ ಬರುವುದಿಲ್ಲ. ಇದಲ್ಲದೆ ಭೋಗಾವತೀಪುರವರಾಧೀಶ್ವರ ಎಂಬ ಬಿರುದು ಸಹ ಇವರಿಗೆ ಕೊಡಲ್ಪಟ್ಟಿಲ್ಲ. ಈ ಮನೆತನದ ಸಾಮಂತರು ಸಿಂದುವಂಶೋದ್ಭವಂ ಎಂದು ವರ್ಣಿಸಲ್ಪಟ್ಟಿದ್ದಾರೆ. ಇದರ ಆಧಾರದ ಮೇಲಿಂದಲೆ ಇವರು ಮೂಲ ಸಿಂದ ವಂಶಕ್ಕೆ ಸೇರಿದವರೆಂದು ಪರಿಗಣಿಸಲಾಗಿದೆ. ಈ ಸಾಮಂತರು ಯರಂಬರಗೆಯ ನೆಲವೀಡಿನಿಂದ ಆಳುತ್ತಿದ್ದರೆಂದು, ಉಲ್ಲೇಖಿಸಿರುವುದರಿಂದ ಇವರಿಗೆ ಯರಂಬರಗೆಯ ಸಿಂದರು ಎಂಬ ಹೆಸರು ಬಂದಿತು. ಯರಂಬರಗೆ ಇಂದಿನ ಕೊಪ್ಪಳ ಜಿಲ್ಲೆಯಲ್ಲಿ ತಾಲೂಕಿನ ಮುಖ್ಯಸ್ಥಳವಾದ, ಯಲಬುರ್ಗಿ ಎಂಬ ಒಂದು ಗ್ರಾಮ, ಆದ್ದರಿಂದಲೇ ಇವರು ಯಲಬುರ್ಗಿ ಸಿಂದರೆಂದು ಹೆಸರಾಗಿದ್ದಾರೆ. ಇವರ ಶಾಸನಗಳು ಮುಖ್ಯವಾಗಿ ಧಾರವಾಡ ಜಿಲ್ಲೆಯ ನರೇಗಲ್ಲ, ಕೊಂಡಿಕೊಪ್ಪ, ಬೆಂಚಮಟ್ಟಿ ಎಂಬಲ್ಲಿ ದೊರೆತಿವೆ. ಇವುಗಳಿಂದ ಈ ಶಾಖೆಯ ವಿದ್ಯಮಾನಗಳ ಬಗ್ಗೆ ಹೆಚ್ಚಿನ ಮಾಹಿತಿ ದೊರೆಯುತ್ತದೆ. ನರೇಗಲ್ಲಿನ ಒಂದು ಶಾಸನವು ೬ನೇ ವಿಕ್ರಮಾದಿತ್ಯನಿಗೆ ಸೇರಿದ್ದು, ಅವನ ಮಾಂಡಲೀಕನಾಗಿದ್ದ, ಸಿಂದ ಆಚುಗಿಯನ್ನು ಹೆಸರಿಸುತ್ತದೆ. ಈ ಆಚುಗಿಯು ಯಲಬುರ್ಗಿ ಸಿಂದ ಮನೆತನದ ಮೂಲ ಸಾಮಂತನಾಗಿದ್ದು ಇವನ ನಂತರ ಬಂದ ಸಾಮಂತರ ಹೆಸರುಗಳು ಇಲ್ಲಿವೆ. ಈ ಶಾಸನವು ಈ ಸಿಂದರನ್ನು ಅತ್ಯಂತ ಸ್ವಾಮಿಭಕ್ತರೆಂದು, ಶೂರರೆಂದು ವರ್ಣಿಸುತ್ತದೆ. ಇವರೆಲ್ಲರೂ ಚಾಲುಕ್ಯ ಅರಸರ ನಂಬಿಗಸ್ಥ ಮಾಂಡಲಿಕರಾಗಿದ್ದರು ಎಂದು ಸ್ಪಷ್ಟವಿದೆ. ಚಾಲುಕ್ಯ ಅರಸರ ಪರವಾಗಿ ಹೊಯ್ಸಳ ಅರಸ ಗೋವೆಯ ಸಾಮಂತ, ಪಾಂಡ್ಯ ಇವರೊಡನೆ ಹೋರಾಡಿದ ವಿಷಯಗಳು ಈ ಶಾಸನದಲ್ಲಿವೆ. ಈ ಮನೆತನದ ಪೆರ್ಮಾಡಿದೇವನು ಯರಂಬರಗೆ ಅಂದರೆ ಯಲಬುರ್ಗಿ

ರಾಜಧಾನಿಯಲ್ಲಿದ್ದು ಕಿಸುಕಾಡು-೭೦, ಬಾಗಡಗೆ-೭೦, ನರೆಯಂಗಲ್ಲ-೭೦ ಎಂಬ ಪ್ರಾಂತಗಳನ್ನು ಆಳುತ್ತಿದ್ದನೆಂದು ಹೇಳಿದೆ.[೫೧] ಫ್ಲೀಟರು ಮೊದಲ ಸಲ ಈ ಶಾಸನವನ್ನು ಓದಿದಾಗ ಅವರಿಗೆ ಯರಂಬರಗೆ ಎಂಬ ಹೆಸರನ್ನು ಸರಿಯಾಗಿ ಓದಲಾಗಲಿಲ್ಲ. 'ರಂಬರಗೆ' ಎಂದು ಓದಿ ಈ ಊರನ್ನು ಗುರುತಿಸಲಾಗುವುದಿಲ್ಲ ಎಂದು ಹೇಳಿದರು.[೫೨] ಇದೇ ನರೇಗಲ್ಲಿನ ಇನ್ನೊಂದು ಶಾಸನವು ಚಾಲುಕ್ಯ ೨ನೆಯ ಜಗದೇಕಮಲ್ಲನ ಆಳಿಕೆಗೆ ಸೇರಿದೆ. ಇದು ಸಹ ಈ ಮನೆತನದವರು ಹೋರಾಡಿದ ಯುದ್ಧಗಳನ್ನು, ಅವರ ಗೆದ್ದ ಪ್ರದೇಶಗಳನ್ನು ವರ್ಣಿಸುತ್ತವೆ. ಎರಡೂ ಶಾಸನಗಳು ಸಿಂದ ವಂಶಕ್ಕೆ ಸೇರಿವೆ. ಇವು ಸಹ ಈ ಮನೆತನದ ಸಾಮಂತರ ಬಗ್ಗೆ ವಿವರಗಳನ್ನು ಒದಗಿಸಿವೆ.[೫೩] ಈ ಮನೆತನಕ್ಕೆ ಸಂಬಂಧಿಸಿದಂತೆ ಪಟ್ಟದಕಲ್ಲಿನಲ್ಲಿ ದೊರೆತ ಶಾಸನವು ಚಾಲುಕ್ಯ ೩ನೆಯ ತೈಲಪನ ಆಳಿಕೆಗೆ ಸೇರಿದೆ. ಇದರಲ್ಲಿ ಸಿಂದ ಚಾವುಂಡನ ಉಲ್ಲೇಖವಿದೆ.[೫೪] ಈ ಶಾಸನವು ಸುಧೀರ್ಘವಾಗಿದ್ದು ಗದ್ಯ, ಪದ್ಯಗಳಿಂದ ಕೂಡಿದೆ. ರಾಜಕೀಯದ ಜೊತೆಗೆ ಧಾರ್ಮಿಕ, ಸಾಹಿತ್ಯಕ ವಿವರಗಳನ್ನು ಇದು ಒದಗಿಸುತ್ತದೆ. ಇದರಲ್ಲಿ ಸಾಮಾನ್ಯ ರೀತಿಯಿಂದ ಚಾಲುಕ್ಯರ ಉಲ್ಲೇಖವಿದೆಯೇ ಹೊರತು ಯಾವ ಒಬ್ಬ ಅರಸನನ್ನೂ ಉಲ್ಲೇಖಿಸಿಲ್ಲ. ಅದರ ಬದಲಾಗಿ ಸಿಂದ ಚಾವುಂಡನ ವರ್ಣನೆ, ಮತ್ತು ಅವನ ಹೆಂಡತಿ ಸಿರಿಯಾದೇವಿಯ ಉಲ್ಲೇಖವಿದೆ. ಅವರ ಮಗ ಬಿಜ್ಜಳದೇವನೂ ಹೆಸರಿಸಲ್ಪಟ್ಟಿದ್ದಾನೆ. ಶಾಸನ ಒಡೆದಿದೆ.[೫೫]

ಈ ಮನೆತನದ ಚರಿತ್ರೆಗೆ ರೋಣ ತಾಲೂಕಿನಲ್ಲಿಯ ಬೆಂಚಮಟ್ಟಿಯ ಎರಡು ಶಾಸನಗಳು ಮಹತ್ವದಿವೆ. ಮೊದಲನೆಯ ಶಾಸನವು ಕಳಚುರಿ ಬಿಜ್ಜಳನ ಆಳಿಕೆಗೆ ಸೇರಿದೆ.[೫೬] ಇದರಲ್ಲಿ ಚಾವುಂಡನ ಉಲ್ಲೇಖವಿದ್ದು, ಅವನು ಬಿಜ್ಜಳನ ಅಳಿಯನೆಂದು ವರ್ಣಿಸಲ್ಪಟ್ಟಿದ್ದಾನೆ. ಇವನ ವಂಶಾವಳಿಯೂ ಇದರಲ್ಲಿದೆ. ಈ ಕಾಲದ ರಾಜಕೀಯ ಚಟುವಟಿಕೆಗಳ ಬಗ್ಗೆ ಇಲ್ಲಿ ಹೆಚ್ಚಿನ ವಿವರಗಳಿವೆ. ಎರಡನೆಯ ಶಾಸನವು ಚಾವುಂಡನ ಮಕ್ಕಳಾದ ಬಿಜ್ಜಳ ಮತ್ತು ವೀರವಿಕ್ರಮನನ್ನು ಹೆಸರಿಸುತ್ತವೆ. ಇವರು ಕಿಸುಕಾಡು-೭೦, ಬಾಗಡಗೆ-೭೦, ಕೆಳವಾಡಿ-೩೦೦, ನರೆಯಂಗಲ್ಲ-೧೨ ಮತ್ತು ಕರಿವಿಡಿ-೩೦ ಪ್ರಾಂತಗಳನ್ನು ಆಳುತ್ತಿದ್ದರು ಎಂದು ಇದರಲ್ಲಿ ಹೇಳಿದೆ.

ರೋಣ ತಾಲೂಕಿನ ಹಿರೇಮಣ್ಣೂರ ಎಂಬಲ್ಲಿಯ ಶಾಸನದಲ್ಲಿ ಚಾವುಂಡನ ಸುಧೀರ್ಘವಾದ ಪ್ರಶಸ್ತಿಯಿದೆ.[೫೭] ಇದರಲ್ಲಿ ಅವನ ವಂಶದವರ ಹೆಸರುಗಳ ಮತ್ತು ಅವನ ದಿಗ್ವಿಜಯದ ವರ್ಣನೆಗಳು ಇವೆ. ರೋಣ, ಬಾದಾಮಿ, ಗದಗ ತಾಲೂಕುಗಳಲ್ಲಿ ಈ ಸಿಂದ ವಂಶದವರ ಹಲವಾರು ಶಾಸನಗಳು ದೊರೆತಿದ್ದು ಅವು ವಿಫುಲವಾದ ಮಾಹಿತಿಯನ್ನು ಒದಗಿಸುತ್ತವೆ. ವಿಶೇಷವಾಗಿ ಗಮನಿಸಬೇಕಾದ ಇನ್ನೊಂದು ಅಂಶವೆಂದರೆ ಈ ಎಲ್ಲ ಶಾಸನಗಳಲ್ಲಿ

ಆಳರಸರ ಉಲ್ಲೇಖವಿಲ್ಲ ಅಂದರೆ ಆ ಕಾಲದಲ್ಲಿ ಇವರು ಸ್ವತಂತ್ರರಾಗಿ ಆಳುತ್ತಿದ್ದರೆಂದು ಸೂಚಿತವಾಗುತ್ತದೆ. ಈ ಸೂಚನೆಯು ಅಷ್ಟೊಂದು ಸಮರ್ಥನಿಯವೆನಿಸದಿದ್ದರೂ ಕನಿಷ್ಟ ಅವರು ಈ ಕಾಲದಲ್ಲಿ ಬಹಳಷ್ಟು ಪ್ರಬಲರಾಗಿದ್ದರೆಂದು ಸ್ಪಷ್ಟವಾಗುತ್ತದೆ.[೫೮] ಸಿಂದ ವಂಶದ ಶಾಸನಗಳನ್ನು ನೋಡಿರಿ.

## ಕುರುಗೋಡು ಸಿಂದರು

ಇನ್ನೊಂದು ಸಿಂದ ಸಾಮಂತ ಮನೆತನವೆಂದರೆ, ಕುರುಗೋಡಿನ ಸಿಂದರು. ಕುರುಗೋಡನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಸುತ್ತಮುತ್ತಲಿನ ಪ್ರದೇಶದ ಮೇಲೆ ಇವರು ಆಳಿಕೆಯನ್ನು ನಡೆಸುತ್ತಿದ್ದರಿಂದ ಇವರು ಕುರುಗೋಡಿನ ಸಿಂದರು ಎಂದು ಕರೆಯಲ್ಪಟ್ಟರು. ಕುರುಗೋಡು ಬಳ್ಳಾರಿ ಜಿಲ್ಲೆಯ ಒಂದು ಚಿಕ್ಕ ಗ್ರಾಮವಾಗಿದ್ದು, ಇತಿಹಾಸ ಕಾಲದಲ್ಲಿ, ಅಂದರೆ ರಾಷ್ಟ್ರಕೂಟರು ಮತ್ತು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಇದೊಂದು ಪ್ರಮುಖ ಸ್ಥಳವಾಗಿದ್ದಿತು. ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಇದೊಂದು ಪ್ರಮುಖ ಸೈನ್ಯದ ನೆಲೆಯಾಗಿದ್ದು, ಅತ್ಯಂತ ಬಲಿಷ್ಠವಾದ ಕೋಟೆಯನ್ನು ಹೊಂದಿದ್ದಿತು. ಮೇಲೆ ನೋಡಿದಂತೆ ಈ ಸಾಮಂತ ಮನೆತನಗಳು ಬೇರೆ ಬೇರೆ ಪ್ರದೇಶಗಳಲ್ಲಿ ಗುರುತಿಸಲ್ಪಟ್ಟುಕೊಂಡಿದ್ದರೂ, ಎಲ್ಲ ಮನೆತನಗಳು ಒಂದೇ ಮೂಲ, ಸಿಂದ ವಂಶಕ್ಕೆ ಸೇರಿದವುಗಳಾಗಿದ್ದು ಪೌರಾಣಿಕ ವ್ಯಕ್ತಿಯಾದ ನಿಡುದೋಳ ಸಿಂದನೇ ಈ ಎಲ್ಲ ಮನೆತನಗಳ ಮೂಲಪುರುಷನೆಂದು ಪರಿಗಣಿಸಲ್ಪಟ್ಟಿದ್ದಾನೆ.

ಇತರ ಸಿಂದರಂತೆ ಇವರೂ ಸಹ ಫಣಿಕುಲದಲ್ಲಿ ಹುಟ್ಟಿದವರೆಂದೂ ವ್ಯಾಘ್ರಲಾಂಛನ ಹೊಂದಿದವರೆಂದೂ, ಭೋಗಾವತೀಪುರವರೇಶ್ವರ ಎಂಬ ಬಿರುದು ಪಡೆದವರೆಂದೂ ವರ್ಣಿಸಲ್ಪಟ್ಟಿದ್ದಾರೆ. ಕುಡತಿನಿ, ಕುರುಗೋಡು ಮತ್ತು ಬಳ್ಳಾರಿ ಜಿಲ್ಲೆಯ ಇತರ ಪ್ರದೇಶಗಳಲ್ಲಿ ಈ ಸಾಮಂತರ ಶಾಸನಗಳು ದೊರೆಯುತ್ತವೆ. ಕುಡುತಿನಿಯಲ್ಲಿ ದೊರೆತ ಕ್ರಿ.ಶ. ೯೪೭ರ ಶಾಸನವು[೫೯] ಕುಡತಿನಿಯಲ್ಲಿ ರಾಷ್ಟ್ರಕೂಟರ ೨ ನೆಯ ಕೃಷ್ಣನ ಕಾಲದ ಶಾಸನವು ಸಿಂದರ ಪ್ರಾಚೀನತಮ ಶಾಸನವೆಂದು ಹೇಳಬಹುದು.[೬೦] ಇದರಲ್ಲಿ ಈ ಮನೆತನದ ಸಾಮಂತನೊಬ್ಬನ ಹೆಸರಿದ್ದು, ಅದನ್ನು ಅರಿಬಲ್ಲದಾಗ್ರ ಎಂದು ಓದಲಾಗಿದೆ. ಈ ಹೆಸರು ಅಷ್ಟು ಸ್ಪಷ್ಟವಿಲ್ಲದಿದ್ದರೂ, ಇವನೆ ಕುರುಗೊಡು ಮನೆತನದ ಮೊದಲ ಸಾಮಂತ ಎಂದು ಪರಿಗಣಿಸಲಾಗಿದೆ.

ಕುರುಗೋಡಿನಲ್ಲಿ ದೊರೆತ ೬ನೆಯ ವಿಕ್ರಮಾದಿತ್ಯನ ಶಾಸನದಲ್ಲಿ[೬೧] (ಮೂಲ ಶಾಸನ ಕಲ್ಲು ಕಲ್ಕತ್ತಾದ ಇಂಡಿಯನ್ ಮ್ಯೂಜಿಯಮ್‌ನಲ್ಲಿದೆ) ಈ ಶಾಸನದಲ್ಲಿ ನಿಡುದೋಳ ಸಿಂದನಿಗೆ

ನಿಡುದೋಳ ಎಂಬ ಹೆಸರು ಹೇಗೆ ಬಂದಿತೆಂಬ ಬಗ್ಗೆ ಒಂದು ಸೂಚನೆಯಿದೆ. ಶಿವನ ದೀರ್ಘ ಬಾಹುವಿನಿಂದ ಸಿಂದನು ಹುಟ್ಟಿದುದರಿಂದ ಅವನಿಗೆ ನಿಡುದೋಳ ಸಿಂದನೆಂಬ ಹೆಸರು ಬಂದಿತೆಂದು ಅರ್ಥವಿರುವ ಒಂದು ಪದ್ಯವಿದೆ. ೫೦ ಸಾಲುಗಳ ಈ ಸುಧೀರ್ಘ ಶಾಸನವು ಸಿಂದ ರಾಚಮಲ್ಲನ ಬಗ್ಗೆ ಅನೇಕ ವಿವರಗಳನ್ನು ಒದಗಿಸುತ್ತದೆ. ಇದೇ ತೆರನಾದ ಕುರುಗೋಡಿನಲ್ಲಿಯ ಇನ್ನೂ ಒಂದು ಶಾಸನವು ಅದೇ ಮ್ಯೂಜಿಯಂನಲ್ಲಿದೆ. ಕುರುಗೋಡಿನ ಬಸವೇಶ್ವರ ದೇವಾಲಯದಲ್ಲಿ ಇರುವ ಇನ್ನೊಂದು ಶಾಸನವು ರಾಚಮಲ್ಲನ ಸುಧೀರ್ಘವಾದ ಪ್ರಶಸ್ತಿಯನ್ನು ಒಳಗೊಂಡಿದೆ.[೬೨] ಈ ಸಿಂದರು ಕಲ್ಯಾಣ ಚಾಲುಕ್ಯ ಮಾಂಡಲಿಕರಾಗಿ ನೊಳಂಬ, ಪಲ್ಲವರ ಅಧೀನರಾಗಿ ಅಧಿಕಾರದಲ್ಲಿದ್ದರೆಂದು ಹಾವಿನಹಾಳ ವೀರಾಪೂರ ಶಾಸನದಿಂದ ತಿಳಿದು ಬರುತ್ತದೆ.[೬೩] ಕಳಚೂರಿಗಳು ಕೆಲ ಕಾಲ ಚಾಲುಕ್ಯರ ಪಟ್ಟ ಕಸಿದುಕೊಂಡಾಗ, ಈ ಸಿಂದರು ಅವರ ಆಧಿಪತ್ಯವನ್ನು ಒಪ್ಪಿಕೊಂಡರು ಎಂದು ಕುರುಗೋಡಿನ ಒಂದು ಶಾಸನದಿಂದ ತಿಳಿದು ಬರುತ್ತದೆ.[೬೪] ಮುಂದೆ ಚಾಲುಕ್ಯ ಸಾಮ್ರಾಜ್ಯವು ಪುನಃ ಸ್ಥಾಪಿತವಾದಾಗ, ಇವರೂ ಚಾಲುಕ್ಯರ ಕಡೆಗೆ ಹೊರಳಿದರು.[೬೫]

ಬಳ್ಳಾರಿ ಜಿಲ್ಲೆಯ ಶಿರಗುಪ್ಪಿಯಲ್ಲಿ ದೊರೆತ ಒಂದು ಶಾಸನದಲ್ಲಿ 'ಸಿಂದಕುಲಾನ್ವಯ' ಎಂಬ ಬಿರುದುವುಳ್ಳ ಚೊಕ್ಕರಸನ ಹೆಸರು ಬರುತ್ತದೆ. ಅದೇ ಸ್ಥಳದ ಇನ್ನೊಂದು ಶಾಸನದಲ್ಲಿ ಚೊಕ್ಕರಾಯ ಮತ್ತು ತೆಕ್ಕಕಲ್ಲ ಚೊಕ್ಕರಸ ಎಂಬ ಹೆಸರುಗಳು ಬರುತ್ತವೆ. ಈ ಮೂರು ಹೆಸರುಗಳು ಒಂದೇ ವ್ಯಕ್ತಿಯನ್ನು ಹೆಸರಿಸುತ್ತವೆ ಎಂದು ಊಹಿಸಲು ಸಾಧ್ಯವಿದೆ.[೬೬] ಶಿರಗುಪ್ಪಿ ತಾಲೂಕಿನ ಕೊಂಚಗೆರೆ ಎಂಬಲ್ಲಿಯ ಒಂದು ಶಾಸನದಲ್ಲಿ ಸಿಂದ ಮಾರ್ತಂಡ ಎಂಬ ಬಿರುದಿನ ಸೋವಿದೇವನ ಹೆಸರು ಇದೆ. ಇದೇ ಶಾಸನದಲ್ಲಿ ಇವನಿಗೆ 'ತೈಲಪದೇವನಂಕಕಾರ' ಎಂಬ ಬಿರುದು ಗಮನಾರ್ಹವಾಗಿದೆ.[೬೭] ಈ ತೈಲಪ ಯಾರು ಎಂಬುದನ್ನು ನಿರ್ಧರಿಸುವುದು ಅಗತ್ಯವಿದೆ. ಈ ಸಿಂದರು ಕಾರ್ತಿಕೇಯನ ಭಕ್ತರಾಗಿದ್ದರು ಎಂದು ಈ ಶಾಸನದಿಂದ ತಿಳಿದು ಬರುತ್ತದೆ. ಸೋವಿದೇವನು ಇಲ್ಲಿ '*ಕಾರ್ತಿಕೇಯದೇವಲಬ್ಧವರಪ್ರಸಾದ*' ಎಂದು ಕರೆಯಲ್ಪಟ್ಟಿದ್ದಾನೆ. ಬಾದಾಮಿ ಚಾಲುಕ್ಯರ ಆರಾಧ್ಯದೈವವಾದ ಸೊಂಡೂರಿನ ಸಮೀಪದ ಕಾರ್ತಿಕೇಯ ತಪೋವನ ಎಂಬಲ್ಲಿ ಸ್ಥಾಪಿತನಾದ ಕಾರ್ತಿಕೇಯನೇ ಈ ಆರಾಧ್ಯದೈವ. ಕುರುಗೊಡು ಅಲ್ಲದೇ ಕೊಂಚಗೆರೆ, ತೆಕ್ಕಲಕೋಟೆಗಳಲ್ಲಿಯ ಶಾಸನಗಳಲ್ಲಿ ರಾಚಮಲ್ಲನ ಉಲ್ಲೇಖವಿದೆ.

ಕುರುಗೊಡು ಮತ್ತು ಸುತ್ತಮುತ್ತಲಿನ ಪ್ರದೇಶಗಳಲ್ಲಿ ದೊರೆತ ಇವರ ಶಾಸನಗಳು ಇವರ ವಂಶದ ಇತಿಹಾಸದ ಅಭ್ಯಾಸಕ್ಕೆ ಹೆಚ್ಚಿನ ಮಾಹಿತಿಯನ್ನು ಒದಗಿಸುತ್ತವೆ.

### ಬಾಗಡಗೆಯ ಸಿಂದರು

ಬಾಗಡಗೆ ಸಿಂದರು, ಸಿಂದರ ಇನ್ನೊಂದು ಶಾಖೆಯಾಗಿದ್ದಾರೆ. ಇವರು ನಿಡುದೋಳ ಸಿಂದನ ವಂಶದವರೆಂದು ಹೇಳಿಕೊಳ್ಳುತ್ತಾರೆ. ಬಾಗಡಗೆಯು ಇಂದಿನ ಬಾಗಲಕೋಟ ಜಿಲ್ಲೆಯ, ಮುಖ್ಯಸ್ಥಳ ಬಾಗಲಕೋಟೆ ಎಂದು ಗುರುತಿಸಲ್ಪಟ್ಟಿದೆ. ಇವರಿಗೆ ಸಂಬಂಧಿಸಿದ ಶಾಸನವೆಂದರೆ ಭೈರನಮಟ್ಟಿ ಶಾಸನ ಒಂದೇ. ಈ ಶಾಸನವು ಬಾಗಲಕೋಟೆ ಸಮೀಪದ ಭೈರನಮಟ್ಟಿ ಎಂಬಲ್ಲಿ ದೊರೆತಿದ್ದು[೬೮]. ೫೮ ಸಾಲುಗಳಷ್ಟು ವಿಸ್ತಾರವಾಗಿದ್ದು ಈ ಮನೆತನದ ಬಗ್ಗೆ ವಿಪುಲವಾದ ಮಾಹಿತಿಯನ್ನು ಒದಗಿಸುತ್ತದೆ. ಇದರ ವೈಶಿಷ್ಟ್ಯವೆಂದರೆ, ಸಿಂದ ವಂಶದ ಉಗಮದ ಅಂದರೆ ನಿಡದೊಳ ಸಿಂದರ ಕಥೆಯನ್ನು ವಿಸ್ತಾರವಾಗಿ ಬಣ್ಣಿಸುತ್ತದೆ. ಇದು ಚಾಲುಕ್ಯ ೨ನೆಯ ತೈಲನ ಆಳಿಕೆಗೆ ಸೇರಿದ್ದು, ಕ್ರಿ.ಶ. ೮೯೧ ತೇದಿಯನ್ನು ಹೊಂದಿದೆ. ಈ ಶಾಸನವು, ಈ ಮನೆತನದ ನಾಗಾದಿತ್ಯನ ಕಾಲಕ್ಕೆ ಸೇರಿದ್ದು, ಸಿಂದ ವಂಶದ ಗುರುತುಗಳಾದ ಭೋಗಾವತಿಪುರವರೇಶ್ವರ, ವಾಸುಗಿತಕ್ಷಕ ಫಣಿಪತಾಕೇಶ್ವರ, ವ್ಯಾಘ್ರಲಾಂಛನ ಮುಂತಾದ ಬಿರುದುಗಳು ಕೊಡಲ್ಪಟ್ಟಿವೆ. ಸಿಂದ ವಂಶದ ಅಭ್ಯಾಸಕ್ಕೆ ಇದು ಒಂದು ಉಪಯುಕ್ತವಾದ ಸಾಧನವಾಗಿದೆ.

ಕೆಳಗೆ ಹೆಸರಿಸಲಾದ ರಂಜೋಲ ಶಾಸನದಲ್ಲಿ ನಿಡುದೋಳ ಸಿಂದ ಮತ್ತು ಮಯೂರವರ್ಮನ ಮಗಳು ಲಕ್ಷ್ಮೀಮತಿಗೆ ಹುಟ್ಟಿದ ನಾಲ್ಕು ಜನ ಮಕ್ಕಳಲ್ಲಿ ಹಿರಿಯನಾದ ಪ್ರಭುಸೇವ್ಯನೆಂಬವನು "ಬಾಗಡಗೇದೇಶಾಧೀಶ" ನಾದನೆಂದು ಹೇಳಿದ ವಿಷಯವು ಹೊಸದಾಗಿದೆ.

### ಅಟ್ಟಳೆನಾಡಿನ (ರಂಜೇರು) ಸಿಂದರು

ಸುಮಾರು ಇದೇ ಸಮಯಕ್ಕೆ ಸಿಂದರ ಇನ್ನೊಂದು ಶಾಖೆ, ಬೀದರ ಜಿಲ್ಲೆಯ ಕೆಲ ಭಾಗಗಳಲ್ಲಿ ಅಧಿಕಾರದಲ್ಲಿದ್ದಿತು. ಈ ಮನೆತನದ ಸಾಮಂತರು ಅಟ್ಟಳೆನಾಡು ಎಂಬ ಪ್ರಾಂತದ ಅಧಿಪತಿಗಳಾಗಿದ್ದರು. ರಂಜೇರು ಅಥವಾ ಇಂದಿನ ಬೀದರ ತಾಲೂಕಿನ ರಂಜೋಳ ಈ ಪ್ರಾಂತದ ಮುಖ್ಯ ಸ್ಥಳವಾಗಿದ್ದಿತು. ಈ ಊರಿನ ಸುತ್ತಮುತ್ತಲು ದೊರೆತ ಕೆಲ ಶಾಸನಗಳು ಈ ಮನೆತನದ ಮಹತ್ವದ ವಿವರಗಳನ್ನು ಒದಗಿಸುತ್ತವೆ. ಈ ಶಾಖೆಯ ಮಹತ್ವದ ಶಾಸನವೆಂದರೆ, ರಂಜೋಲದಲ್ಲಿಯೇ ದೊರೆತಿದೆ. ಇದು ಕಲ್ಯಾಣ ಚಾಲುಕ್ಯರ ೬ನೆಯ ವಿಕ್ರಮಾದಿತ್ಯನ ಕಾಲಕ್ಕೆ ಸೇರಿದೆ. ಈ ಸುಧೀರ್ಘವಾದ ಶಾಸನವು ಈ ಶಾಖೆಯ ಅಭ್ಯಾಸಕ್ಕೆ ಮಹತ್ವದ ಮಾಹಿತಿಯನ್ನು

ಒದಗಿಸುತ್ತದೆ, ಆದರೆ ಶಾಸನದ ಕಲ್ಲು ಅರ್ಧಕ್ಕೆ ಒಡೆದು ಹೋಗಿದ್ದರಿಂದ ಬಹಳಷ್ಟು ಮಾಹಿತಿಗಳು ಕಳೆದು ಹೋಗಿವೆ.

ಇದರಲ್ಲಿ ಬರುವ ಮುಖ್ಯ ಅಂಶಗಳು ಎಂದರೆ, ಸಿಂದರ ಕುರಿತಾದ ನಿಡುದೋಳ ಸಿಂದನ ಕಥೆ. ನಮಗೆ ತಿಳಿದಂತೆ ಈ ಕಥೆಯು ಬೆಳಗುತ್ತಿ ಸಿಂದರ ಶಾಸನಗಳಲ್ಲಿಯೂ ಬರುತ್ತದೆ.[೧೯] ಬಾಗಡಗೆಯ ಸಿಂದರ ಶಾಸನದಲ್ಲಿಯೂ ಕಂಡು ಬರುತ್ತದೆಂಬುದನ್ನು ಮೇಲೆ ನೋಡಿದ್ದೇವೆ.[೨೦]

ಆದರೆ ಇಲ್ಲಿ ಬರುವ ಕಥೆಗಳಲ್ಲಿ ವ್ಯತ್ಯಾಸವಿದೆ. ಅಲ್ಲದೆ ಇಲ್ಲಿ ಹೆಚ್ಚಿನ ವಿವರಗಳು ದೊರೆಯುತ್ತವೆ. ಮುಖ್ಯವಾಗಿ ಈ ಶಾಸನದ ಮಹತ್ವವೆಂದರೆ, ಇದರ ಮುಖಾಂತರ ಬೀದರ ಜಿಲ್ಲೆಯಲ್ಲಿ ಅಧಿಕಾರದಲ್ಲಿದ್ದ ಸಿಂದರ ಶಾಖೆವೊಂದು ಹೊಸದಾಗಿ ಪತ್ತೆಯಾದುದ್ದು. ನಿಡುದೋಳ ಸಿಂದನಿಗೆ, ನಿಡುದೋಳ ಎಂಬ ಹೆಸರಿನ ವಿವರಣೆಯು ಕುರುಗೋಡಿನ ಒಂದು ಶಾಸನದಲ್ಲಿ ಇದ್ದುದ್ದನ್ನು ನಾವು ಈ ಮೇಲೆ ನೋಡಿದ್ದೇವೆ. ಇಲ್ಲಿ ಈ ಕಥೆ ವಿಭಿನ್ನವಾಗಿದೆ, ಮತ್ತು ಸ್ಪಷ್ಟವೂ ಇದೆ. ನಿಡುದೋಳು ಅಂದರೆ ಚಾಚಿದ ತೋಳು, ಕಥೆಯ ಪ್ರಕಾರ, ಶಿವ ಪಾರ್ವತಿಯರಿಂದ ಹುಟ್ಟಿದ ನಿಡುದೋಳ ಸಿಂದನಿಗೆ ಕದಂಬ ಮಯೂರವರ್ಮನ ಮಗಳನ್ನು ಕೇಳಲು ಹೋದಾಗ, ಮುಕ್ಕಣ್ಣನಾದ ಮಯೂರವರ್ಮನು ಕೋಪದಿಂದ ಮೂರನೇ ಕಣ್ಣನ್ನು ತೆಗೆದು, ಅದರಿಂದ ಜ್ವಾಲೆ ಹೊರಬರತೊಡಗಿತು. ಸಿಂದನು ತನ್ನ ಕೈಯನ್ನು ಚಾಚಿ ಆ ಜ್ವಾಲೆಗಳನ್ನು ಆರಿಸಿದುದರಿಂದ ಅವನಿಗೆ ಚಾಚಿದ ಕೈ ಅಥವಾ ನಿಡುದೋಳ ಸಿಂದ ಎಂಬ ಹೆಸರು ಬಂದಿತು. ಸಿಂದರ ಬಿರುದುಗಳನ್ನು ವಿವರಿಸುವ ಭಾಗವೂ ಚೋದ್ಯವಾಗಿದೆ. ಸಿಂದನಿಗೆ ಪದ್ಮಾವತಿದೇವಿ ಪ್ರೀತಿಯಿಂದ ವರವನ್ನು ಕೊಟ್ಟಿದ್ದರಿಂದ, ಪದ್ಮಾವತಿದೇವಿಲಬ್ಧವರಪ್ರಸಾದ ಎಂಬ ಬಿರುದು, ಭೋಗಾವತಿಯು ನಿಜ ರಾಜಧಾನಿಯಾಗಿದ್ದರಿಂದ ಭೋಗಾವತಿಪುರವರೇಶ್ವರ ಎಂಬ ಬಿರುದು, ಹುಲಿಯ ಹಾಲನ್ನು ಕುಡಿದು ಬೆಳೆದಿದ್ದರಿಂದ ವ್ಯಾಘ್ರಲಾಂಛನ ಎಂಬ ಬಿರುದು, ಕೈಚಾಚಿ ಉರಿಯನ್ನು ಆರಿಸಿದುದರಿಂದ ನಿಡುದೋಳ ಎಂಬ ಬಿರುದು ಬಂದವೆಂದೂ ಚಮತ್ಕಾರಿಕವಾಗಿ ವಿವರಣೆ ಕೊಡಲಾಗಿದೆ. ನಿಡುದೋಳ ಸಿಂದನಿಗೆ ಮಯೂರವರ್ಮನ ಮಗಳು ಲಕ್ಷ್ಮೀಮತಿಯಿಂದ ನಾಲ್ವರು ಮಕ್ಕಳು ಹುಟ್ಟಿದರು. ಇವರಿಂದ ಪಳಿಯಂಡ, ಬಾಗಡಗೆ, ಬಳ್ಳರೆ ಮತ್ತು ಅಟ್ಟಳೆ ನಾಡುಗಳ ಸಿಂದ ವಂಶದ ಶಾಖೆಗಳು ಆರಂಭವಾದವು. ಹೀಗೆ ಸಿಂದ ವಂಶದ ಬಗ್ಗೆ ಹೊಸ ವಿಷಯಗಳು ತಿಳಿದು ಬರುತ್ತವೆ. ಸಾಹಿತ್ಯಕ ದೃಷ್ಟಿಯಿಂದಲೂ ಈ ಶಾಸನವು ಮಹತ್ವದ್ದಿದೆ. ಚಾಲುಕ್ಯ ವಂಶದ ವಂಶಾವಳಿಯು ಇಲ್ಲಿ ದೊರೆತಿರುವುದು ಒಂದು ವಿಶೇಷವೇ. ಹೆಚ್ಚಿನ

ಐತಿಹಾಸಿಕ ಸಂಗತಿಗಳನ್ನೊಳಗೊಂಡ ಶಾಸನದ ಭಾಗವೇ ಒಡೆದು ಹೋಗಿರುವುದು ದುರ್ದೈವದ ಸಂಗತಿ. ಇದೇ ತಾಲೂಕಿನ ಅಣದೂರು ಮತ್ತಿತರ ಗ್ರಾಮಗಳಲ್ಲಿ ದೊರೆತ ಶಾಸನಗಳಲ್ಲಿ (ಇವುಗಳಲ್ಲಿ ಕೆಲವು ಬೀದರ ಮ್ಯೂಸಿಯಂನಲ್ಲಿವೆ). ಈ ಶಾಖೆಯ ಸಾಮಂತರ ವಂಶಾವಳಿಯ ಬಗ್ಗೆ ವಿವರಗಳು ದೊರೆಯುತ್ತವೆ. ಈ ಮಹತ್ವದ ಶಾಸನವನ್ನು ಕಂಡು ಹಿಡಿದು ಈ ಹೊಸ ಸಿಂದ ಮನೆತನವನ್ನು ಬೆಳಕಿಗೆ ತಂದವರು ಗೋಪಾಲ ಬಿ.ಆರ್. ಅವರು, ಈ ಶಾಸನವನ್ನು ಪ್ರಕಟಿಸಲಾಗಿದೆ.[೭೧]

## ಪ್ರತ್ಯಂಡಕ ಸಿಂದರು

ನಾವು ಅಭ್ಯಾಸಕ್ಕಾಗಿ ಆರಿಸಿಕೊಂಡ ಸಿಂದ ವಂಶದ ಇನ್ನೊಂದು ಶಾಖೆ ಎಂದರೆ ಪ್ರತ್ಯಂಡಕ ಸಿಂದರು, ಈ ಶಾಖೆಯ ಸಾಮಂತರ ಹೆಸರುಗಳು ಬಿಜಾಪುರ ಜಿಲ್ಲೆಯ ತಿಡಗುಂದಿ ಎಂಬಲ್ಲಿ ದೊರೆತ ತಾಮ್ರ ಶಾಸನದಿಂದ ತಿಳಿದು ಬರುತ್ತದೆ.[೭೨] ಈ ಶಾಸನದಲ್ಲಿ ಪ್ರತ್ಯಂಡಕ-೪,೦೦೦ ದ ಸಾಮಂತನಾದ ಮುಂಜ ಮತ್ತು ಅವನ ಪೂರ್ವಜರ ಹೆಸರುಗಳು ಬರುತ್ತವೆ. ಪ್ರತ್ಯಂಡಕ ಎಂಬುದು ಕನ್ನಡದಲ್ಲಿ ಪಳಿಯಂಡ ಎಂಬ ಹೆಸರಿನಿಂದಲೂ ಶಾಸನಗಳಲ್ಲಿ ಉಕ್ತವಾಗಿದೆ. ಕಲ್ಯಾಣ ಚಾಲುಕ್ಯ ಮತ್ತು ಸೇವುಣರ ಕಾಲದಲ್ಲಿ ಪ್ರತ್ಯಂಡಕ ಚತುಸಹಸ್ರ ಅಥವಾ ಪಳಿಯಂಡ ನಾಲ್ಸಾಸಿರ ಎಂಬ ಹೆಸರಿನಿಂದ ಉಕ್ತವಾಗಿದೆ. ಪ್ರತ್ಯಂಡಕ ಅಥವಾ ಪಳಯಂಡವು ಇಂದಿನ ಉಸ್ಮಾನಾಬಾದ ಜಿಲ್ಲೆಯ ಪರೆಂಡಾ ಎಂಬ ಗ್ರಾಮವೆಂದು ಗುರುತಿಸಲ್ಪಟ್ಟಿದೆ.[೭೩] ಈ ಸಿಂದರು ಈ ಊರಿನ ಸುತ್ತಮುತ್ತಲಿನಲ್ಲಿ ಅಧಿಕಾರದಲ್ಲಿದ್ದರೆಂದು ಸ್ಪಷ್ಟವಿದೆ. ಅದಕ್ಕೆ ಅಟ್ಟಳೆನಾಡು ಎಂಬ ಹೆಸರಿದ್ದಿತು.

ಈ ಎಲ್ಲ ಸಿಂದ ವಂಶದ ಶಾಖೆಗಳಿಗೆ ಸಂಬಂಧಿಸಿದಂತೆ ಅವರವರ ಶಾಸನಗಳ ಈ ಸ್ಥೂಲವಾದ ಸಮೀಕ್ಷೆಯಿಂದ ತಿಳಿದು ಬರುವ ಅಂಶವೆಂದರೆ ಮೂಲ ಸಿಂದ ವಂಶದ ಪ್ರಾಚೀನತೆಯನ್ನು ಖಚಿತವಾಗಿ ನಿರ್ಧರಿಸಲಾಗದಿದ್ದರೂ, ಅದು ಕನಿಷ್ಠ ರಾಷ್ಟ್ರಕೂಟರ ಕಾಲದಿಂದ ಅಸ್ತಿತ್ವದಲ್ಲಿ ಇದ್ದಿತೆಂದೂ, ಮುಂದೆ ಬೇರೆ ಬೇರೆ ಶಾಖೆಗಳಾಗಿ ಒಡೆದು ಸೇವುಣರ ಅಂತ್ಯದವರೆಗೂ ಅಂದರೆ ಸುಮಾರು ೧೩ ನೆಯ ಶತಮಾನದ ಕೊನೆಯವರೆಗೂ ಅಲ್ಲಲ್ಲಿ ಅಧಿಕಾರದಲ್ಲಿದ್ದರೆಂಬುದು ಸೂಚಿತವಾಗುತ್ತದೆ. ಇನ್ನೊಂದು ವಿಶೇಷವೆಂದರೆ ಚಿಕ್ಕ ಚಿಕ್ಕ ಶಾಖೆಗಳಾದರೂ ಹೆಚ್ಚು ಕಡಿಮೆ ಕರ್ನಾಟಕದ ತುಂಬೆಲ್ಲಾ ಹರಡಿದ್ದು ತಿಳಿದು ಬರುತ್ತದೆ. ಮಹಾರಾಷ್ಟ್ರದ ಉಸ್ಮಾನಬಾದ ಜಿಲ್ಲೆಯ ಪಳಿಯಂಡದಿಂದ ಹಿಡಿದು ಶಿವಮೊಗ್ಗ ಜಿಲ್ಲೆಯ ಬೆಳಗುತ್ತಿ ವರೆಗೂ, ಯಲಬುರ್ಗಿ, ಬಾಗಲಕೋಟೆ, ಕುರುಗೋಡು ಹೀಗೆ ಕರ್ನಾಟಕದ ಪ್ರಮುಖ

ಭಾಗಗಳಲ್ಲಿ ಆಯಾ ಕಾಲದ ಆಳರಸರ ಅಧೀನರಾಗಿ ಅಧಿಕಾರದಲ್ಲಿದ್ದರು. ಮೇಲೆ ಉಲ್ಲೇಖಿಸಿದ ಎಲ್ಲ ಶಾಸನಗಳನ್ನೂ ಇತರ ಸಾಮಗ್ರಿಗಳನ್ನೂ ಆಧಾರವಾಗಿಟ್ಟುಕೊಂಡು ಅವುಗಳ ಕೂಲಂಕಷ ಪರಾಮರ್ಶೆ, ವಿಮರ್ಶೆಗಳಿಂದ ಈ ಮನೆತನಗಳ ಸಮಗ್ರ ಇತಿಹಾಸವನ್ನು ರಚಿಸಲು ಮುಂದಿನ ಅಧ್ಯಾಯಗಳಲ್ಲಿ ಪ್ರಯತ್ನಿಸಲಾಗಿದೆ. ಅನುಬಂಧದಲ್ಲಿ ಈವರೆಗೆ ದೊರೆತ ವಿವಿಧ ಶಾಖೆಗಳ ಸಿಂದರ ಎಲ್ಲ ಶಾಸನಗಳ ಪಾಠಗಳನ್ನು, ಅವುಗಳ ಸಾರಾಂಶದೊಂದಿಗೆ ಕೊಡಲಾಗಿದೆ.

## ಉಲ್ಲೇಖಗಳು ಮತ್ತು ಟಿಪ್ಪಣಿಗಳು :

೧ ಎಸ್.ಎಚ್. ರಿತ್ತಿ, ಸೇವುಣಸ್, ಪು. ೫೪-೫೫

೨ ಕಾರ್ಪಸ್ ಇನಸ್ಕ್ರಿಪಟಮ್ ಇಂಡಿಕಾರಮ್, ಸಂಪುಟ ೩, (ಗುಪ್ತರ ಶಾಸನ, ಶಾ.ಸಂ. ೧)

೩ ಎಸ್. ವ್ಹಿ. ಪಾಡಿಗಾರ, ಇನಸ್ಕ್ರಿಪಶನ್ಸ್ ಆಫ್ ಚಾಲುಕ್ಯಾಸ್ ಆಫ್ ಬಾದಾಮಿ ಶಾ.ಸಂ.

೪ ಝಡ್.ಕೆ. ಅನ್ಸಾರಿ ಸಮ್ ಫ್ಯುಡೆಟರಿ ಫ್ಯಾಮಿಲಿಸ್ ಆಫ್ ಮಿಡಿವಲ್ ಕರ್ನಾಟಕ ಎ ಸ್ಟಡಿ ಪು. ೩೭,

೫ ಜೆ.ಎಫ್. ಫ್ಲೀಟ್, ಡಯಾನಾಸ್ಟೀಜ್ ಆಫ್ ಕೆನರಿಸ್ ಡಿಸ್ಟ್ರೀಕ್ಟ್ (೧೮೯೬ ಪರಿಷ್ಕೃತ-ಬಾಂಬೆ ಗೆಝಿಟಿಯರ್-ಸಂಪುಟ ೧-ಭಾಗ-೨)

೬ ದಿನಕರ ದೇಸಾಯಿ, ಮಹಾಮಂಡಳೇಶ್ವರಾಸ್ ಅಂಡರ್ ದಿ ಚಾಲುಕ್ಯಸ ಆಫ್ ಕಲ್ಯಾಣ

೭ ಜೆ.ಎಮ್. ಮೊರೆಸ, ಕದಂಬ ಕುಲ

೮ ಎ.ಎಸ್. ಅಳತೆಕರ, ರಾಷ್ಟ್ರಕೂಟಸ್ ಆಂಡ್ ದೇರ್ ಟೈಮ

೯ ವಿಲಿಯಮ್ ಕೋಯಿಲೊ, ಹೊಯ್ಸಳ ವಂಶ

೧೦ ಎಸ್.ಎಚ್. ರಿತ್ತಿ, ಪೂರ್ವೋಲ್ಲಿಖಿತ.

೧೧ ಬಿ.ಆರ್. ಗೋಪಾಲ, ದಿ ಚಾಲುಕ್ಯಾಸ ಆಫ್ ಕಲ್ಯಾಣ ಆ್ಯಂಡ್ ಕಲಚುರಿಸ್, ಕ.ವಿ.ವಿ., ಧಾರವಾಡ.

೧೨ ಬಿ.ಆರ್. ಗೋಪಾಲ, ಮೈನರ್ ಡಯಾನಾಸ್ಟೀಜ ಆಫ್ ಸೌಥ್ ಇಂಡಿಯಾ, ಕರ್ನಾಟಕ, ಸಂಪುಟ, ೧

೧೩ ಝಡ್.ಕೆ. ಅನ್ಸಾರಿ, ಪೂರ್ವೋಲ್ಲಿಖಿತ.

೧೪ ಬಾಲಂಬಾಳ್, ಫ್ಯುಡಿಟರಿಸ್ ಆಫ್ ಸೌಥ ಇಂಡಿಯಾ

೧೫ ಬಿ.ವ್ಹಿ. ಶಿರೂರು, ಯಲಬುರ್ಗಿ ಸಿಂದರು, ಕ.ವಿ.ವಿ., ಧಾರವಾಡ.

೧೬ ಚನ್ನಬಸವಯ್ಯ ಹಿರೇಮಠ, ಕುರುಗೋಡಿನ ಸಿಂದರು-ಒಂದು ಅಧ್ಯಯನ

೧೭ ಎಪಿಗ್ರಾಫಿಯಾ ಇಂಡಿಕಾ ಸಂಪುಟಗಳು, ಭಾರತೀಯ ಪುರಾತತ್ವ ಸರ್ವೇಕ್ಷಣ ಇಲಾಖೆ, ದೆಹಲಿ.

೧೮ ಎಪಿಗ್ರಾಫಿಯಾ ಕರ್ನಾಟಿಕಾ ಸಂಪುಟಗಳು, ಮೈಸೂರು ವಿ.ವಿ., ಮೈಸೂರು. ಕೆಲವು ಸಂಪುಟಗಳು ಈಚೆಗೆ ಪರಿಷ್ಕೃತಗೊಂಡು ಪ್ರಕಟವಾಗಿವೆ.

೧೯ ಕರ್ನಾಟಕ ಇನಸ್ಕ್ರಿಪ್ಸನ್ಸ್, ಸಂಪುಟಗಳು ೧ರಿಂದ ೬, ಕನ್ನಡ ಸಂಶೋಧನ ಸಂಸ್ಥೆ, ಧಾರವಾಡ

೨೦ ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂಪುಟಗಳು (ಬಳ್ಳಾರಿ, ಕೊಪ್ಪಳ, ಬಾಗಲಕೋಟೆ ಮತ್ತು ಬೀದರ ಜಿಲ್ಲೆಗಳ ಸಂಪುಟಗಳು), ಹಂಪಿ ಕನ್ನಡ ವಿ.ವಿ., ವಿದ್ಯಾರಣ್ಯ, ಹಂಪಿ.

೨೧ ಸೌಥ್ ಇಂಡಿಯನ್ ಇನಸ್ಕ್ರಿಪ್ಸನ್ಸ್ ಸಂಪುಟಗಳು ೯, ೧೧, ೧೫, ೧೮ ಮತ್ತು ೨೦.

೨೨ ಎಲ್.ಡಿ. ಬಾರ್ನೆಟ್ ಇಂಡಿಯನ್ ಎಂಟಿಕ್ವರಿ ಸಂಪುಟಗಳು.

೨೩ ಜರ್ನಲ್ ಆಫ್ ಬಾಂಬೆ ಬ್ರ್ಯಾಂಚ ಆಫ್ ರಾಯಲ್ ಏಶಿಯಾಟಿಕ್ ಸೊಸೈಟಿ, ಮುಂಬೈ.

೨೪ ಎಲ್.ಡಿ. ಬಾರ್ನೆಟ್ ಎಪಿಗ್ರಾಫಿಯಾ ಇಂಡಿಕಾ ಸಂಪುಟ

೨೫ ಅದೇ.

೨೬ ಬಿ.ಎಲ್. ರೈಸ, ಎಪಿಗ್ರಾಫಿಯಾ ಕರ್ನಾಟಿಕಾ, ಸಂಪುಟಗಳು ೧೧

೨೭ ಅದೇ.

೨೮ ಸೌಥ ಇಂಡಿಯನ್ ಇನಸ್ಕ್ರಿಪ್ಸನ್ ಸಂ ೯, ಭಾಗ ೧.

೨೯ ಕರ್ನಾಟಕ ಇನಸ್ಕ್ರಿಪ್ಶನ್ಸ ಸಂಪುಟಗಳು ೪ ಮತ್ತು ೬

೩೦ ಕೆ.ವಿ. ರಮೇಶ ಇನ್ಸಕ್ರಿಪ್ಶನ್ಸ್ ಆಫ್ ದಿ ವೆಸ್ಟರ್ನ ಗಂಗಸ್, ದೆಹಲಿ.

೩೧ ಜಿ.ಎಸ್. ಗಾಯಿ ಇನ್ಸಕ್ರಿಪ್ಶನ್ಸ ಆಫ್ ದಿ ಕದಂಬಸ್, ಐ.ಸಿ.ಎಚ್.ಆರ್., ದೆಹಲಿ.

೩೨ ಪಾಡಿಗಾರ ಎಸ್.ವ್ಹಿ. ಪೂರ್ವೋಲಿಖಿತ.

೩೩ ಪಿ.ಬಿ.ದೇಸಾಯಿ, ಜೈನಿಜಮ್ ಇನ್ ಸೌಥ್ ಇಂಡಿಯಾ ಆ್ಯಂಡ್ ಸಮ್ ಜೈನ ಎಪಿಗ್ರಾಫ್ಸ, ಕೊಲ್ಲಾಪುರ.

೩೪ ಎಸ್.ಎಚ್. ರಿತ್ತಿ ಇನ್‌ಸ್ಕ್ರಿಪನ್ಸ ಫ್ರಾಮ್ ನಾಂದೇಡ ಡಿಸ್ಟ್ರೀಕ್ಟ್, ನಾಂದೇಡ

೩೫ ಎಸ್.ಎಚ್. ರಿತ್ತಿ ಇನ್‌ಸ್ಕ್ರಿಪನ್ಸ ಫ್ರಾಮ್ ಸೊಲ್ಲಾಪೂರ ಡಿಸ್ಟ್ರೀಕ್ಟ್, ಧಾರವಾಡ.

೩೬ ಎಸ್.ಎಚ್. ರಿತ್ತಿ ಇನ್‌ಸ್ಕ್ರಿಪನ್ಸ ಫ್ರಾಮ್ ಕೊಲ್ಹಾಪುರ ಡಿಸ್ಟ್ರೀಕ್ಟ್, ಕನ್ನಡ ವಿ.ವಿ., ಹಂಪಿ.

೩೭ ಎನುವಲ್ ರಿಪೋರ್ಟ್ಸ ಆನ್ ಸೌಥ್ ಇಂಡಿಯನ್ ಎಫಿಗ್ರಾಫಿ ಮತ್ತು ಎನುವಲ್ ರಿಪೋರ್ಟ್ಸ ಆನ್ ಇಂಡಿಯನ್ ಎಫಿಗ್ರಾಪಿ, ಭಾರತೀಯ ಪುರಾತತ್ವ ಇಲಾಖೆ, ದೆಹಲಿ.

೩೮ ಎಮ್.ಎ.ಆರ್. ೧೯೨೯ ನಂ. ೧ ಪು. ೫೦

೩೯ *ಸೌಥ ಇಂಡಿಯನ್ ಇನ್‌ಸ್ಕ್ರಿಪ್ಶನ್ಸ, ಸಂಪುಟ* ೧೮, ಶಾ.ಸಂ. ೩

೪೦ ಅದೇ, *ಸಂಪುಟ ೧೭*, ಶಾ.ಸಂ ೧

೪೧ ಎಸ್.ವ್ಹಿ. ಪಾಡಿಗಾರ, ಪೂರ್ವೋಲ್ಲಿಖಿತ, ಶಾ.ಸಂ. ೧೧.

೪೨ ಅದೇ, ಶಾ.ಸಂ. ೨೫

೪೩ ಎಫಿಗ್ರಾಫಿಯಾ ಕರ್ನಾಟಿಕಾ (ಹಳೆಯ) ಸಂಪುಟ ೭, ಎಚ್.ಎಲ್. ೫೦

೪೪ ಅದೇ (ಹಳೆಯ) ಸಂಪುಟ ೧೧, ಡಿ.ಜಿ. ೪೩

೪೫ ಉಪಾಯನ (ಡಿ.ಎಲ್. ನರಸಿಂಹಚಾರ್ಯ ಸನ್ಮಾನಗ್ರಂಥ), ಪು.೮೭

೪೬ ಎಫಿಗ್ರಾಫಿಯಾ ಕರ್ನಾಟಿಕಾ (ಹಳೆಯ) ಸಂಪುಟ ೭, ಎಸ್.ಕೆ. ೩೧೬

೪೭ ಸೌಥ ಇಂಡಿಯನ್ ಇನಸ್ಕ್ರೀಪನ್ಸ್ ಸಂಪುಟ ೧೫, ಶಾ.ಸಂ. ೨೩೬

೪೮ ಕರ್ನಾಟಕ ಇನಸ್ಕ್ರಿಪನ್ಸ್ ಸಂಪುಟ ೬, ಶಾ.ಸಂ. ೪

೪೯ ಚನ್ನಬಸವಯ್ಯ ಹಿರೇಮಠ, ಕುರುಗೋಡಿನ ಸಿಂದರು, ಒಂದು ಅಧ್ಯಯನ, ಪು. ೪

೫೦ ಕರ್ನಾಟಕ ಇನಸ್ಕ್ರಿಪನ್ಸ್ ಸಂಪುಟ ೬, ಶಾ.ಸಂ. ೧೧

೫೧ *ಅದೇ, ಜೆ.ಬಿ.ಬಿ.ಆರ್.ಎ.ಎಸ್. ಸಂಪುಟ ೧೧ ನಂ.೧ ಪು.ಸಂ. ೨೨೪.*

೫೨ ಅದೇ, *ಜೆ.ಬಿ.ಬಿ.ಆರ್.ಎ.ಎಸ್. ಸಂ ೧೧, ನಂ. ೧, ಪು.೨೨೪.*

೫೩ *ಜೆ.ಬಿ.ಬಿ.ಆರ್.ಎ.ಎಸ್. ಸಂಪುಟ ೧೧ ಸಂ. ೩ ಪು.ಸಂ. ೨೪೭, ಸಂ. ೪ ಪು.ಸಂ. ೨೫೩*

೫೪ ಅದೇ, ಶಾ.ಸಂ. ೫, ಪು. ೨೫೯

೫೫ ಅದೇ, ಜೆ.ಬಿ.ಬಿ.ಆರ್.ಎ.ಎಸ್. ಸಂ. ೧೧ ಪು. ೨೧೪

೫೬ ಎಫಿಗ್ರಾಫಿಯಾ ಇಂಡಿಕಾ ಸಂ. ೨೦ ಶಾ.ಸಂ. ೧೨ ಪು. ೧೦೯-೧೨೨ ಎ ಮತ್ತು ಬಿ

೫೭ ಸೌಥ ಇಂಡಿಯನ್ ಇನ್ಸಸ್ಕಿಪಿಶನ್ ಸಂ. ೧೫, ನಂ. ೨೩೮

೫೮ ಅದೇ, ಸೌಥ ಇಂಡಿಯನ್ ಇನ್ಸಸ್ಕ್ರಿಪಶನ್ ಸಂ. ೧೫, ನಂ ೨೩೫-೨೪೩

೫೯ ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೧ (ಬಳ್ಳಾರಿ ಜಿಲ್ಲೆ), ಶಾ.ಸಂ. ೨೦, ಪು. ೨೯

೬೦ ಸೌಥ್ ಇಂಡಿಯನ್ ಇನ್ಸಸ್ಕ್ರಿಪಶನ್ ಸಂ. ೯, ಭಾಗ ೧, ಶಾ. ಸಂ. ೬೫

೬೧ ಎಪಿಗ್ರಾಫಿಯಾ ಇಂಡಿಕಾ, ಸಂ. ೧೪, ನಂ. ೧೮, ಪು-೨೩೦

೬೨ ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೧ (ಬಳ್ಳಾರಿ ಜಿಲ್ಲೆ), ಶಾ.ಸಂ. ೮

೬೩ ಅದೇ, ಶಾ. ಸಂ.೪೫

೬೪ ಅದೇ, ಶಾ. ಸಂ. ೮

೬೫ ಅದೇ, ಶಾ. ಸಂ.೧೮

೬೬ ಅದೇ, ಶಾ. ಸಂ. ೧, ೨

೬೭ ಅದೇ, ಶಾ.ಸಂ. ೪೧

೬೮ ಎಪಿಗ್ರಾಫಿಯಾ ಇಂಡಿಕಾ ಸಂ. ३, ನಂ. ३३

೬೯ ಎಪಿಗ್ರಾಫಿಯಾ ಕರ್ನಾಟಕಾ ಸಂ. ೧೧, ಡಿ.ಜಿ. ೪३

೭೦ ಎಪಿಗ್ರಾಫಿಯಾ ಇಂಡಿಕಾ ಸಂ. ೧೪, ನಂ. ೧೦೯, ಪು. ೧೨೨

೭೧ ಬಿ.ಆರ್. ಗೋಪಾಲ, ಮಾನವೀಕ ಕರ್ನಾಟಕ ಸಂ. ೪, ಸಂಚಿಕೆ ೨, ಪು. ३३-३೮

೭೨ ಬಿ.ಆರ್. ಗೋಪಾಲ, ಮೈನರ್ ಡಯಾನಸ್ಟಿಜ್ ಆಫ್ ಸೌಥ್ ಇಂಡಿಯಾ – ಕರ್ನಾಟಕ

೭३ ಎಸ್.ಎಚ್. ರಿತ್ತಿ, ಸೇವುಣಸ್ (ಯಾದವಸ್ ಆಫ್ ದೇವಗಿರಿ) ಪು. ೬

# ಅಧ್ಯಾಯ ೨

## ಪ್ರಸ್ತುತ ಅಭ್ಯಾಸದ ಕಾಲದ ರಾಜಕೀಯ ಸ್ಥಿತಿಗತಿಗಳು

# ಅಧ್ಯಾಯ ೨

## ಪ್ರಸ್ತುತ ಅಭ್ಯಾಸದ ಕಾಲದ ರಾಜಕೀಯ ಸ್ಥಿತಿಗತಿಗಳು

ಪ್ರಸ್ತುತ ಅಭ್ಯಾಸದ ವಿಷಯದ ಕಾಲವು, ಅಂದರೆ ಸುಮಾರು ೬ ರಿಂದ ೧೪ನೇ ಶತಮಾನದ ವರೆಗಿನ ಕಾಲವು, ಕರ್ನಾಟಕದ ಇತಿಹಾಸದಲ್ಲಿ ಮಹತ್ವದ ಕಾಲಘಟ್ಟವಾಗಿದ್ದಿತು. ಈ ಕಾಲದಲ್ಲಿಯೇ ಅತ್ಯಂತ ಪ್ರಮುಖ ರಾಜಮನೆತನಗಳಾದ ಬಾದಾಮಿಯ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಕಳಚೂರಿಗಳು, ಸೇವುಣರು ಮತ್ತು ಹೊಯ್ಸಳರು ಈ ಕಾಲದಲ್ಲಿಯೇ ಆಡಳಿತ ನಡೆಸಿದರು. ಹಾಗೆ ನೋಡಿದರೆ ಇದು ಕರ್ನಾಟಕ ಇತಿಹಾಸದ ಉಚ್ಛ್ರಾಯ ಕಾಲವಾಗಿತ್ತೆಂದು ಹೇಳಬಹುದು. ಕದಂಬರಿಂದ ಅಧಿಕಾರವನ್ನು ಪಡೆದ ಬಾದಾಮಿ ಚಾಲುಕ್ಯರ ಕಾಲದಲ್ಲಿಯೇ ವಿಶಾಲ ಕರ್ನಾಟಕವು ರೂಪಗೊಂಡಿತೆಂದು ಹೇಳಬಹುದು. ರಾಜಕೀಯವಾಗಿ ನರ್ಮದಾ ನದಿಯಿಂದ ಕಾವೇರಿವರೆಗೆ ಮತ್ತು ಪೂರ್ವ ಸಮುದ್ರದಿಂದ ಪಶ್ಚಿಮ ಸಮುದ್ರವರೆಗಿನ ಎಲ್ಲ ಭೂಭಾಗವು ಈ ಸಾಮ್ರಾಜ್ಯದಲ್ಲಿ ಒಳಗೊಂಡಿದ್ದಿತು. ಈ ಸಾಮ್ರಾಜ್ಯದ ಸಂಸ್ಥಾಪಕನಾದ ೧ನೇ ಪುಲಕೇಶಿಯು ಬಾದಾಮಿಯಲ್ಲಿ ಕೋಟೆಯನ್ನು ಕಟ್ಟಿಸಿ ಭದ್ರಬುನಾದಿ ಹಾಕಿದನು. ನಂತರ ಬಂದ ಅರಸರು ಸಾಮ್ರಾಜ್ಯವನ್ನು ವಿಸ್ತರಿಸುತ್ತ ಹೋದರು. ಚಿಕ್ಕಪುಟ್ಟ ರಾಜ್ಯಗಳಾದ ಕದಂಬ, ಗಂಗ, ಸೇಂದ್ರಕ ಮುಂತಾದ ರಾಜಮನೆತನಗಳು ಈ ಸಾಮ್ರಾಜ್ಯದ ಭಾಗಗಳಾದವು. ಆ ನಂತರ ೨ನೇ ಪುಲಕೇಶಿಯಂತೂ ಎಲ್ಲ ದಿಕ್ಕುಗಳಲ್ಲಿ ದಿಗ್ವಿಜಯ ಕೈಗೊಂಡು ನರ್ಮದಾ ನದಿಯವರೆಗೆ ಸಾಗಿ ಉತ್ತರಾಪಥದ ಕನೋಜದ ಶ್ರೀ ಹರ್ಷನನ್ನು ಸೋಲಿಸಿ 'ಪರಮೇಶ್ವರ' ಎಂಬ ಬಿರುದು ಪಡೆದನು. ರಾಜಕೀಯ ಪ್ರಾಮುಖ್ಯತೆಯ ಜೊತೆಗೆ ಸಾಹಿತ್ಯ, ಧರ್ಮ, ಕಲೆಗಳು ಅಭೂತಪೂರ್ವವಾಗಿ ಬೆಳೆದವು. ವಿಶಾಲಸಾಮ್ರಾಜ್ಯದ ನಿರ್ವಹಣೆಗಾಗಿ ದಕ್ಷ ಆಡಳಿತ ಪದ್ಧತಿಯು ರೂಪಿತವಾಯಿತು. ಮುಂದಿನ ಶತಮಾನಗಳಲ್ಲಿ ಅಧಿಕಾರಕ್ಕೆ ಬಂದ ರಾಜಮನೆತನಗಳಿಗೆ ಇದೇ ಮಾದರಿ ಪದ್ಧತಿಯಾಯಿತು. ಎಲ್ಲ ಕ್ಷೇತ್ರಗಳಲ್ಲಿ ಈ ಕಾಲದಲ್ಲಿ ರೂಪಗೊಂಡ ಸಂಪ್ರದಾಯಗಳು, ಮುಂದಿನ ಶತಮಾನಗಳಲ್ಲಿ ಮುಂದುವರೆದವು.

ಈ ಕಾಲದಲ್ಲಿಯೇ ಅನೇಕ ಸಾಮಂತ ಮನೆತನಗಳು ತಲೆಎತ್ತಿದವು. ಸಾಮಂತ ಮತ್ತು ಆಡಳಿತ ಮನೆತನಗಳ ಸಂಬಂಧಗಳು ಈಗಲೇ ರೂಪಗೊಂಡವು. ಆಳರಸರು ರಾಜ್ಯವಿಸ್ತರಣೆಗಾಗಿ, ರಾಜ್ಯರಕ್ಷಣೆಗಾಗಿ ಸಾಮಂತರ ಮೇಲೆ ಅವಲಂಬಿಸಿದುದರಿಂದ

ಸಾಮಂತಮನೆತನಗಳಿಗೆ ಒಂದು ಸುಭದ್ರ ನೆಲೆ ದೊರೆಯಿತು. ರಾಜ್ಯದ ಸರ್ವತೋಮುಖ ಬೆಳವಣಿಗೆಯಲ್ಲಿ ಅವರ ಪಾತ್ರ ಬಹಳ ಮಹತ್ವದಾಯಿತು. ಬಾದಾಮಿ ಚಾಲುಕ್ಯರ ಕಾಲದಲ್ಲಿ ಮೌರ್ಯ, ಕದಂಬ, ಆಳುಪರಂತಹ ಪ್ರಮುಖ ಮಾಂಡಲೀಕ ಮನೆತನಗಳಿದ್ದವು. ಸೇಂದ್ರಕ ಮನೆತನ ತಲೆ ಎತ್ತಿದ್ದು ಈ ಕಾಲದಲ್ಲಿಯೇ ಸಾಹಿತ್ಯ ಹಾಗೂ ಕಲೆ ದೃಷ್ಟಿಯಿಂದಲೂ ಈ ಕಾಲ ಮಹತ್ವದ್ದಾಗಿದೆ. ೨ನೇ ಪುಲಕೇಶಿಯ ಸೊಸೆ ಚಂದ್ರಾದಿತ್ಯನ ಹೆಂಡತಿ, ವಿಜಯಮಹಾದೇವಿ ಅಥವಾ ವಿಜಯಕ್ಕ ಎಂಬವಳು ಈ ಕಾಲದ ಶ್ರೇಷ್ಠ ಸಂಸ್ಕೃತ ಕವಯಿತ್ರಿ ಎನಿಸಿದ್ದಳು. ತಾನು ಕಾಳಿದಾಸನಿಗೆ ಸರಿಸಮಾನಳಾಗಿದ್ದಳೆಂದು ಹೇಳಿಕೊಳ್ಳುವಷ್ಟು ಪ್ರಸಿದ್ಧಳಾಗಿದ್ದಳು. ಈ ಅರಸರ ಒಂದು ವೈಶಿಷ್ಟ್ಯವೆಂದರೆ ಕನ್ನಡಕ್ಕೆ ಅಧಿಕೃತ ಸ್ಥಾನಮಾನವನ್ನು ದೊರಕಿಸಿಕೊಟ್ಟಿದುದು. ಇಲ್ಲಿಯವರೆಗೆ ಶಾಸನಗಳಲ್ಲಿ ಸಂಸ್ಕೃತವೇ ಪ್ರಧಾನ ಭಾಷೆಯಾಗಿದ್ದಿತು. ಈಗ ಕನ್ನಡ ಭಾಷೆ, ಸಂಸ್ಕೃತದ ಜೊತೆ ಜೊತೆಯಾಗಿ ಉಪಯೋಗಿಸಲ್ಪಡತೊಡಗಿತು. ಈ ಪದ್ಧತಿ ಮುಂದುವರೆದು ಬರಬರುತ್ತ ಮುಂದಿನ ಕಾಲದಲ್ಲಿ ಕನ್ನಡವೇ ಶಾಸನಗಳ ಪ್ರಧಾನ ಅಧಿಕೃತ ಭಾಷೆಯಾಗಿ ಬೆಳೆಯಿತು.

ಈ ಕಾಲದ ರಾಜಕೀಯ ಬೆಳವಣಿಗೆ ಎಂದರೆ ದಕ್ಷಿಣದಲ್ಲಿ ಪಲ್ಲವರ ಉಚ್ಛ್ರಾಯದ ಕಾಲ. ಆಗಿನಿಂದ ಈ ಎರಡೂ ಅಂದರೆ ಬಾದಾಮಿ ಚಾಲುಕ್ಯ ಮತ್ತು ಪಲ್ಲವರ ನಡುವೆ ಮೇಲ್ಮೆಗಾಗಿ ಸ್ಪರ್ಧೆ ಏರ್ಪಟ್ಟಂತಾಯಿತು. ಎರಡೂ ಮನೆತನಗಳ ನಡುವಿನ ವೈರತ್ವ ಬೆಳೆಯುತ್ತಲೇ ಹೋಯಿತು. ಅದು ಎಲ್ಲಿಯವರೆಗೆ ಹೋಯಿತೆಂದರೆ ಇಬ್ಬರೂ 'ಪ್ರಕೃತಿ ಅಮಿತ್ರರು' ಅಂದರೆ ಸಹಜ ವೈರಿಗಳು ಎಂದು ರಾಜಕೀಯದಲ್ಲಿ ಗುರುತಿಸಲ್ಪಡುವಂತಾಯಿತು. ೨ನೇ ಪುಲಕೇಶಿಯ ಕಾಲಕ್ಕೆ ಪಲ್ಲವ ನರಸಿಂಹವರ್ಮನು ಬಾದಾಮಿ ಚಾಲುಕ್ಯರ ಮೇಲೆ ದಾಳಿ ಇಟ್ಟು ಬಾದಾಮಿ ಕೋಟೆಯನ್ನು ಆಕ್ರಮಿಸಿದನು (ಕ್ರಿ.ಶ. ೬೪೨). ಅಲ್ಲಿಗೆ ೨ನೇ ಪುಲಕೇಶಿಯ ಕೊನೆಯಾಯಿತು. ೧೦-೧೨ ವರ್ಷಗಳ ಕಾಲ ಚಾಲುಕ್ಯ ಸಾಮ್ರಾಜ್ಯ ಕತ್ತಲೆಯಲ್ಲಿ ಉಳಿಯಿತು. ಮುಂದೆ ಕ್ರಿ.ಶ. ೬೫೫ ರಲ್ಲಿ ಪುಲಕೇಶಿಯ ಮಗ ೧ನೆಯ ವಿಕ್ರಮಾದಿತ್ಯನು ಬಾದಾಮಿಯನ್ನು ಪಲ್ಲವರ ಹಿಡಿತದಿಂದ ಬಿಡಿಸಿಕೊಂಡನು. ಇಷ್ಟಾದರೂ ಎರಡೂ ಮನೆತನಗಳ ನಡುವಿನ ವೈರತ್ವವೇನೂ ನಿಲ್ಲಲಿಲ್ಲ. ಮುಂದಿನ ಎಲ್ಲ ಚಾಲುಕ್ಯ ಅರಸರು, ಎಲ್ಲ ಪಲ್ಲವ ಅರಸರೊಡನೆ ಹೋರಾಡುವುದು ನಿಲ್ಲಲಿಲ್ಲ. ಮುಂದೆ ೨ನೇ ವಿಕ್ರಮಾದಿತ್ಯನು ಪಲ್ಲವರ ರಾಜಧಾನಿ ಕಂಚಿಯನ್ನು ವಶಪಡಿಸಿಕೊಂಡು, ಪಲ್ಲವರ ಮೇಲಿನ ಸೇಡನ್ನು ತೀರಿಸಿಕೊಂಡನು. ಈ ವಿಕ್ರಮಾದಿತ್ಯನ ಆಳಿಕೆ ಕಾಲವು ರಾಜಕೀಯವಾಗಿ ಮಹತ್ವದ್ದು. ಇದೇ ಕಾಲಕ್ಕೆ ಅರಬ್ಬರು ಸಿಂಧವನ್ನು ಪ್ರವೇಶಿಸಿ ಚಾಲುಕ್ಯ ರಾಜ್ಯದಲ್ಲಿ

ಕಾಲಿಡತೊಡಗಿದರು. ಲಾಟ ದೇಶದ ಚಾಲುಕ್ಯ ಮನೆತನದ ಧರಾಶ್ರಯ ಜಯಸಿಂಹನು ಅರಬ್ಬರನ್ನು ಹಿಮ್ಮೆಟ್ಟಿಸಿದನು. ಇವನ ಮಗ ೨ನೇ ಕೀರ್ತಿವರ್ಮನು ಈ ಚಾಲುಕ್ಯ ಮನೆತನದ ಕೊನೆಯ ಅರಸನಾದನು. ಈ ಹೊತ್ತಿಗೆ ಚಾಲುಕ್ಯರ ಪ್ರಾಬಲ್ಯ ಇಳಿಮುಖವಾಗತೊಡಗಿತು. ರಾಷ್ಟ್ರಕೂಟ ದಂತಿದುರ್ಗನಂತಹ ಸಾಮಂತರು ಪ್ರಬಲರಾಗ ತೊಡಗಿದರು. ಚಾಲುಕ್ಯ ಶಾಸನಗಳೇ ಹೇಳುವಂತೆ ೨ನೇ ಕೀರ್ತಿವರ್ಮನು ಅಳ್ಳೆದೆಯವನಾಗಿದ್ದನು.[೧] ದಂತಿದುರ್ಗ ಪ್ರಬಲನಾಗುತ್ತ ಇಂದಿನ ಮರಾಠವಾಡ ಪ್ರದೇಶದಲ್ಲಿ ಸ್ವತಂತ್ರ ರಾಜನಂತೆ ವರ್ತಿಸತೊಡಗಿದ.

ಮೊಟ್ಟಮೊದಲ ವಿಶಾಲ ಕರ್ನಾಟಕವನ್ನು ಸ್ಥಾಪಿಸಿದ ಈ ಬಾದಾಮಿ ಚಾಲುಕ್ಯರು ಲಾಟ, ವೆಂಗಿ ಪ್ರದೇಶಗಳನ್ನು ಆಳತೊಡಗಿದರು. ಮೇಲೆ ಹೇಳಿದಂತೆ ದಕ್ಷ ಆಡಳಿತ ಪದ್ಧತಿಯನ್ನು ಇವರು ರೂಪಿಸಿದರು. ಜೊತೆಗೆ ಸಾಮಂತ ಅಥವಾ ಮಾಂಡಲೀಕ ಪದ್ಧತಿ ನಿಶ್ಚಿತ ಸ್ವರೂಪ ಪಡೆಯಿತು.

ಚಾಲುಕ್ಯರ ನಂತರ ದಕ್ಷಿಣಾಪಥದಲ್ಲಿ ಅಧಿಕಾರಕ್ಕೆ ಬಂದ ರಾಷ್ಟ್ರಕೂಟರ, ಮುಖ್ಯ ಕೇಂದ್ರ ಮರಾಠವಾಡಾ ಪ್ರದೇಶದಲ್ಲಿಯ ಎಲ್ಲೋರಾ ಆಗಿದ್ದಿತು. ಅಧಿಕಾರ ವಿಸ್ತರಣೆ ಆದ ಮೇಲೆ ಗುಲ್ಬರ್ಗಾ ಜಿಲ್ಲೆಯಲ್ಲಿನ ಮಳಖೇಡವನ್ನು ರಾಜಧಾನಿಯನ್ನಾಗಿ ಮಾಡಿಕೊಂಡರು. ಚಾಲುಕ್ಯರಿಂದ ನಿರ್ಮಾಣಗೊಂಡಿದ್ದ ವಿಶಾಲ ಕರ್ನಾಟಕ ಸಾಮ್ರಾಜ್ಯವು ಇವರ ಕಾಲದಲ್ಲಿ ಇನ್ನಷ್ಟು ಉಚ್ಚಸ್ಥಿತಿಗೆ ಏರಿತು. ದಂತಿದುರ್ಗನ ನಂತರ ಪಟ್ಟಕ್ಕೆ ಬಂದ ಅವನ ಚಿಕ್ಕಪ್ಪನಾದ ೧ನೇ ಕೃಷ್ಣನು ಚಾಲುಕ್ಯ ೨ನೇ ಕೀರ್ತಿವರ್ಮನನ್ನು ಸಂಪೂರ್ಣವಾಗಿ ಸೋಲಿಸಿ, ಚಾಲುಕ್ಯ ಬೆಂಬಲಿಗರಾಗಿದ್ದ ಮಾಂಡಲಿಕರನ್ನು ಸದೆಬಡೆದು ಆಯಾ ಪ್ರದೇಶಗಳಲ್ಲಿ ತನ್ನ ಮಾಂಡಲೀಕರನ್ನು ನೇಮಿಸಿದನು. ಕೊಂಕಣ ಪ್ರದೇಶಗಳನ್ನು ವಶಪಡಿಸಿಕೊಂಡು. ಅಲ್ಲಿ ಶಿಲಾಹಾರ ಮನೆತನದ ಸಾಮಂತರನ್ನು ನೇಮಿಸಿದನು. ತಲಕಾಡಿನ ಗಂಗರನ್ನು ತನ್ನ ಆಧಿನರನ್ನಾಗಿರಿಸಿಕೊಂಡನು. ೧ನೇ ಕೃಷ್ಣನ ಅತಿ ಮಹತ್ವದ ಸಾಧನೆ ಎಂದರೆ ಶಿಲ್ಪಶಾಸ್ತ್ರದ ಅದ್ಭುತವೆನಿಸಿದ ಒಂದೇ ಬಂಡೆಯಲ್ಲಿ ಎಲ್ಲೊರಾದಲ್ಲಿ ನಿರ್ಮಿಸಿದ ಕೈಲಾಸನಾಥ ಬೃಹತ್ ದೇವಾಲಯ. ಮುಂದಿನ ಅರಸರಾದ ೨ನೇ ಗೋವಿಂದ, ದ್ರುವ ಮತ್ತು ೩ನೇ ಗೋವಿಂದ, ಇವರು ರಾಷ್ಟ್ರಕೂಟ ಪ್ರಭಾವವನ್ನು ಗಂಗಾನದಿ ತಟದವರೆಗೆ ಹಬ್ಬಿಸಿದ್ದರು. ಈ ಪ್ರಕ್ರಿಯೆಯಲ್ಲಿ ಗುರ್ಜರ ಪ್ರತೀಹಾರ, ಪಾಲ, ಮತ್ತು ಕನೋಜ ಅರಸರೊಡನೆ ಸೆಣಸಾಡಬೇಕಾಯಿತು. ಒಂದು ಕಾಲಕ್ಕೆ ರಾಷ್ಟ್ರಕೂಟ ಅರಸರನ್ನು ವಿರೋಧಿಸುವವರೇ ಇಲ್ಲವೆನ್ನುವಷ್ಟು ಪ್ರಖ್ಯಾತಿ ಪಡೆಯಿತು. ದ್ರುವನ ಮಗ ೩ನೇ ಗೋವಿಂದನು ಅಷ್ಟೇ

ಪ್ರಭಾವಶಾಲಿಯಾಗಿದ್ದನು. ಉತ್ತರದ ಗುರ್ಜರ ಪ್ರತೀಹಾರ ಮತ್ತು ಕನೋಜದ ಅರಸರನ್ನು ಎದುರಿಸಿದ್ದಲ್ಲದೆ ದಕ್ಷಿಣದಲ್ಲಿ ಪಲ್ಲವ ದಂತಿವರ್ಮನನ್ನು ಮಣಿಸಿದನು.

೩ನೇ ಗೋವಿಂದನ ಮಗ ೧ನೇ ಅಮೋಘ ವರ್ಷನ ಆಳಿಕೆಯು ಸುಧೀರ್ಘವಾಗಿದ್ದರೂ ಅವನು ಗಂಗ, ಪೂರ್ವಚಾಲುಕ್ಯ ಮತ್ತು ಪಲ್ಲವರ ವಿರೋಧವನ್ನು ಎದುರಿಸಬೇಕಾಯಿತು. ಈ ಪ್ರಸಂಗದಲ್ಲಿ ಲಾಟ ಪ್ರದೇಶವನ್ನು ಆಳುತ್ತಿದ್ದ ಕರ್ಕನು ಇವನಿಗೆ ಬೆಂಬಲವಾಗಿ ನಿಂತನು. ಇವನ ಕಾಲದಲ್ಲಿ ಮಳಖೇಡವು ರಾಜಧಾನಿಯಾಗಿ ಪ್ರಸಿದ್ಧಿ ಪಡೆಯಿತು. ಸಾಹಿತ್ಯ, ಧರ್ಮಗಳಲ್ಲಿ ಇವನಿಗೆ ಆಸಕ್ತಿ ಇದ್ದಿತು. ಕನ್ನಡದ ಮೊಟ್ಟ ಮೊದಲ ಕೃತಿಯೆನಿಸಿದ ಕವಿರಾಜಮಾರ್ಗವು ಇವನಿಂದಲೇ ರಚಿತವಾಯಿತು ಎಂಬ ನಂಬಿಕೆ ಇದ್ದರೂ, ಕನಿಷ್ಟ ಇವನ ಪ್ರೇರಣೆಯಿಂದ ಶ್ರೀವಿಜಯ ಎಂಬುವನು ರಚಿಸಿದನು ಎಂದು ಹೇಳುವ ಒಂದು ಅಭಿಪ್ರಾಯ ಕೂಡ ಇದೆ. ಇವನ ಮಗ ೨ನೇ ಕೃಷ್ಣನು, ತಂದೆಯನ್ನು ವಿರೋಧಿಸಿ ತಾನೇ ಪಟ್ಟವನ್ನು ಏರಿದನು. ಈ ಕೃಷ್ಣನು ಉತ್ತರದ ಗುರ್ಜರ ಪ್ರತೀಹಾರ, ಭೋಜರು, ವೆಂಗಿ ಚಾಲುಕ್ಯರು ಇವರ ವಿರೋಧವನ್ನು ಎದುರಿಸಬೇಕಾಯಿತು. ದಕ್ಷಿಣದಲ್ಲಿ ಪಲ್ಲವರ ಆಳಿಕೆ ಮುಗಿದು ಚೋಳರ ಆಳಿಕೆ ಆರಂಭವಾಗಿದ್ದಿತು. ಕೃಷ್ಣನು ಅವರೊಡನೆ ಹೋರಾಡಬೇಕಾಯಿತು. ಉತ್ತರದಲ್ಲಿಯೂ ಇವನ ಪ್ರಭಾವ ಅಳಿಯಿತು. ನಂತರ ಬಂದ ಇವನ ಮೊಮ್ಮಗ ೩ನೇ ಇಂದ್ರನು ಮರೆಯಾಗಿದ್ದ ರಾಷ್ಟ್ರಕೂಟರ ಪ್ರಭಾವವನ್ನು ಮರಳಿ ಸ್ಥಾಪಿಸಿದನು. ಉತ್ತರದಲ್ಲಿ ಗುರ್ಜರ ಪ್ರತೀಹಾರ, ಕನೋಜ ಪ್ರದೇಶಗಳಲ್ಲಿ ತನ್ನ ಪ್ರಭಾವವು ಉಳಿಯುವಂತೆ ಮಾಡಿದನು. ಇವನ ಮಗ ೨ನೇ ಅಮೋಘವರ್ಷನ ಆಳಿಕೆ ಅಲ್ಪ ಕಾಲದ್ದಾಗಿದ್ದಿತು. ನಂತರ ಬಂದ ಅವನ ತಮ್ಮ ೪ನೇ ಗೋವಿಂದನಾಗಲಿ, ಅವನ ನಂತರ ಅಧಿಕಾರಕ್ಕೆ ಬಂದ ಚಿಕ್ಕಪ್ಪ ೩ನೇ ಅಮೋಘವರ್ಷನಾಗಲಿ ಪ್ರಭಾವಶಾಲಿಗಳಾಗಿರಲಿಲ್ಲ.

ಈ ಅವಧಿಯಲ್ಲಿ ಮಹತ್ವಾಕಾಂಕ್ಷಿಯಾದ ಇವನ ಮಗ ೩ನೇ ಕೃಷ್ಣನು ರಾಜ್ಯದ ಆಡಳಿತವನ್ನು ತನ್ನ ಕೈಗೆ ತೆಗೆದುಕೊಂಡನು. ಇಡಿ ದಕ್ಷಿಣಾಪಥದಲ್ಲಿ ರಾಷ್ಟ್ರಕೂಟರ ಪ್ರಭಾವ ಮತ್ತೆ ಹಬ್ಬುವಂತೆ ಮಾಡಿದನು. ಇವನ ಮುಖ್ಯ ಸಾಧನೆ ಎಂದರೆ ದಕ್ಷಿಣದಲ್ಲಿ ಚೋಳರನ್ನು ಸೆದೆಬಡೆದುದು. ಚೋಳರ ರಾಜಧಾನಿಯಾದ ತಂಜಾವೂರನ್ನು ಮತ್ತು ಕಂಚಿಯನ್ನು ವಶಪಡಿಸಿಕೊಂಡು, ಆ ಪ್ರದೇಶದಲ್ಲಿ ರಾಷ್ಟ್ರಕೂಟರ ಸತ್ತೆಯನ್ನು ಸ್ಥಾಪಿಸಿದನು. 'ಕಚ್ಚೆಯುಂ, ತಂಜೆಯುಂಕೊಂಡ' ಎಂದರೆ ಕಂಚಿಯನ್ನು, ತಂಜಾವೂರನ್ನು ಗೆದ್ದುಕೊಂಡವನು ಎಂಬ ಬಿರುದನ್ನು ಪಡೆದನು. ರಾಷ್ಟ್ರಕೂಟ ಮನೆತನದಲ್ಲಿ ಇವನೇ ಕೊನೆಯ ಪ್ರಭಾವಿ ಅರಸನು. ಇವನ

ಆಳಿಕೆ ಕ್ರಿ. ಶ. ೯೭೭ ರಲ್ಲಿ ಅಂತ್ಯಗೊಂಡಿತು. ಅದರೊಡನೆ ರಾಷ್ಟ್ರಕೂಟರ ಪ್ರಭಾವವು ಇಳಿಮುಖವಾಯಿತು. ನಂತರ ಬಂದ ಇವನ ತಮ್ಮ ಖೊಟ್ಟಿಗನಿಗೆ ಸುತ್ತಲಿನ ಅರಸರ ಮತ್ತು ರಾಜ್ಯದಲ್ಲಿಯ ಸಾಮಂತರ ವಿರೋಧವನ್ನು ಎದುರಿಸಲಾಗಲಿಲ್ಲ. ಉತ್ತರದ ಪರಮಾರ ಸೀಯಕ ಹರ್ಷನು ಬೆನ್ನಟ್ಟಿ ಬಂದು ಮಳಖೇಡವನ್ನು ಸೂರೆಗೊಂಡನು. ನಂಬಿಗಸ್ಥ ಸಾಮಂತನಾದ ಗಂಗ ೨ನೇ ಮಾರಸಿಂಹನು ವೈರಿಯೊಡನೆ ಹೋರಾಡಿದರು, ಸಾಮ್ರಾಜ್ಯಕ್ಕೆ ಅಘಾತ ತಪ್ಪಲಿಲ್ಲ. ಮುಂದಿನ ಅರಸರಾದ ೨ನೇ ಕರ್ಕನಿಗೆ ಈ ಪ್ರಕ್ಷುಬ್ಧ ಪರಿಸ್ಥಿಯನ್ನು ಎದುರಿಸಲಾಗಲಿಲ್ಲ. ಇದೇ ಹೊತ್ತಿಗೆ, ಸದಾವಕಾಶಕ್ಕೆ ಕಾಯುತ್ತಿದ್ದ ಚಾಲುಕ್ಯರ ೨ನೇ ತೈಲಪನು ಬಂಡೆದ್ದು ಕೊನೆಯಲ್ಲಿ ರಾಷ್ಟ್ರಕೂಟರನ್ನು ಅಳಿಸಿ ಚಾಲುಕ್ಯ ರಾಜ್ಯವನ್ನು ಪುನಃ ಸ್ಥಾಪಿಸಿದನು. ಇದು ಕ್ರಿ.ಶ. ೯೭೩ರಲ್ಲಿ ಸಂಭವಿಸಿತು.[೨]

ಚಾಲುಕ್ಯರ ಪುನರಾಗಮನದಿಂದ ದಕ್ಷಿಣ ಪಥದಲ್ಲಿ ಉಚ್ಛ್ರಾಯದ ನವೀನ ಅಧ್ಯಾಯ ಆರಂಭವಾಯಿತು. ಮುಂದಿನ ಸುಮಾರು ೨೦೦ ವರ್ಷಗಳ ಕಾಲ, ಕರ್ನಾಟಕದಲ್ಲಿ ಸುಭದ್ರ ಆಳಿಕೆ ನೆಲೆಗೊಂಡು ಧರ್ಮ, ಸಾಹಿತ್ಯ, ಕಲೆ, ವಾಸ್ತುಶಿಲ್ಪ, ಆರ್ಥಿಕತೆ, ಸಂಸ್ಕೃತಿ, ಹೀಗೆ ಎಲ್ಲ ಕ್ಷೇತ್ರಗಳಲ್ಲಿ ಅಪೂರ್ವವಾದ ಬೆಳವಣಿಗೆಯಾಯಿತು. ಕನ್ನಡ ಸಾಹಿತ್ಯ ವಿಪುಲವಾಗಿ ಬೆಳೆಯಿತು. ಚಾಲುಕ್ಯ ಅರಸರ, ವಿಶೇಷ ಕೊಡುಗೆ ಎಂದರೆ ನಮಗೆಲ್ಲ ಅತ್ಯಂತ ಮಹತ್ವದ ಐತಿಹಾಸಿಕ ಸಾಧನೆಗಳೆನಿಸಿದ ಶಿಲಾಶಾಸನಗಳ ಸೃಷ್ಟಿ. ಈ ಮನೆತನದ ಪ್ರತಿಯೊಬ್ಬ ಅರಸನು ಬಹುಸಂಖ್ಯೆಯಲ್ಲಿ ಶಾಸನಗಳನ್ನು ಬರೆಯಿಸಿದನು. ಇದರಿಂದ ಐತಿಹಾಸಿಕ ದಾಖಲೆಗಳು ವಿಪುಲವಾಗಿ ದೊರೆಯುವಂತಾಯಿತಲ್ಲದೆ, ಆಗಿನ ಕಾಲದಲ್ಲಿ ಲಿಪಿ ಮತ್ತು ಸಾಹಿತ್ಯದ ತ್ವರಿತ ಬೆಳವಣಿಗೆಗೆ ಅತ್ಯಂತ ಸಹಾಯಕವಾಯಿತು. ಸ್ಥೂಲವಾಗಿ ಹೇಳಬೇಕೆಂದರೆ, ಕರ್ನಾಟಕದಲ್ಲಿ ದೊರೆತ ಎಲ್ಲ ರಾಜಮನೆತನಗಳ ಶಾಸನಗಳನ್ನು ಒಟ್ಟು ಜೋಡಿಸಿದರೆ, ಅರ್ಧದಷ್ಟು ಶಾಸನಗಳು ಈ ಚಾಲುಕ್ಯರವೇ ಇವೆ.

ತೈಲನು ಆರಂಭಿಸಿದ ಕಾರ್ಯವನ್ನು ನಂತರ ಬಂದ ಇರಿವಬೆಡಂಗ ಸತ್ಯಾಶ್ರಯ ಮತ್ತು ೧ನೇ ಸೋಮೇಶ್ವರ ಸಾಮ್ರಾಜ್ಯದ ವಿಸ್ತರಣೆಯ ಕಾರ್ಯವನ್ನು ಮುಂದುವರೆಸಿದರು. ಉತ್ತರದಲ್ಲಿ ಪರಮಾರರು ಮತ್ತು ದಕ್ಷಿಣದಲ್ಲಿ ಚೋಳರು, ಇವರ ಪರಮ ವೈರಿಗಳಾಗಿದ್ದರು.

ಪರಮಾರ ಮುಂಜನು ಸಂಪೂರ್ಣವಾಗಿ ಸೋಲಿಸಲ್ಪಟ್ಟನು. ಆದರೆ ಚೋಳರೊಡನೆ ವೈರತ್ವ ತಲೆಮಾರಿನವರೆಗೆ ಮುಂದುವರೆಯುತ್ತಲೇ ಬಂದಿತು. ಬಾದಾಮಿ ಚಾಲುಕ್ಯರಿಗೆ ಪಲ್ಲವರು ಪ್ರಕೃತಿ ಅಮಿತ್ರರಿದ್ದಂತೆ. ಕಲ್ಯಾಣದ ಚಾಲುಕ್ಯರಿಗೆ, ಚೋಳರು ನಿರಂತರ ವೈರಿಗಳಾದರು. ಚಾಲುಕ್ಯ

ಸೋಮೇಶ್ವರ, ಚೋಳ ೧ನೇ ರಾಜಾಧಿರಾಜ ಮತ್ತು ಅವನ ತಮ್ಮ ೨ನೇ ರಾಜೇಂದ್ರರೊಡನೆ ಭೀಕರ ಕಾಳಗಗಳು ನಡೆದವು. ಚೋಳ ಅರಸನು ಚಾಲುಕ್ಯರನ್ನು ಬೆನ್ನಟ್ಟಿ ಕೊಲ್ಹಾಪುರದವರೆಗೆ ದಾಳಿ ಮಾಡಿದನೆಂದು ಶಾಸನ ಒಂದು ಹೇಳುತ್ತದೆ. ಈ ಸಂದರ್ಭದಲ್ಲಿ ಚಾಲುಕ್ಯ ಅರಸನಿಗೆ ಅವನ ನಂಬಿಗಸ್ಥ ಮಾಂಡಲೀಕರಾದ ಶಿಲಾಹಾರ ಮತ್ತು ಸೇವುಣರು ನೆರವಿಗೆ ನಿಂತು ಸಾಮ್ರಾಜ್ಯದ ರಕ್ಷಣೆ ಮಾಡಿದರು. ನಂತರ ಬಂದ ೨ನೇ ಸೋಮೇಶ್ವರನಿಗೂ ಅವನ ತಮ್ಮನಾದ ೬ನೇ ವಿಕ್ರಮಾದಿತ್ಯನಿಗೂ ಅಧಿಕಾರಕ್ಕಾಗಿ ಕಲಹ ಉಂಟಾಗಿ, ವಿಕ್ರಮಾದಿತ್ಯನು ಅಣ್ಣನನ್ನು ಸೋಲಿಸಿ ತಾನೇ ಅರಸನಾದನು. ಈ ಘಟನೆಯಲ್ಲಿ ನೈತಿಕತೆ ಪ್ರಶ್ನೆ ಏನೇ ಇದ್ದರೂ ವಿಕ್ರಮಾದಿತ್ಯನ ಕಾಲದಲ್ಲಿ ಚಾಲುಕ್ಯ ಸಾಮ್ರಾಜ್ಯವು ಸರ್ವತೋಮುಖ ಏಳ್ಗೆ ಕಂಡಿತು. ಸಾಹಿತ್ಯ, ಶಿಲ್ಪಕಲೆ ಇವು ಹೆಚ್ಚಿನ ಬೆಳವಣಿಗೆ ಕಂಡವು. ಚಾಲುಕ್ಯ ಶೈಲಿ ಎಂಬ ವಾಸ್ತು ಶೈಲಿಯೇ ಇವರಿಂದ ಹೆಸರು ಪಡೆಯಿತು. ಉತ್ತರದಲ್ಲಿ ಪರಮಾರ ಮುಂಜನ ನಂತರ ಅಲ್ಲಿ ಹೆಚ್ಚಿನ ವಿರೋಧವಿರಲಿಲ್ಲ. ಆ ಮನೆತನದ ಉದಿಯಾದಿತ್ಯನ ಮಗ ಜಗ್ಗದೇವನಿಗೆ ಪಟ್ಟವನ್ನು ಪಡೆಯಲು ಸಹಾಯ ಮಾಡಲು ಹೋಗಿ, ವಿಕ್ರಮಾದಿತ್ಯನು ಕೈಸುಟ್ಟಕೊಂಡನು. ಇತ್ತ ದಕ್ಷಿಣದಲ್ಲಿ ಚಾಲುಕ್ಯರೊಡನೆ ವೈರತ್ವ ಕಡಿಮೆ ಆಗಲಿಲ್ಲ, ಪೂರ್ವದಿಕ್ಕಿನಲ್ಲಿ ಆಂಧ್ರದ ಪ್ರದೇಶದಲ್ಲಿ ಅದೇ ತಲೆ ಎತ್ತಿದ್ದ ವೆಂಗಿ ಚಾಲುಕ್ಯರ ಪ್ರದೇಶದ ಆಧಿಪತ್ಯಕ್ಕಾಗಿ, ವಿಕ್ರಮಾದಿತ್ಯ ಮತ್ತು ಚೋಳ ಅರಸರೊಡನೆ ನಿರಂತರ ಹೋರಾಟಗಳು ನಡದೇ ಇದ್ದವು. ಕೊನೆಗೆ ವಿಕ್ರಮಾದಿತ್ಯನ ಕೈ ಮೇಲಾಗಿ ವೆಂಗಿಯು ಅವನ ವಶವಾಯಿತು. ಈ ಕಾಲಕ್ಕೆ ಕರ್ನಾಟಕದ ದಕ್ಷಿಣ ಭಾಗದಲ್ಲಿ ಅಸ್ತಿತ್ವಕ್ಕೆ ಬಂದ ಇನ್ನೊಂದು ಮನೆತನ ಎಂದರೆ ಹೊಯ್ಸಳರು. ಚಾಲುಕ್ಯರ ಅಧೀನರಾಗಿಯೇ ಇವರು ಇದ್ದುಕೊಂಡರು, ಆಗಾಗ ಸಮಯ ಸಾಧಿಸಿ ಅರಸರ ವಿರುದ್ಧ ಬಂಡೆಳುತ್ತಿದ್ದರು. ಅವರಲ್ಲಿ ವಿಷ್ಣುವರ್ಧನನು ಪ್ರಮುಖನು. ವಿಕ್ರಮಾದಿತ್ಯನು ಅವನ ಬೆಳವಣಿಗೆಗೆ ಉತ್ತೇಜನ ಕೊಟ್ಟರೂ ಕೊನೆಗೆ ಅವನನ್ನು ತನ್ನ ಹದ್ದುಬಸ್ತಿನಲ್ಲಿಟ್ಟನು. ಈ ಕಾರ್ಯದಲ್ಲಿ ಸಿಂದ ಮನೆತನದ ಸಾಮಂತರು ವಿಕ್ರಮಾದಿತ್ಯನ ನೆರವಿಗೆ ನಿಂತರು. ಹೀಗಾಗಿ ವಿಕ್ರಮಾದಿತ್ಯನ ಆಳಿಕೆ ಕಾಲ ಚಾಲುಕ್ಯರ ಆಳಿಕೆ ಕಾಲದಲ್ಲಿಯೇ ಶ್ರೇಷ್ಠ ಕಾಲ ಎನಿಸಿತು. ಶೈವ, ವೈಷ್ಣವ, ಜೈನ ಧರ್ಮಗಳು ಹೆಚ್ಚಿನ ಪ್ರೋತ್ಸಾಹ ಪಡೆದವು. ಸಾಹಿತ್ಯ, ಶಿಕ್ಷಣ, ಕಲೆ, ಇವು ಉರ್ಜಿತಗೊಂಡವು. ದೇವಾಲಯಗಳ ನಿರ್ಮಿತಿಯಂತೂ ಎಡಬಿಡದೆ ಸಾಗಿತು. ವಿಕ್ರಮಾದಿತ್ಯನು ನಿತ್ಯ ಭೂಮಿ ದಾನ ಮಾಡುವ ವ್ರತ ಹಿಡಿದಿದ್ದನು. ಇದರಿಂದ ಶಾಸನಗಳ ಸಂಖ್ಯೆ ಹೆಚ್ಚಿತು. ಸ್ಥೂಲವಾಗಿ ಹೇಳಬೇಕೆಂದರೆ, ಇಡೀ ಕರ್ನಾಟಕದಲ್ಲಿ ಒಂದಾದರು ಚಾಲುಕ್ಯ ದೇವಾಲಯವಾಗಲಿ, ಶಾಸನವಾಗಲಿ ಇಲ್ಲದ ಒಂದು ಹಳ್ಳಿಯೂ ಇಲ್ಲ ಎಂದು ಹೇಳಬಹುದು. ಇವನ ಕಾಲದಲ್ಲಿ ಇವನ ಆಸ್ಥಾನದಲ್ಲಿದ್ದ ಕಾಶ್ಮೀರದ ಕವಿ ಬಲ್ಹಣನು ಹೇಳಿದಂತೆ

ಆಗಿನ ಕಾಲದಲ್ಲಿ ಕಲ್ಯಾಣದಂತಹ ಪಟ್ಟಣ ಮತ್ತು ವಿಕ್ರಮಾದಿತ್ಯನಂತಹ ಅರಸ ಎಲ್ಲಿಯೂ ಇಲ್ಲವೆಂಬುದು ನಿಜವಾದಂತಾಯಿತು.

ವಿಕ್ರಮಾದಿತ್ಯನ ನಂತರದ ಕಾಲ ಸ್ವಲ್ಪ ಮಟ್ಟಿಗೆ ಚಾಲುಕ್ಯರ ಅವನತಿ ಕಾಲ ಎಂದೆ ಹೇಳಬಹುದು. ಅವನ ನಂತರ ಪಟ್ಟಕ್ಕೆ ಬಂದ ೩ನೇ ಸೋಮೇಶ್ವರನು ಆಡಳಿತಗಾರನಿಗಿಂತ ಹೆಚ್ಚಾಗಿ ವಿದ್ವಾಂಸನೆಂದೇ ಹೆಸರಾಗಿದ್ದನು. ಅವನ ಕೃತಿಗಳು 'ಮಾನಸೊಲ್ಲಾಸ' ಮತ್ತು 'ವಿಕ್ರಮಾಭ್ಯುದಯಂ' ಎಂಬ ಕೃತಿಗಳು ಉಪಲಬ್ಧವಿವೆ. ಅವನಿಗೆ 'ಸರ್ವಜ್ಞ ಕವಿ ಚಕ್ರವರ್ತಿ' ಎಂಬ ಬಿರುದಿದ್ದಿತು. ನಂತರ ಬಂದ ೨ನೇ ಜಗದೇಕಮಲ್ಲನ ಆಳಿಕೆಯಲ್ಲಿ ವಿಶೇಷವೇನೂ ನಡೆಯದಿದ್ದರೂ ಮುಂದಿನ ಅರಸನಾದ ೩ನೇ ತೈಲಪನ ಆಳಿಕೆಯಲ್ಲಿ ಚಾಲುಕ್ಯ ಸಾಮ್ರಾಜ್ಯಕ್ಕೆ ತೀವ್ರ ಆಘಾತವಾಯಿತು. ಈ ಆಘಾತ ಒಡ್ಡಿದವನು, ಕಲಚುರಿ ಬಿಜ್ಜಳನು. ಈಗಿನ ಮಹಾರಾಷ್ಟ್ರ ರಾಜ್ಯದ ಮಂಗಳವೇಢೆ ಪ್ರದೇಶದಲ್ಲಿ ಚಾಲುಕ್ಯರ ಸಾಮಂತನಾಗಿದ್ದ ಇವನು ಸಮಯ ಸಾಧಿಸಿ ೩ನೇ ತೈಲಪನನ್ನು ಹಿಮ್ಮೆಟ್ಟಿಸಿ, ಸ್ವತಂತ್ರ ಅರಸನೆಂದು ಸಾರಿ, ರಾಜಧಾನಿ ಕಲ್ಯಾಣವನ್ನು ಆಕ್ರಮಿಸಿದನು (ಕ್ರಿ.ಶ.೧೧೫೭). ಇದರಿಂದ ಚಾಲುಕ್ಯರ ಆಳಿಕೆ ಕೊನೆಗೊಂಡಂತೆಯೇ ಆಯಿತು.[೩]

ಬಿಜ್ಜಳನು ಸ್ವತಂತ್ರ ರಾಜನೆಂದು ಎನಿಸಿಕೊಂಡರೂ ಮೊದಲಿನಿಂದಲೂ ಚಾಲುಕ್ಯರಿಗೆ ವಿಧೆಯರಾಗಿದ್ದ ಸಾಮಂತರು ಅವನ ಆಳಿಕೆಯನ್ನು ಒಪ್ಪಿಕೊಳ್ಳಲಿಲ್ಲ. ಹೀಗಿದ್ದರೂ ಕಲಚುರಿ ಅರಸರು ೨೦ ವರ್ಷಗಳ ಕಾಲ ಕಲ್ಯಾಣದಲ್ಲಿ ಆಳಿದರು. ಕ್ರಿ.ಶ. ೧೧೮೨ ರಷ್ಟರಲ್ಲಿ ಚಾಲುಕ್ಯ ೪ನೇ ಸೋಮೇಶ್ವರನು ಕಲಚುರಿಗಳನ್ನು ಹಿಮ್ಮೆಟ್ಟಿಸಿ ಚಾಲುಕ್ಯ ಆಧಿಪತ್ಯವನ್ನು ಪುನಃ ಸ್ಥಾಪಿಸಿದನು. ಕಲಚುರಿಗಳ ಆಳಿಕೆಯಿಂದ ಚಾಲುಕ್ಯ ಸಾಮ್ರಾಜ್ಯಕ್ಕೆ ಆತ್ಯಂತಿಕ ಪೆಟ್ಟು ಬಿದ್ದಂತಾಯಿತು. ಈ ಕಾಲದಲ್ಲಿ ನಡೆದ ಪ್ರಮುಖ ಘಟನೆ ಎಂದರೆ, ಬಸವೇಶ್ವರರ ಉದಯ. ಬಿಜ್ಜಳನ ಆಳಿಕೆಯಲ್ಲಿ ಅಧಿಕಾರಿಯಾಗಿದ್ದ ಇವರು, ಬಿಜ್ಜಳನ ಆಳಿಕೆಯನ್ನು ಸಹಿಸದೇ ಪದತ್ಯಾಗ ಮಾಡಿದರು. ಕರ್ನಾಟಕದ ಧಾರ್ಮಿಕ, ಸಾಮಾಜಿಕ ಬದಲಾವಣೆ ಮತ್ತು ಬೆಳವಣಿಗೆಯಲ್ಲಿ ಪ್ರಮುಖ ಪಾತ್ರವಹಿಸಿದರು.[೪]

೪ನೇ ಸೋಮೇಶ್ವರನು ಅಧಿಕಾರವನ್ನು ಪುನಃ ಪಡೆದುಕೊಂಡರು. ಈಗಾಗಲೇ ಬಲಿತುಕೊಂಡಿದ್ದ ಸಾಮಂತರ ಒತ್ತಡವನ್ನು ಅವನಿಗೆ ತಾಳಿಕೊಳ್ಳಲು ಆಗಲಿಲ್ಲ. ಉತ್ತರದಲ್ಲಿ ಸೇವುಣ, ೫ನೇ ಭಿಲ್ಲಮ ಮತ್ತು ದಕ್ಷಿಣದಲ್ಲಿ ಹೊಯ್ಸಳ ೨ನೇ ಬಲ್ಲಾಳನು ಪ್ರಬಲರಾಗಿ ಆಕ್ರಮಣಕಾರಿ ಚಟುವಟಿಕೆ ನಡೆಸಿದರು. ೫ನೇ ಬಿಲ್ಲಮನು ಕಲ್ಯಾಣವನ್ನು ಆಕ್ರಮಿಸುವ ಉದ್ದೇಶದಿಂದ ಸೈನ್ಯದೊಡನೆ ಅತ್ತ ಸಾಗಿದನು. ಬಲ್ಲಾಳನು ತುಂಗಭದ್ರಾ ನದಿಯನ್ನು ದಾಟಿ

ಕೃಷ್ಣಾ ನದಿಯವರೆಗೂ ಕಾಲು ಚಾಚಿದನು. ಸೋಮೇಶ್ವರನು ಈ ಒತ್ತಡ ತಾಳದೆ ಕಲ್ಯಾಣ ಬಿಟ್ಟು ಹೋಗುವಂತಾಯಿತು. ಇಲ್ಲಿಗೆ ಕಲ್ಯಾಣ ಚಾಲುಕ್ಯ ಮನೆತನದ ಆಳಿಕೆ ಮುಗಿದಂತಾಯಿತು. ಈಗ ಸೇವುಣ, ಹೊಯ್ಸಳ ಇಬ್ಬರೂ ಮುಖಾಮುಖಿಯಾಗಿ ಹೋರಾಡಿ, ಕೊನೆಗೆ ಚಾಲುಕ್ಯ ಸಾಮ್ರಾಜ್ಯ ಇಬ್ಭಾಗವಾಗಿ ಉತ್ತರಭಾಗದಲ್ಲಿ ಸೇವುಣ ಭಿಲ್ಲಮನು ಮತ್ತು ದಕ್ಷಿಣದಲ್ಲಿ ಹೊಯ್ಸಳ ಬಲ್ಲಾಳನು ಸ್ವತಂತ್ರರಾಗಿ ತುಂಗಭದ್ರಾ ರಾಜ್ಯವಾಳತೊಡಗಿದರು. ತುಂಗಭದ್ರಾ ನದಿಯೇ ಎರಡೂ ರಾಜ್ಯಗಳ ಮೇರೆಯಾಯಿತು.[೫]

ಚಾಲುಕ್ಯರ ನಿರ್ಗಮನದಿಂದ ಕರ್ನಾಟಕದ ರಾಜಕೀಯ ಚಿತ್ರಣವೆ ಬದಲಾಯಿತು. ನರ್ಮದಾ ನದಿಯಿಂದ ಕಾವೇರಿಯ ವರೆಗೆ ಹಬ್ಬಿದ ವಿಶಾಲ ಸಾಮ್ರಾಜ್ಯ ಇಬ್ಭಾಗವಾಗಿ ಎರಡು ರಾಜ್ಯಗಳಾದವು. ಉತ್ತರಭಾಗವನ್ನು ಸೇವುಣರು ದೇವಗಿರಿ ಅಂದರೆ ದೌಲತಾಬಾದದಿಂದ ಆಳತೊಡಗಿದರು. ದೋರಸಮುದ್ರವು ಹೊಯ್ಸಳರ ರಾಜಧಾನಿಯಾಯಿತು.[೬] ಇದೆ ಸಂಧಿಯಲ್ಲಿ ಇನ್ನೊಂದು ಹೊಸ ಬೆಳವಣಿಗೆಯು ನಡೆಯಿತು. ಚಾಲುಕ್ಯ ಸಾಮ್ರಾಜ್ಯದ ಪೂರ್ವದ ಆಂಧ್ರ ಭಾಗದಲ್ಲಿ ಇನ್ನೊಂದು ರಾಜಕೀಯ ಮನೆತನ ತಲೆಯೆತ್ತಿತು. ಅದೇ ಕಾಕತೀಯರದು.[೭]

ಕಾಕತೀಯರು ಸಹ ಮೂಲತಃ ಚಾಲುಕ್ಯರ ಮಾಂಡಲೀಕರೆ ಅವರ ಮೂಲಸ್ಥಾನ ಇಂದು ಬೆಳಗಾವಿ ಜಿಲ್ಲೆಯಲ್ಲಿರುವ ಚಿಕ್ಕ ಹಳ್ಳಿ ಕಾಕತಿ. ಚಾಲುಕ್ಯರ ಮಾಂಡಲೀಕರಾಗಿ ಪೂರ್ವ ಭಾಗದಲ್ಲಿ ಅಧಿಕಾರದಲ್ಲಿ ಇದ್ದು, ಅವರು ಸಾವಕಾಶವಾಗಿ ಬೆಳೆಯುತ್ತ, ಬದಲಾದ ಪರಿಸ್ಥಿತಿಯ ಲಾಭ ಪಡೆದು, ಸ್ವತಂತ್ರ ರಾಜ್ಯವನ್ನು ಸ್ಥಾಪಿಸಿದರು. ಓರಗಲ್ಲು ಅಥವಾ ಇಂದಿನ ವಾರಂಗಲ್ಲ ಅವರ ರಾಜಧಾನಿಯಾಯಿತು. ಹೀಗೆ ವಿಶಾಲ ಸಾಮ್ರಾಜ್ಯ ಎಂದು ಹೆಸರು ಪಡೆದ, ಚಾಲುಕ್ಯ ಸಾಮ್ರಾಜ್ಯವು, ೩ ಭಾಗಗಳಲ್ಲಿ ಹಂಚಿ ಹೋಯಿತು. ದೌಲತಾಬಾದವೇ ನೆಲೆಯಾಗಿದ್ದ ಸೇವುಣರು ಕ್ರಮೇಣ ತಮ್ಮ ಪ್ರಭುತ್ವವನ್ನು ವಿಸ್ತರಿಸತೊಡಗಿದರು. ರಾಜ್ಯ ಸ್ಥಾಪಕನಾದ ೫ನೇ ಭಿಲ್ಲಮನ ರಾಜ್ಯಕ್ಕೆ ಭದ್ರಬುನಾದಿಯನ್ನು ಒದಗಿಸಿದನು. ಸೇವುಣ ವಂಶದಲ್ಲಿಯೆ ಪ್ರಬಲನಾದ ಅವನ ಮೊಮ್ಮಗ ೨ನೇ ಸಿಂಘಣನು ತನ್ನ ಪ್ರದೇಶದಲ್ಲಿ ಎಲ್ಲ ಮಾಂಡಲೀಕರನ್ನು ಬಗ್ಗುಬಡೆದು ತನ್ನ ಅಧೀನನ್ನಾಗಿ ಮಾಡಿಕೊಂಡನು. ಉತ್ತರದಲ್ಲಿ ಪರಮಾರ ಮತ್ತು ಚಾಹಮಾನ ಅರಸರೊಡನೆ ನಿರಂತರ ಹೋರಾಟ ನಡೆದರೂ, ಸಾಮ್ರಾಜ್ಯದ ಮೇರೆಗಳಿಗೆ ಧಕ್ಕೆ ಉಂಟಾಗಲಿಲ್ಲ. ತನ್ನ ರಾಜ್ಯದಲ್ಲಿಯೇ ಗೋವಾ ಕದಂಬರು, ಶಿಲಾಹಾರರು, ಸವದತ್ತಿ ರಟ್ಟರು ಮುಂತಾದ ಮಾಂಡಲೀಕರು ತಲೆ ಎತ್ತುತ್ತಿದ್ದರು. ಸಿಂಘಣನು ಅವರೆಲ್ಲರನ್ನು ಬಗ್ಗುಬಡೆದು ಅಧೀನರಾಗುವಂತೆ ಮಾಡಿದನು. ಈ ಸಂಘರ್ಷದಲ್ಲಿ ಬೆಳಗುತ್ತಿ ಸಿಂದರು ಅವನ ಬೆಂಬಲಕ್ಕೆ ನಿಂತರು. ಈ

ಮನೆತನದ ಈಶ್ವರದೇವನು *"ಸಿಂಹಳ ರಾಜ್ಯಾಭ್ಯುದಯ ಕಾರಣ"* ಎಂಬ ಬಿರುದನ್ನು ಪಡೆದನು. ಹೊಯ್ಸಳರೊಡನೆಯೂ ಕಾದಾಟಗಳು ನಿರಂತರವಾಗಿದ್ದವು. ಚಾಲುಕ್ಯರಿಗೆ ಮೊದಲಿನಿಂದಲೂ ನಿಷ್ಠರಾಗಿದ್ದ ಸಿಂದರು ಹೊಯ್ಸಳರ ಆಧಿಪತ್ಯವನ್ನು ಒಪ್ಪಲು ಸಿದ್ಧರಿರಲಿಲ್ಲ. ಅವರು ಹೊಯ್ಸಳರ ಸಿಂಘಣನ ಸಹಾಯಕ್ಕೆ ಬಂದರು. ಚಾಲುಕ್ಯರ ಪರವಾಗಿ ನಡೆದ ಸಿಂದ ಸಾಮಂತರ ಮತ್ತು ಹೊಯ್ಸಳರ ನಡುವಿನ ಕಾದಾಟಗಳನ್ನು ಎತ್ತಿ ತೋರಿಸುವ ಅನೇಕ ಶಿಲಾಶಾಸನಗಳು ಶಿವಮೊಗ್ಗ ಜಿಲ್ಲೆಯಲ್ಲಿ ದೊರೆಯುತ್ತವೆ.

ತೀರಾ ದಕ್ಷಿಣದಲ್ಲಿಯ ಚೋಳ ಮತ್ತು ಚಾಲುಕ್ಯರ ನಡುವಿನ ಸಂಘರ್ಷಗಳನ್ನು ಮೇಲೆ ನೋಡಿದ್ದೆವೆ. ಈಗ ಇವರ ನಡುವೆ ಹೊಯ್ಸಳ ರಾಜ್ಯವಿದ್ದುದರಿಂದ ಸೆವುಣರಿಗೂ, ಚೋಳರಿಗೂ ಸಂಬಂಧವಿಲ್ಲದಂತಾಯಿತು. ಆದರೆ ಹೊಯ್ಸಳ ಮತ್ತು ಚೋಳರ ನಡುವಿನ ಕಾದಾಟಗಳು ನಿರಂತರವಾಗಿ ನಡೆದಿದ್ದವು. ಹೊಯ್ಸಳರು ಹೆಚ್ಚಾಗಿ ಚೋಳರೊಡನೆ ಕಾದಾಟಕ್ಕೆ ಇಳಿದು ಅವಕಾಶಗಳನ್ನು ಬಳಸಿಕೊಂಡು ಸಿಂಘಣನು ಹೊಯ್ಸಳ ರಾಜ್ಯದ ಮೇಲೆ ದಾಳಿ ಮಾಡಿದನು. ಆದರೆ ಹೊಯ್ಸಳ ನರಸಿಂಹನು ಅವನನ್ನು ಹಿಮ್ಮೆಟ್ಟಿಸಿದನು. ಮಹತ್ವಾಕಾಂಕ್ಷಿಯಾದ ಸಿಂಘಣನು ಕಾಕತೀಯರೊಡನೆಯೂ ಹೊರಾಟಕ್ಕೆ ಇಳಿದನು. ಕಾಕತೀಯ ಗಣಪತಿಯು ಸೆವುಣ ಸಿಂಘಣನನ್ನು ಸೋಲಿಸಿದನೆಂದು ಕಾಕತೀಯ ಶಾಸನಗಳು ಹೇಳುತ್ತವೆ. ಇದೆ ರೀತಿ ಸೆವುಣ ಶಾಸನಗಳು ಕಾಕತೀಯರನ್ನು ಸೋಲಿಸಿದ ವಿಷಯಗಳನ್ನು ಹೇಳುತ್ತವೆ. ಇದರರ್ಥವೆಂದರೆ, ಯಾವ ನಿರ್ಣಯಗಳೂ ಇಲ್ಲದೆ, ಅವರ ಕಾದಾಟಗಳು ನಡದೆ ಇದ್ದವೆಂದು ಕಂಡುಬರುತ್ತವೆ. ಸಿಂಘಣನ ನಂತರದ ಅರಸರು ಅಷ್ಟೊಂದು ಪ್ರಭಾವಶಾಲಿಗಳಾಗಿರಲಿಲ್ಲ. ಹೀಗಾಗಿ ಮುಂದೆ ಕೆಲವೇ ತಲೆಮಾರುಗಳಿಗೆ ಸೆವುಣ ರಾಜ್ಯ ಅಳಿಯಿತು.

ಇತ್ತ ಹೊಯ್ಸಳ ೨ನೇ ಬಲ್ಲಾಳನ ನಂತರ ಹೊಯ್ಸಳರ ಲಕ್ಷವೆಲ್ಲ ಚೋಳರ ಮೇಲೆಯೆ ಕೇಂದಿಕೃತವಾಯಿತು. ಎಷ್ಟೋ ಸಲ ಹೊಯ್ಸಳ ನರಸಿಂಹನು ಚೋಳರಿಗೆ ಸಹಾಯವನ್ನು ಮಾಡಿದನು, ಇದರಿಂದಾಗಿ ಅವನ ಪ್ರತಿಷ್ಠೆಯಲ್ಲದೆ ಹೊಯ್ಸಳ ರಾಜ್ಯವು ದಕ್ಷಿಣದಲ್ಲಿ ವಿಸ್ತಾರಗೊಂಡಿತು. ಕಣ್ಣಾನೂರು, ಇನ್ನೊಂದು ಹೊಯ್ಸಳ ರಾಜಧಾನಿ ಆಯಿತು. ಅವನ ಇಬ್ಬರು ಮಕ್ಕಳು ರಾಮನಾಥ ಮತ್ತು ಸೊಮೇಶ್ವರ ಇವರ ಕಚ್ಚಾಟದ ಫಲವಾಗಿ ರಾಜ್ಯವನ್ನೆ ಇಬ್ಬರಿಗೂ ಹಂಚಿಕೊಡಬೇಕಾಯಿತು.

ಇಂಥ ಪರಿಸ್ಥಿತಿಯಲ್ಲಿ ಭಾರತದ ರಾಜಕೀಯದಲ್ಲಿ ನಡೆದ ಅತ್ಯಂತ ಮಹತ್ವದ ಘಟನೆ ಎಂದರೆ ದಿಲ್ಲಿಯಲ್ಲಿ ಮುಸ್ಲಿಂ ಆಧಿಪತ್ಯ ಸ್ಥಾಪನೆ. ಈ ಬೆಳವಣಿಗೆ ದಕ್ಷಿಣದ ಉಳಿದ ರಾಜ್ಯಗಳಿಗೆ

ಮುಳುವಾಯಿತು. ಅತ್ಯಂತ ಕ್ರೂರಿ ಹಾಗೂ ಮಹತ್ವಾಕಾಂಕ್ಷಿಯಾದ ಅಲ್ಲಾವುದೀನ್ ಖಿಲ್ಜಿಯ ಕಣ್ಣು ದಕ್ಷಿಣದ ರಾಜ್ಯದ ಅಪಾರ ಐಶ್ವರ್ಯದ ಮೇಲೆ ಬಿದ್ದಿತು. ತನ್ನ ಸ್ವಂತ ಶಕ್ತಿಯನ್ನು ಹೆಚ್ಚಿಸುವುದಕ್ಕಾಗಿ ಅವನಿಗೆ ಹಣದ ಅವಶ್ಯಕತೆ ಇದ್ದಿತು. ಆಗ ದಕ್ಷಿಣದ ರಾಜ್ಯಗಳ ಸಂಪತ್ತು ಅವನನ್ನು ಆಕರ್ಷಿಸಿತು. ಮೆಲ್ಲಗೆ ಮೋಸದಿಂದ ದಿಲ್ಲಿ ಸುಲ್ತಾನನ ಅನುಮತಿ ಪಡೆದು ದಕ್ಷಿಣದ ರಾಜ್ಯಗಳ ಮೇಲೆ ದಾಳಿಗಳನ್ನು ಮುಂದುವರೆಸಿದನು. ಇವನ ಅಧಿಕಾರಿಯಾದ ಮಲ್ಲಿಕ್‌ಕಫೂರ ಮೊದಲು ಸೇವುಣ ದೇಶದ ಮೇಲೆ ದಾಳಿಮಾಡಿದನು. ಅಲ್ಲಿಯ ಅರಸನಾದ ರಾಮಚಂದ್ರನು ಅವನನ್ನು ವಿರೋಧಿಸಲಾಗದೇ ಒಪ್ಪಂದ ಮಾಡಿಕೊಂಡನು, ಮಲ್ಲಿಕ್‌ಕಫೂರನು ಹೇರಳವಾದ ಕಪ್ಪು ಕಾಣಿಕೆ ಪಡೆದು ಹಿಂತಿರುಗಿದನು. ಆದರೆ ದಾಳಿಗಳೇನೂ ನಿಲ್ಲಲಿಲ್ಲ. ಮತ್ತೊಂದು ದಾಳಿಯಲ್ಲಿ ಇವನು ರಾಮಚಂದ್ರನ ಸಹಾಯ ಪಡೆದು ಹೊಯ್ಸಳ ರಾಜ್ಯವನ್ನು ಲೂಟಿ ಮಾಡಿದನು. ಇತ್ತ ಕಾಕತೀಯರು ಅವನ ಕೆಂಗಣ್ಣಿಗೆ ಗುರಿಯಾದರು. ಹೀಗಾಗಿ ಅಲ್ಪಕಾಲದಲ್ಲಿಯೇ ಈ ಮೂರೂ ರಾಜ್ಯಗಳು ಮಹಮದಿಯರ ವಶವಾಗಿ ಇಡೀ ದಕ್ಷಿಣ ಹಿಂದೂಸ್ತಾನವು ಮುಸ್ಲಿಂ ಸಾಮ್ರಾಜ್ಯವೆನಿಸಿತು. ಹಾಗೇ ನೋಡಿದರೆ ಈ ಮೂರೂ ದಕ್ಷಿಣದ ರಾಜ್ಯಗಳು ಬಲಿಷ್ಠವೇ ಇದ್ದವು. ಆದರೆ ಆಂತರಿಕ ಕಲಹ, ಇರ್ಷೆಗಳಿಂದಾಗಿ ತಮ್ಮೊಳಗೆ ಹೊಡೆದಾಡಿ ತಮ್ಮ ಶಕ್ತಿಯನ್ನು ಕಳೆದುಕೊಂಡರು. ಮೂವರೂ ಒಟ್ಟಾಗಿ ಮುಸ್ಲಿಂ ದಾಳಿಗಳನ್ನು ಎದುರಿಸಿದ್ದರೆ ಹಿಂದುಸ್ತಾನದ ಇತಿಹಾಸದ ಸ್ವರೂಪವೇ ಬದಲಾಗುತ್ತಿತ್ತು. ಆದರೆ ಹಾಗೆ ಆಗಲಿಲ್ಲ. ಮುಂದೆ ವಿಜಯನಗರದ ಅರಸರು ಈ ದುಸ್ಥಿತಿಯನ್ನು ನಿವಾರಿಸುವವರೆಗೆ ಕಾಯಬೇಕಾಯಿತು.

ಇದಿಷ್ಟು ಸ್ಥೂಲವಾಗಿ ಕರ್ನಾಟಕದ ರಾಜಕೀಯ ಇತಿಹಾಸದ ಚಿತ್ರಣ, ಈ ಪ್ರದೇಶವನ್ನು ಆಳಿದ ಈ ಎಲ್ಲ ಮನೆತನಗಳು ಈ ಪ್ರದೇಶವನ್ನು ಸಮೃದ್ಧವಾಗಿರಿಸಿದ್ದವು. ದಕ್ಷ ಆಡಳಿತ, ಪ್ರಜಾಸಂರಕ್ಷಣೆ, ಧರ್ಮ, ಸಾಹಿತ್ಯ, ಸಂಸ್ಕೃತಿಗಳಿಗೆ ಪೋಷಣೆ ಪ್ರೋತ್ಸಾಹದಿಂದ ನಾಡು ಸುಭಿಕ್ಷೆಯಲ್ಲಿದ್ದಿತು. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಇಂಥ ಪರಿಸ್ಥಿತಿಗಳು ಉಂಟಾಗಲು ಸಾಮಂತ ಮನೆತನಗಳು ಆಡಿದ ಪಾತ್ರ. ಅಂದಿನ ಪದ್ಧತಿಯಂತೆ ಅರಸನು ರಾಜ್ಯದ ಅಧಿಪತಿಯಾದರೂ ರಾಜ್ಯದ ಒಳ ಆಡಳಿತವನ್ನು ಆಯಾ ಪ್ರದೇಶಗಳಲ್ಲಿ ದಕ್ಷ ಸಾಮಂತರು ಅರಸನಿಗೆ ವಿಧೆಯರಾಗಿ ಕಾರ್ಯ ಮಾಡುತ್ತಿದ್ದರು. ನಾವು ಅಭ್ಯಾಸಕ್ಕಾಗಿ ಆರಿಸಿಕೊಂಡ ಸಿಂದ ಮನೆತನಗಳು ಈ ಸಾಮ್ರಾಜ್ಯದ ವಿವಿಧ ಭಾಗಗಳಲ್ಲಿ, ಆಡಳಿತದಲ್ಲಿ ಆಯಾ ಕಾಲಗಳಲ್ಲಿ ನಿರ್ಣಾಯಕ ಪಾತ್ರ ವಹಿಸಿದ್ದವು. ಈ ರಾಜಕೀಯ ಹಿನ್ನಲೆಯಲ್ಲಿ ಈ ಮನೆತನಗಳ ವಿಸ್ತಾರವಾದ ಅಧ್ಯಯನವನ್ನು ನಿರೂಪಿಸುವುದು ಇಲ್ಲಿಯ ಉದ್ದೇಶವಾಗಿದೆ.

## ಉಲ್ಲೇಖಗಳು ಮತ್ತು ಟಿಪ್ಪಣಿಗಳು :

೧ ಬಾದಾಮಿ ಚಾಲುಕ್ಯರ ಕಾಲದ ಐತಿಹಾಸಿಕ ಬೆಳವಣಿಗೆ ಕುರಿತು ವಿವರಣೆಗೆ ನೋಡಿರಿ : ದೇಸಾಯಿ .ಪಿ.ಬಿ., ಎ ಹಿಸ್ಟರಿ ಆಫ್ ಕರ್ನಾಟಕ ; ರಮೇಶ ಕೆ.ವಿ., ದಿ ಚಾಲುಕ್ಯಾ್ಸ ಆಫ್ ವಾತಾಪಿ ; ದಿಕ್ಷೀತ ಡಿ.ಪಿ., ಎ ಪೊಲಿಟಿಕಲ್ ಹಿಸ್ಟರಿ ಆಫ್ ದಿ ಚಾಲುಕ್ಯಸ್ ಆಫ್ ಬಾದಾಮಿ ; ಪಾಡಿಗಾರ ಎಸ್.ವ್ಹಿ. ಇನಸ್ಕ್ರಪಿಶನ್ ಆಫ್ ದಿ ಚಾಲುಕ್ಯಸ್ ಆಫ್ ಬಾದಾಮಿ, ಇತ್ಯಾದಿ.

೨ ರಾಷ್ಟ್ರಕೂಟರ ರಾಜಕೀಯ ಬೆಳವಣಿಗೆಗಳ ವಿವರಗಳಿಗಾಗಿ ನೋಡಿರಿ : ಅಳತೆಕರ ಎ.ಎನ್.,ದಿ ರಾಷ್ಟ್ರಕೂಟಾಸ್; ದೇಸಾಯಿ ಪಿ.ಬಿ., ಪೂರ್ವೋಲ್ಲಿಖಿತ ; ಪಂಚಮುಖಿ ಆರ್.ಎಸ್., ಕರ್ನಾಟಕದ ಚರಿತ್ರೆ ಇತ್ಯಾದಿ.

೩ ಕಲ್ಯಾಣ ಚಾಲುಕ್ಯರ ಕಾಲದ ಐತಿಹಾಸಿಕ ಆಗುಹೋಗುಗಳ ವಿವರಗಳಿಗೆ ನೋಡಿರಿ : ದೇಸಾಯಿ ಪಿ.ಬಿ. ಪೂರ್ವೋಲ್ಲಿಖಿತ ; ಗೋಪಾಲ ಬಿ.ಆರ್. ದಿ ಚಾಲುಕ್ಯಾಸ್ ಆಫ್ ಕಲ್ಯಾಣ ಆ್ಯಂಡ್ ಕಲಚೂರಿಸ್.

೪ ಕಳಚೂರಿಗಳ ಇತಿಹಾಸದ ವಿವರಗಳಿಗೆ ನೋಡಿರಿ. ದೇಸಾಯಿ ಪಿ.ಬಿ., ಪೂರ್ವೋಲ್ಲಿಖಿತ ; ಮತ್ತು ಗೋಪಾಲ ಬಿ. ಆರ್. ಪೂರ್ವೋಲ್ಲಿಖಿತ.

೫ ಸೇವುಣ ಕಾಲದ ಇತಿಹಾಸದ ವಿವರಗಳಿಗೆ ನೋಡಿರಿ : ರಿತ್ತಿ ಎಸ್.ಎಚ್.,ದಿ ಸೇವುಣಸ್ ; ನರಸಿಂಹಮೂರ್ತಿ ಎ.ವಿ., ದಿ ಯಾದವಾಸ್ ಆಫ್ ದೇವಗಿರಿ.

೬ ಹೊಯ್ಸಳರ ಇತಿಹಾಸ ಕುರಿತು ವಿವರಗಳಿಗೆ ನೋಡಿರಿ : ದೇಸಾಯಿ ಪಿ.ಬಿ., ಪೂರ್ವೋಲ್ಲಿಖಿತ, ದಿ ಹೊಯ್ಸಳಸ್, ಕೊಹಿಲೋ ವಿಲಿಯಂ, ಹೊಯ್ಸಳ ವಂಶ ಡರೆಟ್.

೭ ಕಾಕತೀಯರ ಇತಿಹಾಸ ಕುರಿತು ವಿವರಗಳಿಗೆ ನೋಡಿರಿ : ರಾಮಚಂದ್ರಮೂರ್ತಿ ಎಸ್.ಎಸ್., ಇನ್‌ಸ್ಕ್ರಿಪ್ಶನ್ಸ್ ಆಫ್ ದಿ ಕಾಕತೀಯಾಸ್.

# ಅಧ್ಯಾಯ ೩

## ಸಿಂದ ವಂಶದ ಉಗಮ ಮತ್ತು ಉಗಮದ ಕಾಲ

ಮೇಲೆ ನೋಡಿದಂತೆ ನಾವು ಅಭ್ಯಾಸಕ್ಕಾಗಿ ಆರಿಸಿಕೊಂಡ ಕಾಲಾವಧಿಯಲ್ಲಿ ಹಲವಾರು ಸಿಂದ ಮನೆತನಗಳು ಆಯಾ ರಾಜಮನೆತನಗಳ ಸಾಮಂತರಾಗಿ ಆಳಿದ್ದರೂ, ಅವರ ಮೂಲದ ವಿವರಗಳೆಲ್ಲ ಸ್ವಲ್ಪ ಹೆಚ್ಚು ಕಡಿಮೆ ಒಂದೇ ಇದ್ದು ಎಲ್ಲವುಗಳ ಮೂಲ ಒಂದೇ ಎಂದು ಭಾವಿಸಲು ಕಾರಣಗಳಿವೆ. ಸಿಂದ ವಂಶದ ಮೂಲಪುರುಷನು ಯಾರು ಎಂದು ತಿಳಿದುಕೊಳ್ಳುವುದಕ್ಕಿಂತ ಮೊದಲು, ಸೇಂದ್ರಕರಿಗೂ ಮತ್ತು ಸಿಂದರಿಗೂ ಸಂಬಂಧವೇನು, ಸೇಂದ್ರಕರು ನಿಜವಾಗಿಯೂ ಸಿಂದರ ಪೂರ್ವಜರೇ ಎಂದು ನಿರ್ಧರಿಸುವುದು ಅವಶ್ಯ. ಸಿಂದ ವಂಶವನ್ನು ಕುರಿತು ಬರೆದ ವಿದ್ವಾಂಸರೆಲ್ಲ ಸೇಂದ್ರಕರು ಸಿಂದರ ಪೂರ್ವಜರು ಎಂದು ಊಹಿಸಿದ್ದರಿಂದ ಈ ಪ್ರಶ್ನೆಯನ್ನು ಎತ್ತಬೇಕಾಗಿದೆ.[೧]

ಸೇಂದ್ರಕ ಮನೆತನವು ಕರ್ನಾಟಕದ ಪ್ರಾಚೀನತಮ ಸಾಮಂತ ಮನೆತನಗಳಲ್ಲಿ ಒಂದು. ಬನವಾಸಿ ಕದಂಬರ ಕಾಲದಿಂದಲೇ ಅವರ ಉಲ್ಲೇಖ ಬರುತ್ತಿದ್ದು, ಬಾದಾಮಿ ಚಾಲುಕ್ಯರ ಕಾಲದಲ್ಲಿಯೂ ಅವರು ಪ್ರವರ್ಧಮಾನರಾಗಿದ್ದರು. ಸಿಂದರ ಆರಂಭದ ಕಾಲ ಕ್ರಿ.ಶ. ೮ನೇ ಶತಮಾನ. ಆದರೆ ಸೇಂದ್ರಕರು ಅಧಿಕಾರದಲ್ಲಿದ್ದುದು ೬-೭ ನೇ ಶತಮಾನ. ಸೇಂದ್ರಕ ಸಾಮಂತರ ಹೆಸರುಗಳು ಶಕ್ತಿ ಎಂದು ಕೊನೆಗೊಳ್ಳುತ್ತವೆ. ಉದಾ ಕುಂದಶಕ್ತಿ, ದುರ್ಗಶಕ್ತಿ, ರವಿಶಕ್ತಿ ಇತ್ಯಾದಿ. ಸಿಂದ ವಂಶದವರ ಹೆಸರುಗಳು ತೀರ ಭಿನ್ನ. ಎರಡೂ ಮನೆತನಗಳಿಗೆ ಇರುವ ಒಂದೇ ಸಾಮ್ಯವೆಂದರೆ, ಎರಡೂ ವಂಶದವರು ಫಣೀಂದ್ರವಂಶಜರೆಂದು ಹೇಳಿಕೊಳ್ಳುವರು. ಇಷ್ಟರಿಂದಲೇ ಈ ಸೇಂದ್ರಕರೂ ಮತ್ತು ೧೦, ೧೧ನೇ ಶತಮಾನಗಳಲ್ಲಿ ಪವರ್ಧಮಾನರಾದ ಸಿಂದರೂ ಒಂದೇ ಎಂಬ ಬಿ.ಆರ್. ಗೋಪಾಲ ಅವರ ನಿರ್ಣಯವು ಸಮಂಜಸವೆನಿಸುವುದಿಲ್ಲ.[೨] ಚಂದ್ರವಳ್ಳಿ ಶಾಸನದಲ್ಲಿ[೩] ಬರುವ ಸಯಿಂದಕ ಎಂಬ ಶಬ್ದವು ಸೇಂದ್ರಕ ಪದದ ಪ್ರಾಕೃತ ರೂಪವೆಂದು ಪರಿಗಣಿಸಿದರೂ ಅದನ್ನು ಸಿಂದ ಪದಕ್ಕೆ ಜೋಡಿಸುವುದು ಸರಿಯಲ್ಲವೆನಿಸುತ್ತದೆ.[೪] ಆಡೂರಿನ ಬಾದಾಮಿ ಚಾಲುಕ್ಯರ ೨ನೇ ಕೀರ್ತಿವರ್ಮನ ಶಾಸನವು ಗಂಗಿಪಾಂಡಿಯೂರು-ವನ್ನಾಳುತ್ತಿದ್ದ ಸಿಂದರಸನೆಂಬವನು ಮಾಧವತ್ತಿಯರಸನ ಅಧೀನನಾಗಿದ್ದನೆಂದು ಸೂಚಿಸುತ್ತದೆ.[೫] ಆದರೆ ಇವರು ಒಂದೇ ಮನೆತನದವರೂ ಎಂದು ಪರಿಗಣಿಸುವಂತಹ ಯಾವ ಸೂಚನೆಯು

ಇಲ್ಲ. ಅಲ್ಲದೇ ಈ ಸಿಂದರಸನನ್ನು ನಮ್ಮ ಅಭ್ಯಾಸಕ್ಕೆ ಒಳಪಟ್ಟಿರುವ ಯಾವ ಸಿಂದ ಮನೆತನಕ್ಕೂ ಸೇರಿಸಲಾಗುವುದಿಲ್ಲ.

ಸಿಂದ ವಂಶದ ಉಗಮವನ್ನು ಹುಡುಕುವುದು ಸಹ ಕ್ಲಿಷ್ಟಕರವೇ, ಏಕೆಂದರೆ ಅದು ಐತಿಹ್ಯಗಳಿಂದ ಸುತ್ತುವರೆಯಲ್ಪಟ್ಟಿದೆ. ಐತಿಹಾಸಿಕವಾಗಿ ಬೇರೆ ಬೇರೆ ಸಿಂದ ಶಾಖೆಗಳ ಮೊದಲ ಅರಸನ ಕಾಲವನ್ನು ಶಾಸನಗಳ ಆಧಾರದಿಂದ ಸೂಚಿಸಬಹುದು. ಆದರೆ ಮೂಲ ಸಿಂದ ವಂಶದ ಮೂಲಪುರುಷನೆನಿಸಿಕೊಂಡ ನಿಡುದೋಳ ಸಿಂದನ ಕಾಲವನ್ನು ನಿರ್ಧರಿಸಲಾಗದು. ಅವನು ಶಿವ ಪಾರ್ವತಿಯರಿಂದ ಹುಟ್ಟಿದವನೆಂಬ ಕಥೆಯನ್ನು ಗ್ರಹಿಸಿದರೆ ಕಾಲವನ್ನು ನಿರ್ಧರಿಸುವುದು ಶಕ್ಯವೇ ಇಲ್ಲ. ಈ ಕಥೆಯಲ್ಲಿ ಐತಿಹಾಸಿಕತೆಯನ್ನು ಹುಡುಕುವುದೂ ಕಷ್ಟವೇ. ಬೇರೆ ಬೇರೆ ಶಾಸನಗಳಲ್ಲಿ ಬರುವ ಕಥೆಗಳು ಒಂದೇ ಸ್ವರೂಪದವಿದ್ದರೂ ಅಲ್ಲಲ್ಲಿ ಭೇದಗಳಿವೆ. ಶಾಸನಗಳಲ್ಲಿ ಬರುವ ಈ ಕಥೆಯ ಬೇರೆ ಬೇರೆ ರೂಪಗಳನ್ನು ತುಲನಾತ್ಮಕವಾಗಿ ಪರೀಕ್ಷಿಸಿ ಕಥೆಯಲ್ಲಿ ಎಷ್ಟರ ಮಟ್ಟಿಗೆ ಐತಿಹಾಸಿಕತೆ ಇದೆ ಎಂಬುದನ್ನು ನಿರ್ಧರಿಸಬಹುದು.

ಬೆಳಗುತ್ತಿ ಸಿಂದ ಮನೆತನದ ಹರಿಹರದ ಶಾಸನದಲ್ಲಿ ಕಂಡು ಬರುವ ಕಥೆಯ ಮುಖ್ಯಾಂಶಗಳು ಹೀಗಿವೆ:[೬] ಶಿವ ಮತ್ತು ಸಿಂಧು ಇವರ ಸಂಗದಿಂದ ಒಬ್ಬ ಕುಮಾರನು ಹುಟ್ಟಿದನು. ಶಿವನು ಅವನಿಗೆ ಸಯಿಂಧವ ಎಂದು ಹೆಸರಿಟ್ಟನು ಮತ್ತು ಅವನಿಗೆ ನಾಗರಾಜನ ರಕ್ಷೆಯನ್ನು ಒದಗಿಸಿದನು. ಕುಮಾರನು ಹುಲಿಯ ಹಾಲನ್ನು ಕುಡಿಯದೇ ಶೂರನಾಗಲಾರನೆಂದು ನಿರ್ಧರಿಸಿ, ಒಂದು ಹುಲಿಯನ್ನು ನಿರ್ಮಿಸಿದನು. ಅವನು ಹುಲಿಯ ಹಾಲನ್ನು ಕುಡಿದು ಬೆಳೆದನು. ಶಿವನು ಅವನ ಸಹಾಯಕ್ಕೆ ಮಾಳತೀದೇವಿಯನ್ನು ನೇಮಿಸಿದನು. ಅವನಿಗೆ ನಿಡುದೋಳ ಸಿಂದನೆಂದು ಎರಡನೆಯ ಹೆಸರನ್ನು ಕೊಟ್ಟನು. ಕರಹಾಟವೆಂಬ ಯೋಗಪೀಠವು ಅವನ ನೆಲೆ ಆಯಿತು. ಹೀಗೆ ಸಿಂದ ವಂಶದಲ್ಲಿ ಹುಟ್ಟಿದ ಇವನು ಜಗತ್ತಿನಲ್ಲಿ ಪ್ರಸಿದ್ಧನಾದನು. *ಕರಹಾಟಪುರವರಾಧೀಶ್ವರ, ಮಾಳಚೀದೇವಿಲಬ್ಧವರಪ್ರಸಾದ* ಮುಂತಾದ ಬಿರುದುಗಳನ್ನು ಹೊಂದಿ ಕರಹಾಟ ನಾಲ್ಕು ಸಾವಿರ ದೇಶವನ್ನು ಒಳಗೊಂಡ ಅನೇಕ ದೇಶಗಳನ್ನು ಆಳಿದನು. ಅವನು ಫಣಿರಾಜವಂಶ, ವ್ಯಾಘ್ರಮೃಗಲಾಂಛನ, ಸಿಂದರ ದೇವ ಎಂದು ಕರೆಯಲ್ಪಟ್ಟನು. ಅವನ ನಂತರ ಆ ವಂಶದಲ್ಲಿ ಅನೇಕ ಅರಸರು ಆಳಿದರು. ತದನಂತರ ಪಿರಿಯ ಚಟ್ಟರಸ ಎಂಬವನು ರಾಜನಾದನು.

ಹಿರೇಕೆರೂರು ತಾಲೂಕಿನ ಹಳ್ಳೂರು ಎಂಬಲ್ಲಿ ಈ ಮನೆತನದ ಶಾಸನವೊಂದಿದೆ. ಶಾಸನ ಕಾಲ ೧೦೩೦-೩೪[೭] ಅದರಲ್ಲಿಯೂ ಹೆಚ್ಚು ಕಡಿಮೆ ಇದೇ ಕಥೆ ಇದ್ದು, ಶಾಸನವು ಬಹಳಷ್ಟು

ಒಡೆದು ಹೋದದ್ದರಿಂದ ವಿವರಗಳು ತಿಳಿಯುವುದಿಲ್ಲ. ಆದರೂ ಕಥೆಯು ಹರಿಹರದ ಶಾಸನದಂತೆ ಯಥಾವತ್ ಹಾಗೆಯೇ ಇದೆ ಎಂದು ಕಂಡು ಬರುತ್ತದೆ. ಹೊನ್ನಾಳಿ ತಾಲೂಕಿನ ಮಾದನಭಾವಿ ಶಾಸನದಲ್ಲಿಯೂ ಇದೇ ಕಥೆ ಇದೆ.[೮]

ಬಾಗಡಗೆಯ ಸಿಂದ ಮನೆತನದ ಭೈರನಮಟ್ಟಿ ಶಾಸನದಲ್ಲಿಯೂ[೯] ಇಂಥದೇ ಕಥೆ ಇದ್ದು ಕೆಲವು ಬದಲಾವಣೆಗಳಿವೆ. ಧರಣೇಂದ್ರ ಎಂಬ ನಾಗಲೋಕದ ಅರಸನು ಪೃಥ್ವಿಯ ಮೇಲಿನ ಜೀವನವನ್ನು ನೋಡಲು ಅಪೇಕ್ಷಿಸಿ ಭೂಲೋಕಕ್ಕೆ ಬಂದನು. ಅವನ ರಾಣಿಯು ಆಗ ಗರ್ಭವತಿಯಾದುದರಿಂದ ಭೂಲೋಕದಲ್ಲಿ ಕೆಲಕಾಲ ಉಳಿದು ಅಹಿಛತ್ರದಲ್ಲಿ ವಾಸಿಸಿದರು. ಅಲ್ಲಿ ರಾಣಿಗೆ ಸಿಂಧು ನದಿ ಪ್ರದೇಶದಲ್ಲಿ ಸಿಂದನೆಂಬ ಮಗನು ಹುಟ್ಟಿದನು. ಮನುಷ್ಯ ರೂಪದ ಮಗುವನ್ನು ನೋಡಿ ಆಶ್ಚರ್ಯಚಕಿತನಾದ ನಾಗರಾಜನು ಮಗುವನ್ನು ರಕ್ಷಿಸಲು ಒಂದು ಹುಲಿಯನ್ನು ನಿರ್ಮಿಸಿದನು. ಆ ಹುಲಿಯು ಈ ಮಗುವನ್ನು ಭೂಮಿಗೆ ಒಡೆಯನನ್ನಾಗಿ ಮಾಡು ಎಂದು ಕೇಳಿತು. ಆ ಕುಮಾರನು ಸಿಂದ ವಿಷಯದ ಅರಸನಾಗಿ ಶೌರ್ಯವನ್ನು ಮೆರೆದು, ಶಕ್ತಿಯುತ ದೀರ್ಘಬಾಹುಗಳಿಂದ ಎಲ್ಲರನ್ನೂ ಮೀರಿದನು. ಈ ನಿಡುದೋಳ ಸಿಂದ ರಾಜನು, ಕಣ್ಣು ಮುಚ್ಚಿ ಕೈಮುಗಿಯಲು ಕದಂಬ ರಾಜನು ಪ್ರೀತಿಯಿಂದ ತನ್ನ ಮಗಳನ್ನು ವಿವಾಹವಾಗಿ ಕೊಟ್ಟನು. ಅವನು ತನ್ನ ಹೆಂಡತಿಯೊಂದಿಗೆ ಇರುವಾಗ ಅವರಿಗೆ ಸಿಂದ ವಂಶದ ರಾಜರುಗಳಾದ ಮೂವರು ಮಕ್ಕಳು ಹುಟ್ಟಿದರು. ಅವರಿಗೆ ಕಾಲಾನುಕ್ರಮವಾಗಿ ಮೂವತ್ತೊಂದು ಮಕ್ಕಳು ಹುಟ್ಟಿ, ಬಾಗಡಗೆ ಪ್ರಾಂತವನ್ನು ಆಳುತ್ತಿದ್ದರು. ನಂತರ ಇನ್ನೊಬ್ಬ ಸಿಂದನೆಂಬ ಕುಮಾರನು ಹುಟ್ಟಿದನು. ನಿಡುದೋಳ ಸಿಂದನ ನಂತರ ಸತತವಾಗಿ ಒಬ್ಬರಾದ ಮೇಲೆ ಒಬ್ಬರಂತೆ ರಾಜ್ಯವಾಳಿದರು. ಬಳಿಕ ಕಮ್ಮರ ಅಥವಾ ಕಮ್ಮಯ್ಯರಸನೆಂಬವನು ಹುಟ್ಟಿದನು. ಕಮ್ಮಯ್ಯರಸ ಮತ್ತು ಅವನ ರಾಣಿ ಸಗರಬ್ಬರಸಿಗೆ ಪುಲಿಕಾಲ ಎಂಬ ಮಗನು ಹುಟ್ಟಿದನು. ಪುಲಿಕಾಲನ ಮಗನು ನಾಗಾದಿತ್ಯನು. ನಾಗಾದಿತ್ಯ ಮತ್ತು ಪೊಲಯಬ್ಬರಸಿ ಇವರಿಗೆ ಪೊಲಸಿಂದನು ಹುಟ್ಟಿದನು. ಪೊಲಸಿಂದನ ಮಗನು ಸೇವ್ಯ ನಂತರ ಬಂದವನು ನಾಗಾದಿತ್ಯ. ಇದಿಷ್ಟು ಇಲ್ಲಿ ಬರುವ ಕಥೆ. ಈ ಶಾಸನದ ಕಾಲ ಕ್ರಿ.ಶ. ೧೦೩೦-೩೪.

ಬೀದರ ತಾಲೂಕಿನ ರಂಜೋಲ ಎಂಬಲ್ಲಿ ದೊರೆತ ೬ನೇ ವಿಕ್ರಮಾದಿತ್ಯನ ಶಾಸನದಲ್ಲಿ[೧೦] ಇದೇ ನಿಡುದೋಳ ಸಿಂದನ ಕಥೆಯು ಬರುತ್ತದೆ. ಇಲ್ಲಿ ಅದು ಹೆಚ್ಚು ವಿಸ್ತಾರವಾಗಿದ್ದು ಕೆಲವು ಹೆಚ್ಚಿನ ವಿವರಗಳನ್ನು ಒಳಗೊಂಡಿದೆ. ಇಲ್ಲಿ ಸಿಂದ ಮನೆತನದ ಹಜ್ಜ ಎಂಬವನನ್ನು ಉಲ್ಲೇಖಿಸಿ ಅವನ ವಂಶವನ್ನು ಹೀಗೆ ಹೇಳಿದೆ. ಪಾತಾಳ ಲೋಕದ ಧರಣೇಂದ್ರನೆಂಬ ಅರಸನಿಗೆ ಪದ್ಮಾವತಿ

ಎಂಬ ಅರಸಿ ಇದ್ದಳು. ಇಬ್ಬರು ತಮ್ಮ ರಾಜಧಾನಿಯಾದ ಭೋಗಾವತಿಪುರದಲ್ಲಿ ವಾಸಿಸುತ್ತಿದ್ದರು. ಹೀಗೆ ಅಲ್ಲಿ ಅವರು ಸುಖದಿಂದ ಇದ್ದಾಗ ಅರಸಿಗೆ ಗರ್ಭ ಚಿನ್ಹೆಗಳು ತೋರಿದವು. ಆಗ ಆಕೆ ಸಿಂಧು ನದಿಯಲ್ಲಿ ಜಲಕ್ರೀಡೆ ಆಡಬೇಕೆಂದು ಅಪೇಕ್ಷಿಸಿದಳು. ದಂಪತಿಗಳು ಭೂಲೋಕಕ್ಕೆ ಬಂದರು. ಅಲ್ಲಿ ಆಕೆ ಜಲಕ್ರೀಡೆಯನ್ನಾಡಿದಳು. ಉದಯಿಸುತ್ತಿರುವ ಸೂರ್ಯನಿಗೆ ಅರ್ಘ್ಯವನ್ನು ಕೊಟ್ಟು "ನಿನ್ನಂತಯೇ ತೇಜಸ್ವಿಯಾದ ಮಗನನ್ನು ಕರುಣಿಸು" ಎಂದು ಬೇಡಿಕೊಂಡಳು. ಮುಂದೆ ಆಕೆಗೆ ಉದಯಿಸುತ್ತಿರುವ ಸೂರ್ಯನಂತೆಯೇ ತೇಜಸ್ವಿಯಾದ ಮಗನು ಹುಟ್ಟಿದನು. ಭೂಲೋಕದಲ್ಲಿ ಇವನು ಹುಟ್ಟಿದ್ದರಿಂದ ಸೂರ್ಯನ ತೇಜಸ್ಸು ಮತ್ತು ಶಕ್ತಿಗಳನ್ನು ಹೊಂದಿದ ಈ ಬಾಲಕನು ಇಲ್ಲಿಯೇ ಅರಸನಾಗಿ ಬಾಳಲಿ ಎಂದುಕೊಂಡು ದಂಪತಿಗಳಿಬ್ಬರೂ ತಮ್ಮ ಲೋಕಕ್ಕೆ ಹೋದರು. ಆ ಮಗುವು ಹುಲಿಯ ಹಾಲನ್ನು ಉಂಡು ಬೆಳೆಯಿತು. ಈ ಚೋದ್ಯವನ್ನು ತಳಾರನೊಬ್ಬನು ಅಹಿಛತ್ರದ ಬ್ರಾಹ್ಮಣರಿಗೆ ತಿಳಿಸಿದನು. ಆ ಬ್ರಾಹ್ಮಣರು ಅವನನ್ನು ಅಹಿಛತ್ರಕ್ಕೆ ಒಯ್ದು ಅಲ್ಲಿ ಜಾತಕರ್ಮ, ಉಪನಯನಾದಿ ಸಂಸ್ಕಾರಗಳನ್ನು ನೇರವೇರಿಸಿದರು. ಅವರು "ಸಿಂದುಗೆಯ ನೆಳಲೊಳ್" ಬೆಳೆದುದರಿಂದ ಮತ್ತು ಸಿಂದುಗಿ "ಮನೆ ದೈವ" ವಾದ್ದರಿಂದ ಅವನಿಗೆ ಸಿಂದನೆಂಬ ಹೆಸರಿಟ್ಟರು. ಸಕಲ ಶಾಸ್ತ್ರಗಳ ಅಭ್ಯಾಸದಿಂದ, ಸಕಲ ಐಶ್ವರ್ಯದಿಂದ ರಾಜ್ಯವಾಳುತ್ತಿದ್ದ ಇವನಿಗೆ ಅನುರೂಪಳಾದ ಲಲಾಟಲೋಚನದ ಮಯೂರವರ್ಮನೃಪನ ಕನ್ಯೆಯನ್ನು ನೋಡಲೆಂದು ಬನವಾಸಿ ದೇಶಕ್ಕೆ ಕದಂಬ ಮಯೂರವರ್ಮನ ಬಳಿಗೆ ಹೋಗಿ, ಅವನ ಮಗಳಾದ ಲಕ್ಷ್ಮೀಮತಿಯನ್ನು ಇವನಿಗೆ ವಿವಾಹವಾಗಿ ಕೊಡಬೇಕೆಂದು ಕೇಳಿದರು. ಇವನ ಕುಲಗೋತ್ರಗಳೇನುಂಬುದು ತಿಳಿಯದೇ ಮಯೂರವರ್ಮನು ಸಿಟ್ಟಿನಿಂದ ಖನೇ ಕಣ್ಣನ್ನು ತೆಗೆದಾಗ ಸಿಂದನು ಕೈಚಾಚಿ ಆ ಕಣ್ಣನ್ನು ಮುಚ್ಚಲು, ನಿಡುದೋಳ ಅಂದರೆ ಚಾಚಿದ ಕೈಯ ಸಿಂದನೆಂದು ಹೆಸರು ಬಂದಿತು. ಮಯೂರವರ್ಮನು, ಇವನು ಸಾಮಾನ್ಯನಲ್ಲ ಎಂದು ತಿಳಿದು ತನ್ನ ಮಗಳನ್ನು ವಿವಾಹಮಾಡಿಕೊಟ್ಟನು. ಶಾಸನವು ನಿಡುದೋಳ ಸಿಂದನ ಬಿರುದುಗಳನ್ನು ಸಹ ರಂಜನೀಯವಾಗಿ ವಿವರಿಸುತ್ತದೆ. ಇವನು ಪಾತಾಳರಸನಾದ ಧರಣೇಂದ್ರನ ಮಗನಾಗಿದ್ದರಿಂದ ಪಾತಾಳಚಕ್ರವರ್ತಿಯೆಂದು ಬಿರುದು ಪಡೆದನು. ಹಾಗೆಯೇ ಪದ್ಮಾವತಿದೇವಿಯಿಂದ ಹುಟ್ಟಿದ್ದರಿಂದ *ಪದ್ಮಾವತಿದೇವಿಲಬ್ಧವರಪ್ರಸಾದ*, ನಿಜರಾಜಧಾನಿ ಭೋಗಾವತಿಪುರವಾಗಿದ್ದರಿಂದ *ಭೋಗಾವತಿಪುರವರಾಧೀಶ್ವರ*, ಅಹಿಛತ್ರದ ಬ್ರಾಹ್ಮಣರನ್ನು ರಕ್ಷಿಸಿದ್ದರಿಂದ *ಅಹಿಛತ್ರಪುರಧರಾಮರದಕ್ಷರಕ್ಷದಕ್ಷಿಣಭುಜಾದಂಡ*, ಹುಲಿಯ ಹಾಲನ್ನು ಉಂಡು ಬೆಳೆದಿದ್ದರಿಂದ *ವ್ಯಾಘ್ರಲಾಂಛನ*, ಫಣೀಂದ್ರ ವಂಶಕ್ಕೆ ಸೇರಿದ್ದರಿಂದ *ಫಣೀಂದ್ರಕೇತನ*, *ಚಾಚಿದ ಕೈಯಿಂದ* ಅರಸನ ಕಣ್ಣಿನ ಬೆಂಕಿಯನ್ನು ಆರಿಸಿದ್ದರಿಂದ *ನಿಡುದೋಳ ಸಿಂದ* ಎಂಬ ಬಿರುದುಗಳನ್ನು ಪಡೆದನು.

ನಿಡುದೋಳ ಸಿಂದ ಮತ್ತು ಲಕ್ಷ್ಮೀಮತಿಯರಿಗೆ ಪ್ರಭುಸೇವ್ಯ, ಸತ್ಯಸೇವ್ಯ, ಜಗತ್‌ಸೇವ್ಯ ಮತ್ತು ಬುಧಸೇವ್ಯ ಎಂಬ ನಾಲ್ವರು ಮಕ್ಕಳು ಹುಟ್ಟಿದರು. ಇವರು ಅನುಕ್ರಮವಾಗಿ ಪಳಿಯಂಡ, ಬಾಗಡಗೆ, ಬಳ್ಳರೆ ಮತ್ತು ಅಟ್ಟಳೆ ನಾಡುಗಳನ್ನು ಆಳತೊಡಗಿದರು. ಅಟ್ಟಳೆ ನಾಡನ್ನು ಆಳುತ್ತಿದ್ದ ಜಗತ್‌ಸೇವ್ಯನು ಭಲ್ಲುಂಕೆಯನ್ನು ಬ್ರಾಹ್ಮಣರಿಗೆ ದಾನವಾಗಿ ಕೊಟ್ಟನು. ಜಗತ್‌ಸೇವ್ಯನ ವಂಶದಲ್ಲಿ ಕುನ್ನಲ ಮತ್ತು ಬೊಪ್ಪ ಎಂಬವರು ಹುಟ್ಟಿದರು. ಇವರ ನಂತರ ಅನೇಕರು ಜನಿಸಿದರು. ಕೊನೆಗೆ ಅವರಲ್ಲಿ ಒಬ್ಬನಾದ ಗೊಂಕನೆಂಬವನು ವೈರಿಗಳನ್ನು ಹಿಮ್ಮೆಟ್ಟಿಸಿ ಚಾಲುಕ್ಯ ಸಿಂಹಾಸನವನ್ನು ಸ್ಥಿರಪಡಿಸಿದನು. ಕೊನೆ ಕೊನೆಯಲ್ಲಿ ಹಜ್ಜನೆಂಬವನ ಉಲ್ಲೇಖವಿದೆ. ಇಲ್ಲಿಗೆ ಕಲ್ಲು ಒಡೆದಿದ್ದುರಿಂದ ಮುಂದಿನ ವಿವರಗಳು ಕಳೆದುಹೋಗಿವೆ. ಕಥೆಯು ರಂಜನೀಯವಾಗಿದ್ದು, ಇಲ್ಲಿ ಸ್ವಲ್ಪ ವಿಸ್ತಾರವಾಗಿಯೇ ಕೊಟ್ಟಿದೆ. ಈ ಸಂದರ್ಭದಲ್ಲಿ ಕುರುಗೋಡಿನ ಒಂದು ಶಾಸನವನ್ನು ಗಮನಿಸಬೇಕು.[೧೧] ಈ ಶಾಸನದಲ್ಲಿ ವಿವರಗಳು ಇರದಿದ್ದರೂ ನಿಡದೋಳ ಸಿಂದನು ಶಿವನ ಉದ್ದವಾದ ಖಡ್ಗದ ತುದಿಯಿಂದ ಹುಟ್ಟಿ ಉರುಗೇಂದ್ರನ ಆಶ್ರಯದಲ್ಲಿ ಬೆಳೆದನೆಂದು ಹೇಳಿದೆ.

ಈ ಕಥೆಗಳ ಹೇಳಿಕೆಗಳಲ್ಲಿ ಅಲ್ಲಲ್ಲಿ ವ್ಯತ್ಯಾಸ ಕಂಡರೂ ಒಂದು ಮುಖ್ಯವಾದ ವಿಷಯವೆಂದರೆ, ಈ ವಂಶದ ಮೂಲಪುರುಷನು ನಿಡುದೋಳ ಸಿಂದ ಎಂಬ ನಂಬಿಕೆ.

ಈ ವಂಶದ ಮೂಲಪುರಷನೆನ್ನಲಾದ ನಿಡುದೋಳ ಸಿಂದನ ಕಾಲವನ್ನು ನಿರ್ಧರಿಸುವುದು ದುಸ್ತರ. ಒಂದೆಂದರೆ, ಶಿವ ಪಾರ್ವತಿಯರ ಸಂಗದಿಂದ ಹುಟ್ಟಿದ ಎಂದು ಹೇಳುವ ಈ ಕಥೆಯಲ್ಲಿ ಐತಿಹಾಸಿಕತೆಯನ್ನು ಹುಡುಕುವುದು ಸಾಧ್ಯವಿಲ್ಲ. ಹಾಗೆಯೇ ಕಾಲವನ್ನು ನಿರ್ಧರಿಸುವುದು ಕಷ್ಟದ್ದಾಗಿದೆ. ಈ ನಿಡುದೋಳ ಸಿಂದನು ದೈವೀಪುರುಷನು. ಮತ್ತು ದೈವಾಂಶಸಂಭೂತನೆಂಬುದು ಐತಿಹ್ಯವೇ, ಇಲ್ಲಿ ಐತಿಹಾಸಿಕ ಎನ್ನಬಹುದಾದ ವಿಷಯಗಳು ಇಷ್ಟು; ಭೈರನಮಟ್ಟಿ ಶಾಸನದಲ್ಲಿ ಕದಂಬ ಅರಸ ಎಂದು ಅಷ್ಟೇ ಇದ್ದರೆ, ರಂಜೋಲ ಶಾಸನದಲ್ಲಿ ಮೂರು ಕಣ್ಣುಗಳುಳ್ಳ ಬನವಾಸಿಯ ಮಯೂರವರ್ಮನ ಹೆಸರಿದೆ. ಮತ್ತು ಅವನ ಮಗಳ ಹೆಸರೂ ಇದೆ. ಇದಲ್ಲದೇ ಕರಹಾಟ ಪ್ರದೇಶವನ್ನು ಅವನು ಆಳುತ್ತಿದ್ದನೆಂದು ಹೇಳಿದೆ ಹೀಗಾಗಿ ಐತಿಹ್ಯ, ಇತಿಹಾಸಗಳನ್ನು ಬೆರಸಿ ಈ ಕಥೆ ಹೆಣೆದಂತಿದೆ. ಆದ್ದರಿಂದ ಸಿಂದ ಮೂಲ ಹೇಳುವ ಕಥೆ ಕಾಲ್ಪನಿಕವೆಂದು ಬಿ.ಆರ್. ಗೋಪಾಲ ಅವರ ಅಭಿಪ್ರಾಯ ಸರಿಯಾಗಿಯೇ ಇದೆ, ಎಂಬುದು ನಮ್ಮ ಮತ. ಆದರೆ ಈ ವ್ಯಕ್ತಿಯು ಐತಿಹಾಸಿಕ ವ್ಯಕ್ತಿಯೆಂದು, ಕದಂಬ ಮಯೂರವರ್ಮನ ಸಮಕಾಲೀನನೆಂದು ಹಿರೇಮಠ ಚನ್ನಬಸವಯ್ಯ ಅವರು ವಾದಿಸುತ್ತಾರೆ.[೧೨] ಅಲ್ಲದೆ, ಭೈರನಮಟ್ಟಿ ಶಾಸನದಲ್ಲಿ ನಿಡುದೋಳ ಸಿಂದನ ನಂತರ ಮೂವತ್ತೊಂದು ಜನರು

ಆಳಿದರೆಂಬ ಹೇಳಿಕೆಯ ಆಧಾರದ ಮೇಲೆ, ಆ ಮೂವತ್ತೊಂದು ಜನರಿಗೂ ಒಂದೊಂದು ತಲೆಮಾರಿಗೆ ೨೫ ವರ್ಷಗಳಂತೆ ಲೆಕ್ಕ ಹಾಕಿ ನಿಡುದೋಳ ಸಿಂದನು ೩ನೇ ಶತಮಾನಕ್ಕೆ ಸೇರಿದವನೆಂದು ಹೇಳಿ. ಅವನು ಕದಂಬ ಮಯೂರವರ್ಮನ ಸಾಮಂತನಾಗಿದ್ದಿರಬಹುದು ಎಂದು ಊಹಿಸುತ್ತಾರೆ. ಆದರೆ ಊಹೆಗಳನ್ನು ಸಮರ್ಥಿಸಲು "ಬಲವಾದ ಆಧಾರಗಳ ಕೊರತೆ ಎದ್ದು ಕಾಣುತ್ತದೆ" ಎಂದು ಅವರೇ ಒಪ್ಪುತ್ತಾರೆ.[೧೩] ಅಲ್ಲದೇ ಇತಿಹಾಸಜ್ಞರು ನಿರ್ಧರಿಸಿದಂತೆ ಮಯೂರವರ್ಮನ ಕಾಲ ೪ನೇ ಶತಮಾನ.[೧೪]

ರಂಜೋಲ ಶಾಸನದಲ್ಲಿ ಹೇಳಿದಂತೆ ನಿಡುದೋಳ ಸಿಂದನು ಮಯೂರವರ್ಮನ ಉರಿಗಣ್ಣನ್ನು ಮುಚ್ಚಲು ಕೈಚಾಚಿದ ಕಥೆಯು, ಕದಂಬ, ಪಲ್ಲವರ ನಡುವಿನ ಹೋರಾಟದಲ್ಲಿ ನಿಡುದೋಳ ಸಿಂದನ ಪಾತ್ರವಿದ್ದ ಸೂಚನೆ ಇದೆ ಎಂದೂ ಹಿರೇಮಠ ಚನ್ನಬಸವಯ್ಯ ಊಹಿಸುತ್ತಾರೆ. ಆದರೆ ಶ್ರೀಯುತರೇ ಒಪ್ಪುವಂತೆ, ಅವರ ಈ ಅಭಿಪ್ರಾಯಕ್ಕೆ ಆಧಾರಗಳೇ ಇಲ್ಲ.[೧೫] ಆದ್ದರಿಂದ ನಿಡುದೋಳ ಸಿಂದನನ್ನು ಕಾಲ್ಪನಿಕ ವ್ಯಕ್ತಿಯೆಂದು ಗ್ರಹಿಸುವುದು ಸೂಕ್ತ. ವಿವಿಧ ಸಿಂದ ಮನೆತನಗಳ ಶಾಸನಗಳು ಈ ಕಥೆಯನ್ನು ಉಲ್ಲೇಖಿಸಿರುವುದರಿಂದ, ಸಿಂದ ವಂಶವು ಮೂಲದಲ್ಲಿ ಒಂದೇ ಇದ್ದು, ಅದು ಬೇರೆ ಬೇರೆ ಮನೆತನಗಳಾಗಿ ವಿಭಜಿಸಲ್ಪಟ್ಟಿತು ಎಂದು ಹೇಳಬಹುದು.

ಸಿಂದ ಎಂಬ ಪದದ ಅರ್ಥದ ಬಗ್ಗೆಯೂ ಸ್ಪಷ್ಟತೆ ಇಲ್ಲ. ಸೇಂದ್ರಕ ಎಂಬ ಪದ ಪ್ರಾಕೃತದಲ್ಲಿ ಸಯಿಂದಕ ಎಂದಾಗಿ, ಮುಂದೆ ಸಿಂದ ಆಗಿರಬೇಕೆಂದು ಒಂದು ಸೂಚನೆಯಿದೆ. ಮೇಲೆ ನೋಡಿದಂತೆ ಮೊದಲ ಸಿಂದನು ಅಥವಾ ನಿಡುದೋಳ ಸಿಂದನು ಶಿವ–ಸಿಂಧು ಇವರ ಸಂಗದಲ್ಲಿ ಹುಟ್ಟಿದನೆಂದು ಒಂದು ಕಥೆ ಹೇಳಿದರೆ, ಭೈರನಮಟ್ಟಿ ಶಾಸನದಲ್ಲಿ ಅವನು ಸಿಂಧು ನದಿಯ ಕುರವ (ಪ್ರದೇಶ)ದಲ್ಲಿ ಹುಟ್ಟಿದನೆಂದು ಹೇಳಿದೆ. ಧರಣೇಂದ್ರನ ಅಗ್ರ ಮಹಿಷಿಯಾದ ಪದ್ಮಾವತಿದೇವಿಯು ಸಿಂಧು ನದಿಯಲ್ಲಿ ಜಲಕ್ರೀಡೆಯಾಡಿದ ನಂತರ ಮಗನು ಹುಟ್ಟಿದನೆಂದು ಇನ್ನೊಂದು ಕಥೆಯಲ್ಲಿ ಹೇಳಿದೆ. ಶಿವ ಮತ್ತು ಸಿಂಧು ಇವರ ಸಂಗದಿಂದ ಹುಟ್ಟಿದುದರಿಂದ ಶಿವನು ಇವನಿಗೆ ಸೈಂದವ ಎಂದು ಹೆಸರಿಟ್ಟನೆಂದು ಹರಿಹರ ಶಾಸನದಲ್ಲಿ ಹೇಳಿದೆ. ಒಟ್ಟಿನಲ್ಲಿ ಸಿಂಧು ಮತ್ತು ಸಿಂದ ಇವುಗಳ ನಡುವೆ ಅನ್ಯೋನ್ಯ ಸಂಬಂಧವಿದ್ದಿರಬಹುದೆಂದು ಸ್ಪಷ್ಟವಿದೆ. ನಮ್ಮ ಅಭಿಪ್ರಾಯದಲ್ಲಿ ಸೈಂದವ ಎಂಬ ಹೆಸರೇ ಸಿಂದ ಎಂಬ ರೂಪ ಪಡೆಯಿತು. ಮುಂದೆ ಇದು ಮನೆತನದ ಹೆಸರಾಗಿ ಸಿಂದ ವಂಶ, ಸಿಂದ ಕುಲ ಎಂದು ಹೆಸರಾಯಿತು.

## ಸಿಂದರು ಮತ್ತು ಕರಹಾಟ

ಬೆಳಗುತ್ತಿ ಶಾಖೆಯ ಸಿಂದರಿಗೆ ಸೇರಿದ ಶಾಸನಗಳು ನಿಡುದೋಳ ಸಿಂದನನ್ನು ಕರಹಾಡ ನಾಲ್ಸಾಸಿರ ಮತ್ತು ಇತರ ಪ್ರದೇಶಗಳೊಂದಿಗೆ ಗುರುತಿಸುತ್ತವೆ. ಉದಾಹರಣೆಗೆ ಮೇಲೆ ಉಲ್ಲೇಖಿಸಿದ ಹರಿಹರ ಶಾಸನವು ಅವನನ್ನು ಕರಹಾಟಪುರವರಾಧೀಶ್ವರಂ ಎಂದು ಕರೆಯುತ್ತದೆ. ಅಲ್ಲದೆ ಕರಹಾಟವೇ ತನಗೆ ನೆಲೆ ಎಂದು ಬಣ್ಣಿಸುತ್ತದೆ (ಕರಹಾಟಂ ಯೋಗ ಪೀಠಂ ತನಗೆ ನೆಲೆ ಎನಲ್). ಇದೇ ಮಾತು ಇನ್ನೂ ಅನೇಕ ಶಾಸನಗಳಲ್ಲಿ ಪುನರುಕ್ತವಾಗಿದೆ. ಇದೇ ಮನೆತನದ ಅಯ್ಯಣಜೋಗನು ಕರಹಾಟಪುರವರೇಶ್ವರ ಎಂದು ಕರೆಯಲ್ಪಟ್ಟಿದ್ದಾನೆ.[೧೬] ಅಂದರೆ ಬೆಳಗುತ್ತಿ ಶಾಖೆಗೂ, ಕರಹಾಟ ಪ್ರದೇಶಕ್ಕೂ ಸಂಬಂಧವಿದ್ದಿತೆಂದು ಸೂಚಿತವಾಗುತ್ತದೆ. ಇದರಿಂದ ತಿಳಿದು ಬರುವದೇನೆಂದರೆ, ಆರಂಭದ ಕಾಲದಲ್ಲಿ ಸಿಂದರು ಕರಹಾಟ ಪ್ರದೇಶಕ್ಕೆ ಸೇರಿದವರಾಗಿದ್ದು ನಂತರ ಬೇರೆ ಬೇರೆ ಪ್ರದೇಶಗಳಲ್ಲಿ ಸಾಮಂತಿಕೆ ಮಾಡತೊಡಗಿದರು. ಅವರಲ್ಲಿ ಬೆಳಗುತ್ತಿ ಸಿಂದರು ಈ ಸಂಬಂಧವನ್ನು ನೆನಪಿನಲ್ಲಿ ಇಟ್ಟುಕೊಂಡು ಈ ಬಿರುದನ್ನು ಉಳಿಸಿಕೊಂಡರು ಎಂದು ಹೇಳಬಹುದಾಗಿದೆ. ಸಿಂದರ ನಿಜವಾದ ಮೂಲಪುರಷನು ಅಂದರೆ ಐತಿಹಾಸಿಕ ದೃಷ್ಟಿಯಿಂದ ಮೂಲಪುರುಷನೆನ್ನಬಹುದಾದ ವ್ಯಕ್ತಿಯ ಹೆಸರು ತಿಳಿದು ಬರುವುದಿಲ್ಲ. ಆ ವ್ಯಕ್ತಿಯನ್ನೇ ವೈಭವೀಕರಿಸಿ ದೇವಾಂಶಸಂಭೂತನೆಂದು ವರ್ಣಿಸಿ ಶಾಸನಗಳನ್ನು ರಚಿಸಿರಬೇಕೆಂದು ತೋರುತ್ತದೆ. ಕದಂಬ ಮಯೂರವರ್ಮನನ್ನು ಈ ಸಂದರ್ಭದಲ್ಲಿ ಸೇರಿಸಿದ್ದನ್ನು ನೋಡಿದರೆ ಐತಿಹ್ಯ ಮತ್ತು ಇತಿಹಾಸಗಳನ್ನು ಜಾಣ್ಮೆಯಿಂದ ಹೆಣೆದು ಒಂದಕ್ಕೊಂದು ಸೇರಿಸಿ ಶಾಸನ ಪಾಠವನ್ನು ರಚಿಸಿದಂತೆ ತೋರುತ್ತದೆ.

ಇನ್ನೊಂದು ಗಮನಿಸಬೇಕಾದ ಸಂಗತಿ ಎಂದರೆ, ಕರಹಾಟವು ಶಿಲಾಹಾರ ಎಂಬ ಚಾಲುಕ್ಯ ಸಾಮಂತರ ರಾಜಧಾನಿ ಅಥವಾ ಮೂಲಸ್ಥಳವಾಗಿದ್ದಿತ್ತು. ಸಿಂದರು ಅವರ ಅಧೀನ ಅಧಿಕಾರಿಗಳಾಗಿದ್ದರೂ ಆಗಿರಬಹುದು. ಇಲ್ಲಿ ವಿಶೇಷವಾದ ಅಂಶವೆಂದರೆ, ಬೆಳಗುತ್ತಿಯಲ್ಲಿ ಆಳತೊಡಗಿದ ಸಿಂದರಗಿಂತ ಮೊದಲಿಗೆ ಒಂದು ಸಿಂದ ಮನೆತನವು ಕರಹಾಟ ಪ್ರದೇಶದಲ್ಲಿ ಆಳುತ್ತಿದ್ದರೆಂದು ಊಹಿಸಲು ಆಧಾರಗಳಿವೆ. ಈ ಮನೆತನದ ಅಪೂರ್ಣ ತಾಮ್ರ ಶಾಸನವೊಂದು ಈ ಪ್ರದೇಶದಲ್ಲಿ ದೊರೆತಿದೆ. ಅದರಲ್ಲಿ ಫಣೀಂದ್ರವಂಶದಲ್ಲಿ ಮತ್ತು ಸಿಂದ ಮನೆತನದಲ್ಲಿ ಹುಟ್ಟಿದ ಆದಿತ್ಯವರ್ಮನನ್ನು ಉಲ್ಲೇಖಿಸಿದೆ. ಅವನ ಅಜ್ಜನ ಹೆಸರು ಭೀಮ ಮತ್ತು ತಂದೆಯ ಹೆಸರು ಮುಂಜ. ಶಾಸನದ ಕಾಲ ಕ್ರಿ.ಶ. ೯೬೫.[೧೭] ಇವನು ಬೆಳಗುತ್ತಿ ಮನೆತನದ ಮೊದಲನೆಯ ಅರಸನೆನಿಸಿದ ಪಿರಿಯ ಚಟ್ಟರಸನಿಗಿಂತ ಸ್ವಲ್ಪ ಮುಂಚೆ ಅಧಿಕಾರದಲ್ಲಿದ್ದನು. ಇದರಿಂದ ಕರಹಾಟ

ಪ್ರದೇಶದಲ್ಲಿ ಪೌರಾಣಿಕ ವ್ಯಕ್ತಿಯಾದ ನಿಡುದೋಳ ಸಿಂದನನ್ನು ಹೊರತುಪಡಿಸಿಯೂ ಒಂದು ಸಿಂದ ಮನೆತನವು ಅಧಿಕಾರದಲ್ಲಿದ್ದಿತೆಂದು ಸ್ಪಷ್ಟವಿದೆ. ಈ ಮನೆತನದವರೇ ಬೆಳಗುತ್ತಿಯ ಕಡೆಗೆ ವಲಸೆ ಬಂದಿರಬೇಕು. ಪುಣೆ ಜಿಲ್ಲೆಯ ಜುನ್ನರದ ಸಮೀಪದ ನಾರಾಯಣಗಾಂವ ಎಂಬಲ್ಲಿ ಇದೇ ಮನೆತನದ ಇನ್ನೊಂದು ಸಿಂದರ ಶಾಸನವು ದೊರೆತಿದೆ ಎಂದು ವರದಿಯಾಗಿದೆ.[೧೮] ಈ ಶಾಸನ ಪ್ರಕಟವಾಗಿಲ್ಲವೆಂದು ಹೇಳಲಾಗುತ್ತದೆ. ಕ್ರಿ.ಶ. ೧೧೮೨ ರ ತಿಡಗುಂದಿ ತಾಮ್ರಶಾಸನದಲ್ಲಿ ಭೀಮ, ಅವನ ಮಗ ಸಿಂದರಾಜ ಮತ್ತು ಅವನ ಮಗ ಮುಂಜ ಎಂಬ ಹೆಸರು ಬರುತ್ತವೆ.[೧೯] ಇವರು ಪ್ರತ್ಯಂಡಕ-೪೦೦೦ ವನ್ನು ಆಳುತ್ತಿದ್ದರೆಂದು ಶಾಸನದಲ್ಲಿ ಹೇಳಿದೆ. ಇವರಿಗೂ ಮೇಲೆ ಹೇಳಿದ ಆದಿತ್ಯವರ್ಮನ ಮನೆತನಕ್ಕೂ ಇದ್ದಿರಬಹುದಾದ ಸಂಬಂಧವನ್ನು ನಿರ್ಧರಿಸುವುದು ದುಸ್ತರ.

ಈ ಮೇಲಿನ ಚರ್ಚೆಯಿಂದ ಸ್ಪಷ್ಟವಾಗುವ ಒಂದು ವಿಷಯವೆಂದರೆ, ಮೂಲ ಸಿಂದ ವಂಶವು ಕರಹಾಟ ಪ್ರದೇಶದಲ್ಲಿ ಅಧಿಕಾರದಲ್ಲಿದ್ದು ನಂತರ ಬೇರೆ ಬೇರೆ ಪ್ರದೇಶಗಳಿಗೆ ವಲಸೆ ಹೋದರು ಎಂಬುದು ಸ್ಪಷ್ಟವಾಗುತ್ತದೆ.

### ಸಿಂದ, ಛಿಂದ, ಛಿಂದಕ

ಇಂದಿನ ಮಧ್ಯಪ್ರದೇಶದ ಬಸ್ತರ ವಿಭಾಗದಲ್ಲಿ ಕ್ರಿ.ಶ. ೧೧ ಮತ್ತು ನಂತರದ ಶತಮಾನಗಳ ಕೆಲವು ಶಾಸನಗಳು ದೊರೆತಿದ್ದು ಅವು ಛಿಂದ ಎಂಬ ಮನೆತನದ ಸಾಮಂತರನ್ನು ಉಲ್ಲೇಖಿಸುತ್ತವೆ.[೨೦] ಈ ಛಿಂದರು ನಾಗವಂಶದಲ್ಲಿ ಹುಟ್ಟಿದವರೆಂದು ಹೇಳಲ್ಪಟ್ಟಿದ್ದಾರೆ ಮತ್ತು ಫಣಿ ಪತಾಕ ಅಂದರೆ ಪನ್ನಗಧ್ವಜರೆಂದು ವರ್ಣಿಸಲ್ಪಟ್ಟಿದ್ದಾರೆ. ಅಲ್ಲದೆ *"ಸವತ್ಸವ್ಯಾಘ್ರಲಾಂಛನ"* ಅಂದರೆ ಕರು ಅಥವಾ ಮರಿ ಇದ್ದ ಹುಲಿಯ ಚಿನ್ಹೆವುಳ್ಳವರು ಎಂದು ಬಿರುದಿದ್ದವರು. ಈ ಎಲ್ಲ ಬಿರುದುಗಳೂ ಕರ್ನಾಟಕದ ಸಿಂದರಿಗೂ ಇದ್ದವು. ಆದರೂ ಇವರ ನಡುವೆ ಸಂಬಂಧ ಕಲ್ಪಿಸಲು ಸ್ಪಷ್ಟ ಆಧಾರಗಳಿಲ್ಲ. *ಸವತ್ಸವ್ಯಾಘ್ರಲಾಂಛನ* ಎಂಬ ಬಿರುದು ಗಮನಾರ್ಹವಾಗಿದೆ. ವ್ಯಾಘ್ರಲಾಂಛನ ಎಂಬ ಬಿರುದು ಎಲ್ಲ ಸಿಂದ ಮನೆತನದವರಿಗೂ ಅನ್ವಯಿಸುತ್ತದೆ. ಆದರೆ ಸವತ್ಸ ಎಂಬ ವಿಶೇಷಣ ಬಸ್ತರ ಪ್ರದೇಶದ ಛಿಂದರ ಶಾಸನಗಳಲ್ಲಿ ಮಾತ್ರ ದೊರೆಯುತ್ತದೆ. ಈ ಬಿರುದು ನಿಡುದೋಳ ಸಿಂದನು ಹುಲಿಯ ಹಾಲನ್ನು ಕುಡಿದು ಬೆಳೆದವನೆಂಬ ಐತಿಹ್ಯವನ್ನು ಸೂಚಿಸುತ್ತದೆ ಎಂದು ದಿನಕರ ದೇಸಾಯಿಯವರು ಸರಿಯಾಗಿ ಊಹಿಸುತ್ತಾರೆ.[೨೧] ಆದರೆ ಈ ಛಿಂದರು ಬೆಳಗುತ್ತಿ ಸಿಂದರ ನಂತರ ಬಸ್ತರ ಪ್ರದೇಶಕ್ಕೆ ವಲಸೆ ಹೋದರು ಎಂಬ ಅವರ ಊಹೆಗೆ

ಸರಿಯಾದ ಆಧಾರಗಳಿಲ್ಲ. ಈ ಸಿಂದರು ಚಕ್ರಕೂಟ ಮಂಡಲವನ್ನು ಆಳುತ್ತಿದ್ದರಿಂದ, ಈ ಮನೆತನವನ್ನು ಚಕ್ರಕೂಟ ಸಿಂದರೆಂದು ಹೆಸರಿಸಲಾಗಿದೆ.

ಸಿಂದ ಮತ್ತು ಛಿಂದ ಎಂಬ ಹೆಸರುಗಳಲ್ಲಿ ಶಬ್ದ ಸಾಮ್ಯವಿದ್ದರೂ, ಒಂದರಿಂದ ಇನ್ನೊಂದು ಹುಟ್ಟಿಕೊಂಡಿತು ಎಂದು ಊಹಿಸಬಹುದಾದರೂ ಅದಕ್ಕೆ ಸರಿಯಾದ ಆಧಾರಗಳಿಲ್ಲ.

**ಸಿಂದವಾಡಿನಾಡು**

ಸಿಂದರು ಆಳಿದ ನಾಡು ಸಿಂದವಾಡಿ ಅಥವಾ ಸಿಂದವಾಡಿನಾಡು ಎಂದು ಹೆಸರಾಯಿತು ಎಂದು ನಂಬಲಾಗುತ್ತದೆ. ದಿನಕರ ದೇಸಾಯಿಯವರು ಈ ಅಭಿಪ್ರಾಯವನ್ನು ಹೊಂದಿದ್ದಾರೆ.[೨೨] ಸಿಂದರ ಕುರಿತು ಅಭ್ಯಾಸ ಮಾಡಿದ ಇನ್ನಿಬ್ಬರು ವಿದ್ವಾಂಸರಾದ ಬಿ.ಆರ್. ಗೋಪಾಲ ಹಾಗೂ ಹಿರೇಮಠ ಚನ್ನಬಸವಯ್ಯ ಇವರು ಈ ಬಗ್ಗೆ ಸ್ಪಷ್ಟವಾಗಿ ಏನನ್ನೂ ಹೇಳಿಲ್ಲ. ಹಾಗೆ ನೋಡಿದರೆ ಆರಂಭದಲ್ಲಿ ಸಿಂದವಾಡಿಗೂ ಸಿಂದರಿಗೂ ಸಂಬಂಧವೇ ಇರಲಿಲ್ಲ ಅನಿಸುತ್ತದೆ. ಏಕೆಂದರೆ, ಸಿಂದರು ಬೆಳಕಿಗೆ ಬರುವ ಪೂರ್ವದಲ್ಲಿಯೇ ಸಿಂದವಾಡಿಯು ಅಸ್ತಿತ್ವದಲ್ಲಿದ್ದಿತು. ಉದಾಹರಣೆಗೆ ಇಂದಿನ ಮಂತ್ರಾಲಯ ಅಥವಾ ಮಂಚಾಲೆಯಲ್ಲಿ ದೊರೆತ ಶಾಸನ ಕ್ರಿ.ಶ. ೮೯೩–೯೪ ರ ೨ನೇ ಕೃಷ್ಣನ ಶಾಸನವು ಅವನ ಸಾಮಂತನಾದ ಕಣ್ಣ ಎಂಬುವನು ಸಿಂದವಾಡಿ ೧೦೦೦ ಪ್ರಾಂತವನ್ನು ಆಳುತ್ತಿದ್ದನೆಂದು ಹೇಳಿದೆ.[೨೩] ಈ ಕಾಲಕ್ಕೆ ಯಾವ ಸಿಂದ ಮನೆತನಗಳು ಅಸ್ತಿತ್ವದಲ್ಲಿರಲಿಲ್ಲ. ಅದೂ ಅಲ್ಲದೇ ತದನಂತರದ ಕಾಲದಲ್ಲಿ ಅಂದರೆ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಸಿಂದರು ಸಾಮಂತರಾಗಿದ್ದಾಗ ಸಹ ಸಿಂದವಾಡಿಯು ನೊಳಂಬ ಪಲ್ಲವರ ಅಧೀನದಲ್ಲಿದ್ದಿತು.[೨೪]

ಸಿಂದವಾಡಿ ಯಾವ ಪ್ರದೇಶದಲ್ಲಿ ಹಬ್ಬಿದ್ದಿತು ಎಂಬ ಬಗ್ಗೆಯೂ ಸ್ಪಷ್ಟ ಅಭಿಪ್ರಾಯಗಳಿಲ್ಲ. ದಿನಕರ ದೇಸಾಯಿಯವರು ಕಿಸುಕಾಡು–೭೦, ಕೆಳವಾಡಿ–೭೦, ಬಾಗಡಗೆ–೭೦ ಮತ್ತು ನರೆಯಂಗಲ್ಲ–೧೨ ಇವು ಒಟ್ಟಾಗಿ ಸಿಂದವಾಡಿ ನಾಡಾಗಿತ್ತೆಂದು ಎಂದು ಹೇಳುತ್ತಾರೆ. ಇವೆಲ್ಲವು ಗದಗ, ಬಾಗಲಕೋಟೆಯ ಜಿಲ್ಲೆಯ ಪ್ರದೇಶಗಳು ಎಂದು ಸೂಚಿಸುತ್ತದೆ.[೨೫] ಅಲ್ಲದೇ ಬಳ್ಳಾರಿ ಜಿಲ್ಲೆಯ ಕುರುಗೋಡು ಸಿಂದರು ಆಳುತ್ತಿದ್ದ ಪ್ರದೇಶ ಸಹ ಸಿಂದವಾಡಿ ಎಂದು ಹೆಸರು ಪಡೆದಿತ್ತು ಎಂದು ಹೇಳಿ, ಅದು ಬೇರೆ ಸಿಂದವಾಡಿ ಎಂದು ಸೂಚಿಸುತ್ತಾರೆ. ಸಿಂದವಾಡಿ ಮೂಲತಃ ಕಿಸುಕಾಡು–೭೦, ಬಾಗಡಗೆ–೭೦ ಪ್ರಾಂತಗಳನ್ನು ಹೊಂದಿದ್ದು ಮುಂದೆ ಸಿಂದವಾಡಿ ರಾಜ್ಯದ ಪ್ರಮುಖ ಭಾಗಗಳಾದವು ಎಂದು ಸಹ ಅವರು ಹೇಳುತ್ತಾರೆ.[೨೬] ಆದರೆ ಇವಾವವೂ ವಸ್ತುಸ್ಥಿತಿಗೆ ಹೊಂದುವುದಿಲ್ಲ. ಶಾಸನಗಳಲ್ಲಿ ಬರುವ ಅನೇಕ ಉಲ್ಲೇಖಗಳನ್ನು ಅವಲಂಬಿಸಿ

ಹೇಳುವುದಾರೆ, ಸಿಂದವಾಡಿ-೧೦೦೦ ಇಂದಿನ ಬಳ್ಳಾರಿ ಜಿಲ್ಲೆ ಮತ್ತು ಅದಕ್ಕೆ ಹೊಂದಿಕೊಂಡ ಅನಂತಪುರ ಜಿಲ್ಲೆಯ ಕೆಲವು ಪ್ರದೇಶಗಳನ್ನು ಒಳಗೊಂಡಿದ್ದಿತು. ಈ ಹೇಳಿಕೆಗೆ ಆಧಾರವೆಂದರೆ ಆದವಾನಿ ೫೦೦ ಪ್ರಾಂತವು ಸಿಂದವಾಡಿ ಪ್ರಾಂತದ ಭಾಗವಾಗಿದ್ದಿತು. ಆದವಾನಿ ಈಗಿನ ಆಂಧ್ರಪ್ರದೇಶದ ಅನಂತಪುರ ಜಿಲ್ಲೆಯಲ್ಲಿದೆ. ತುಂಬುಳ-೩೦ ಎಂಬ ಚಿಕ್ಕ ಪ್ರಾಂತವು ಆದವಾನಿ-೫೦೦ ರಲ್ಲಿ ಒಳಗೊಂಡಿದ್ದಿತು. ಈ ತುಂಬುಳವು ಈಗಿನ ಚಿನ್ನತುಂಬುಳಂ ಎಂಬ ಗ್ರಾಮವಾಗಿದ್ದು, ಆದವಾನಿ ತಾಲೂಕಿನಲ್ಲಿದೆ. ತುಂಬುಳವೇ ಸಿಂದವಾಡಿಯ ಮುಖ್ಯ ಸ್ಥಳವಾಗಿತ್ತೆಂದು ಸೂಚಿತವಾಗುತ್ತದೆ.[೨೭] ಇಲ್ಲಿ ಗಮನಿಸಬೇಕಾದ ವಿಷಯವೆಂದರೆ ಚಿನ್ನತುಂಬುಳದಲ್ಲಿ ದೊರೆತ ಒಂದು ಶಾಸನವು ಚಾಲುಕ್ಯ-೬ನೆಯ ವಿಕ್ರಮಾದಿತ್ಯನ ರಾಣಿಯಾದ ಮಲೆಯಮತಿದೇವಿಯು ಈ ತುಂಬುಳವನ್ನು ಆಳುತ್ತಿದ್ದಳೆಂದು ಹೇಳಿದೆ.[೨೮] ಹಾಗೆಯೇ ಗುರುಜೆ-೭೦[೨೯] ಎಂಬ ಪ್ರದೇಶವು ಸಿಂದವಾಡಿಯ ಭಾಗವಾಗಿತ್ತೆಂದು ತಿಳಿದು ಬರುತ್ತದೆ. ಹಾಗೆಯೇ ಕವತಾಳ-೧೨[೩೦] ಬಾಗಿ-೧೨[೩೧] ಎಂಬ ಚಿಕ್ಕ ಪ್ರದೇಶಗಳು ಈ ನಾಡಿನಲ್ಲಿ ಸೇರಿದ್ದವೆಂದು ತಿಳಿದು ಬರುತ್ತದೆ. ಇವೆಲ್ಲವು ಬಳ್ಳಾರಿ ಪ್ರದೇಶದಲ್ಲಿಯವು. ಸಿಂದಗೇರಿ (ಪ್ರಾಚೀನ ಸಿಂದಗೆರೆ) ಸಿಂದವಾಳ (ಪ್ರಾಚೀನ ಸಿಂದವೊಳಲ್) ಎಂಬ ಸಿಂದ ಹೆಸರಿನ ಊರುಗಳು ಬಳ್ಳಾರಿ ಪ್ರದೇಶದಲ್ಲಿ ಇಂದಿಗೂ ಇರುವುದನ್ನು ಗಮನಿಸಬಹುದು.

ಕ್ರಿ.ಶ. ೫ನೇ ಶತಮಾನದಷ್ಟು ಹಿಂದಿನ ಒಂದು ಕದಂಬ ಶಾಸನದಲ್ಲಿ "ಸಿಂದುಥಯ ರಾಷ್ಟ್ರ" ಎಂಬ ಉಲ್ಲೇಖವಿದ್ದು,[೩೨] ಇದು ಸಿಂದನಾಡಿನ ಪ್ರಾಚೀನತಮ ಉಲ್ಲೇಖ ಎಂದು ದಿನಕರ ದೇಸಾಯಿ ಭಾವಿಸುತ್ತಾರೆ.[೩೩] ಗೋಪಾಲರವರಂತೂ ಇದು ಇಂದಿನ ಬಿಜಾಪುರ ಜಿಲ್ಲೆಯ ಸಿಂದಗಿ ತಾಲೂಕಿನ ಸುತ್ತಮುತ್ತಲಿನ ಪ್ರದೇಶವಾಗಿರಬೇಕೆಂದು ಊಹಿಸುತ್ತಾರೆ. ಆದರೆ ಇವೆರಡಕ್ಕೂ ಆಧಾರಗಳಿಲ್ಲ.[೩೪]

ಈ ಅಧ್ಯಾಯದಲ್ಲಿ ಪ್ರತಿಪಾದಿಸಿರುವ ವಿಷಯಗಳು ಮೂರು

(೧) ನಿಡುದೋಳ ಸಿಂದನ ಕಥೆಯು ಐತಿಹಾಸಿಕ ಎನ್ನುವುದಕ್ಕಿಂತಲೂ ಪೌರಾಣಿಕವೇ ಆಗಿದೆ. ದೈವಾಂಶಸಂಭೂತನೆಂದು ಬಿಂಬಿಸಲ್ಪಡುವ ವ್ಯಕ್ತಿಯನ್ನು ಐತಿಹಾಸಿಕ ವ್ಯಕ್ತಿಯೆಂದು ಪರಿಗಣಿಸುವುದು ದುಸ್ತರ. ಒಂದು ರಾಜಮನೆತನಕ್ಕೆ ದೈವೀ ಸಂಪರ್ಕ ಕಲ್ಪಿಸುವುದು ಹಾಗೆಂದು ವೈಭವೀಕರಿಸುವುದು, ಹೊಸ ವಿಷಯವೇನಲ್ಲ ಇಂತಹ ಅನೇಕ ಉದಾಹರಣೆಗಳು

ಇತಿಹಾಸದಲ್ಲಿವೆ. ಅದರಂತೆ ನಿಡುದೋಳ ಸಿಂದನು ಮಯೂರವರ್ಮನ ಸಮಕಾಲೀನ ಎಂದು ನಿರ್ಣಯಿಸುವುದು ಸರಿಯಲ್ಲ.

(೨) ಕರ್ನಾಟಕದ ಸಿಂದ ಮನೆತನಗಳಿಗೂ ಕರಹಾಟಪುರಕ್ಕೂ ಸಂಬಂಧವಿದ್ದಿತು, ನಿಡುದೋಳ ಸಿಂದನಿಗಲ್ಲದೇ ಬೆಳಗುತ್ತಿಸಿಂದ ಸಾಮಂತನಾದ ಅಯ್ಯಣಜೋಗರಸನಿಗೂ ಕರಹಾಟಪುರವರಶ್ವೇರ ಎಂಬ ಬಿರುದು ಇದ್ದುದನ್ನು ಗಮನಿಸಿದರೆ ಇದು ಸ್ಪಷ್ಟವಾಗವುದು. ಬೆಳಗುತ್ತಿ ಸಿಂದರು ಮೂಲತಃ ಚಾಲುಕ್ಯ ಸಾಮಂತರಾಗಿದ್ದ ಶಿಲಾಹಾರರ ಅಧೀನರಾಗಿದ್ದು, ನಂತರದಲ್ಲಿ ಬೆಳಗುತ್ತಿ ಕಡೆಗೆ ಚಾಲುಕ್ಯ ಸಾಮಂತರಾಗಿ ಬಂದಿರಬಹುದಾಗಿದೆ.

(೩) ಸಿಂದರ ಆಳಿಕೆಯಿಂದ ಅವರ ಪ್ರದೇಶಕ್ಕೆ ಸಿಂದವಾಡಿನಾಡು ಎಂದು ಹೆಸರು ಬಂದಿತು ಎಂಬುದಕ್ಕೆ ಆಧಾರವಿಲ್ಲ. ಸಿಂದರು ಅಧಿಕಾರಕ್ಕೆ ಬರುವ ಮೊದಲೇ ಸಿಂದವಾಡಿ ಅಸ್ತಿತ್ವದಲ್ಲಿದ್ದು, ಆ ಪ್ರದೇಶವನ್ನು ಸಿಂದರ ಕಾಲದಲ್ಲಿ ನೊಳಂಬ ಪಲ್ಲವರು ಮತ್ತು ಬೇರೆ ಬೇರೆ ಮಾಂಡಲೀಕರು ಆಳುತ್ತಿದ್ದರೆಂದು ಶಾಸನಗಳಿಂದ ಗೊತ್ತಾಗುತ್ತವೆ. ವಸ್ತುತಃ ಸಿಂದವಾಡಿ ಹೆಚ್ಚಾಗಿ ಬಳ್ಳಾರಿ ಪ್ರದೇಶ ಮತ್ತು ಅದಕ್ಕೆ ಹೊಂದಿದ ರಾಯಚೂರು, ಅನಂತಪುರ ಜಿಲ್ಲೆಗಳ ಕೆಲವು ಪ್ರದೇಶಗಳನ್ನು ಒಳಗೊಂಡಿದ್ದಿತ್ತೆಂದು ಹೇಳಲು ಶಾಸನಗಳ ಆಧಾರಗಳಿವೆ.

**ಉಲ್ಲೇಖಗಳು ಮತ್ತು ಟಿಪ್ಪಣಿಗಳು :**

೧ ಬಿ.ಆರ್. ಗೋಪಾಲ ಮೈನರ್ ಡಯಾನಾಸ್ಟೀಜ ಆಫ್ ಸೌಥ್ ಇಂಡಿಯಾ, (ಕರ್ನಾಟಕ) ಸಂ, ೧, ಪು.೮೫

೨ ಚನ್ನಬಸವಯ್ಯ ಹಿರೇಮಠ ಅವರು (ಕುರುಗೋಡು ಸಿಂದರು, ಒಂದು ಅಧ್ಯಯನ, ಪು. –೧೪. ೧೫) ಗೋಪಾಲ ಬಿ.ಆರ್. ರವರ ಈ ಅಭಿಪ್ರಾಯವನ್ನು ಉಲ್ಲೇಖಿಸುತ್ತಾರೆ ಮತ್ತು ಅವರೂ ಸಹ ಸ್ಪಷ್ಟವಿಲ್ಲದಿದ್ದರೂ ಇದೇ ಅಭಿಪ್ರಾಯವನ್ನು ಹೊಂದಿದಂತೆ ಕಾಣುತ್ತದೆ.

೩ ಎಮ್.ಎ.ಆರ್.೧೯೨೯; ಶಾ. ಸಂ. ೧, ಪು.೫೦. ಈ ಶಾಸನವು ಪ್ರಾಕೃತದಲ್ಲಿರದೆ ಸಂಸ್ಕೃತದಲ್ಲಿದ್ದು, ಅದರಲ್ಲಿ ಕದಂಬ ಮಯೂರವರ್ಮನ ಹೊರತು ಯಾವುದೇ ಇತರ ವಂಶದವರ ಹೆಸರಿಲ್ಲವೆಂದು ನಿರ್ಧಾರವಾಗಿದೆ. ಪಾಡಿಗಾರ ಶ್ರೀನಿವಾಸ, "ಕರ್ನಾಟಕದ ಶಾಸನಗಳು", ಕರ್ನಾಟಕ ಶಾಸನ ಸಂಶೋಧನೆ (ಸಂ.ಕೆ.ಜಿ. ಭಟ್‌ಸೂರಿ), ಪು.೮೫.

೪ ಅನ್ಸಾರಿ ಝೆಡ್.ಕೆ. ಅವರು ಸಹ ಸೇಂದ್ರಕರನ್ನು ಸಿಂದರೊಡನೆ ಗುರುತಿಸಲು ಆಧಾರಗಳಿಲ್ಲವೆಂದು ಹೇಳುತ್ತಾರೆ, ಸಮ್ ಫ್ಯುಡಿಟರಿ ಫ್ಯಾಮಿಲಿಸ್ ಆಫ್ ಮಿಡೆವಲ್ ಕರ್ನಾಟಕ-ಎ ಸ್ಟಡಿ, ಪು.೪೮.

೫ ಸೌಥ್ ಇಂಡಿಯನ್ ಇನಸ್ಕ್ರಿಪ್ಶನ್ಸ್, ಶಾ.ಸಂ. ೯ ; ಎಸ್.ವಿ. ಪಾಡಿಗಾರ ಇನಸ್ಕ್ರಿಪ್ಶನ್ಸ್ ಆಫ್ ದಿ ಚಾಲುಕ್ಯಾಸ್ ಆಫ್ ಬಾದಾಮಿ ಶಾ.ಸಂ. ೧೪೫.

೬ ಎಫಿಗ್ರಾಪಿಯಾ ಕರ್ನಾಟಿಕಾ, ಸಂ. ೧೧ (ಹಳೆಯ), ಹೊನ್ನಾಳಿ (ಎಚ್.ಎಲ್.) ೫೦.

೭ ಕರ್ನಾಟಕ ಇನಸ್ಕ್ರೀಪ್ಸನ್ಸ್, ಸಂ.೬, ಶಾ.ಸಂ. ೩೦

೮ ಎ.ಕ, ಸಂ. ೮ (ಹಳೆಯ), ಹೊನ್ನಾಳಿ (ಎಚ್.ಎಲ್.) ೫೦

೯ ಎಪಿಗ್ರಾಫಿಯಾ ಇಂಡಿಕಾ, ಸಂ. ೩, ಪು. ೨೩೦

೧೦ ಬಿ.ಆರ್. ಗೋಪಾಲ, ಮಾನವಿಕ ಕರ್ನಾಟಕ, ಸಂ ೪, ಸಂಚಿಕೆ ೨, ಪು.೩೩.

೧೧ ಎ.ಕ, ಸಂ. ೧೪, ಶಾ.ಸಂ. ೧೯, ಪು. ೨೫೫.

೧೨ ಚನ್ನಬಸವಯ್ಯ ಹಿರೇಮಠ ಕುರುಗೋಡಿನ ಸಿಂದರು-ಒಂದು ಅಧ್ಯಯನ, ಪು. ೧೯.

೧೩ ಅದೇ.

೧೪ ಪಿ.ಬಿ. ದೇಸಾಯಿ (ಸಂ), ಎ ಹಿಸ್ಟರಿ ಆಫ್ ಕರ್ನಾಟಕ, ಪು.೫೭

೧೫ ಚನ್ನಬಸವಯ್ಯ ಹಿರೇಮಠ ಪುರ್ವೋಲ್ಲಿಖಿತ, ಪು.೧೯.

೧೬ ಕ. ಇ. ಸಂ. ೬, ಶಾ.ಸಂ. ೧೧.

೧೭ ಎ.ಕ, ಸಂ. ೨೦, ಶಾ.ಸಂ. ೧೧.

೧೮ ಕಾರ್ಪಸ್ ಇನಸ್ಕ್ರಿಪ್ಶನ್ ಇಂಡಿಕಾರಮ್, ಸಂ. ೬, ಪು. xxvi

೧೯ ಎ. ಇ, ಸಂ. ೩, ಶಾ.ಸಂ. ೪೩, ಪು. ೨೦೬.

೨೦ ಎ. ಇ, ಸಂ. ೧೦, ಶಾ.ಸಂ. ೫, ಪು. ೩೨.

೨೧ ದಿನಕರ ದೇಸಾಯಿ ಮಹಾಮಂಡಳೇಶ್ವರಾಸ್ ಅಂಡರ್ ದಿ ಚಾಲುಕ್ಯಸ ಆಫ್ ಕಲ್ಯಾಣ

೨೨ ಅದೇ.

೨೩ ಆಡಳಿತ ವಿಭಾಗದ ಜೊತೆಗೆ ಸಿಂದವಾಡಿ ೧೦೦೦, ಬೆಳ್ವೊಲ ೩೦೦, ಬನವಾಸಿ ೧೨,೦೦೦ ಇತ್ಯಾದಿ ಸಂಖ್ಯೆಗಳನ್ನು ಸೇರಿಸುವುದು ಪ್ರಾಚೀನ ಕರ್ನಾಟಕದ ಆಡಳಿತದಲ್ಲಿ ವಿಶಿಷ್ಟವಾದ ಪದ್ಧತಿಯಾಗಿತ್ತು. ಈ ಸಂಖ್ಯೆಗಳ ಅರ್ಥ ಮತ್ತು ದೇಶಗಳ ಬಗ್ಗೆ ಹಲವಾರು ಚರ್ಚೆಗಳು ನಡೆದಿವೆ. ಸಿಂದರು ಸಾಮಂತರಾಗಿದ್ದಾಗಿನ ಈ ವಿಷಯವನ್ನು, ಆಡಳಿತದ ಪದ್ಧತಿಯನ್ನು ಮುಂದಿನ ಅಧ್ಯಾಯದಲ್ಲಿ ಚರ್ಚಿಸಲಾಗುವುದು.

೨೪ ಎಸ್.ಐ.ಐ, ಸಂ. ೯, ಭಾಗ ೧ ರಲ್ಲಿ ಪ್ರಕಟವಾದ ಅನೇಕ ಶಾಸನಗಳನ್ನು ನೋಡಬಹುದು.

೨೫ ದಿನಕರ ದೇಸಾಯಿ ಪೂರ್ವೋಲ್ಲಿಖಿತ, ಪು. ೬೭

೨೬ ಅದೇ,

೨೭ ಎಸ್.ಐ.ಐ, ಸಂ. ೯, ಭಾಗ ೧, ಶಾ.ಸಂ. ೨೨೮.

೨೮ ಅದೇ, ಶಾ.ಸಂ. ೧೭೫.

೨೯ ಅದೇ, ಶಾ.ಸಂ. ೨೨೬

೩೦ ಅದೇ, ಶಾ.ಸಂ. ೨೫೦

೩೧ ಅದೇ, ಶಾ.ಸಂ. ೨೭೭.

೩೨ ಬಿ.ಆರ್. ಗೋಪಾಲ್ ಕಾರ್ಪಸ್ ಆಫ್ ಕದಂಬ ಇನಸ್ಕ್ರಿಪ್ಶನ್, ಸಂ. ೧, ಪು. ೧೨೪

೩೩ ದಿನಕರ ದೇಸಾಯಿ ಪೂರ್ವೋಲ್ಲಿಖಿತ, ಪು.೬.

೩೪ ಬಿ.ಆರ್. ಗೋಪಾಲ್ ಪೂರ್ವೋಲ್ಲಿಖಿತ, ಪು. lxix.

# ಅಧ್ಯಾಯ ೪

## ಸಿಂದ ಮನೆತನಗಳ ರಾಜಕೀಯ ಚರಿತ್ರೆ

## ವಂಶಾವಳಿ, ಕಾಲಾನುಕ್ರಮ ಮತ್ತು ರಾಜಕೀಯ ಘಟನೆಗಳು

# ಅಧ್ಯಾಯ ೪

# ಸಿಂದ ಮನೆತನಗಳ ರಾಜಕೀಯ ಚರಿತ್ರೆ
## ವಂಶಾವಳಿ, ಕಾಲಾನುಕ್ರಮ ಮತ್ತು ರಾಜಕೀಯ ಘಟನೆಗಳು

ಈ ಹಿಂದೆ ನೋಡಿದಂತೆ ಮೂಲ ಸಿಂದ ವಂಶ ಒಂದೇ ಇದ್ದರೂ ಕಾಲಾಂತರದಲ್ಲಿ ಅದು ವಿಭಜಿತವಾಗಿ ಆ ವಂಶದವರು ಬೇರೆ ಬೇರೆ ಆಳರಸರ ಆಶ್ರಯದಲ್ಲಿ, ಬೇರೆ ಬೇರೆ ಪ್ರದೇಶಗಳಲ್ಲಿ ಆಳತೊಡಗಿದರು. ಈ ಮನೆತನಗಳು ಇವರು ಆಳುತ್ತಿದ್ದ ಪ್ರದೇಶಗಳಿಗನುಗುಣವಾಗಿ ಆಯಾ ಪ್ರದೇಶದ ಸಿಂದರು ಎಂದು ಗುರುತಿಸಲ್ಪಟ್ಟಿದ್ದಾರೆ. ತಮ್ಮ ವಂಶಗಳನ್ನು ಗುರುತಿಸಲು ಬೇರೆ ಬೇರೆ ವಿಧದ ವಿವರಗಳನ್ನು ನೀಡಿದರೂ ಒಟ್ಟಿನಲ್ಲಿ ಇವೆಲ್ಲವೂ 'ಫಣಿವಂಶ' ಅಥವಾ ನಾಗಕುಲಕ್ಕೆ ಸೇರಿದ್ದವೆಂಬುದನ್ನು ಈಗಾಗಲೇ ನೋಡಿದ್ದೇವೆ. ಐತಿಹ್ಯಗಳ ಪ್ರಕಾರ ಈ ವಂಶಗಳು ಅತಿ ಪ್ರಾಚೀನವೆನಿಸಿದ್ದರೂ ಇತಿಹಾಸ ಕಾಲದಲ್ಲಿ ಅವುಗಳ ಆರಂಭವನ್ನು ಶಾಸನಗಳ ಆಧಾರದಿಂದ ಗುರುತಿಸಲು ಸಾಧ್ಯವಾಗಿದೆ. ಇದೇ ಆಧಾರದ ಮೇಲೆ ಆಯಾ ವಂಶಗಳ ವಂಶಾವಳಿ, ಮತ್ತು ಕಾಲಾನುಕ್ರಮಗಳನ್ನು ಗುರುತಿಸಲು ಸಾಧ್ಯವಾಗುತ್ತದೆ. ಈ ಅಧ್ಯಾಯದಲ್ಲಿ ಈ ಪ್ರಯತ್ನವನ್ನು ಮಾಡಲಾಗಿದೆ.

### ೧ – ಬೆಳಗುತ್ತಿ ಸಿಂದರು

ಈ ಅಭ್ಯಾಸದಿಂದ ಕಂಡು ಬಂದ ಒಂದು ಸಂಗತಿ ಎಂದರೆ ಈ ಸಿಂದ ವಂಶಗಳಲ್ಲಿ, ಬೆಳಗುತ್ತಿ ಸಿಂದರು ಹೆಚ್ಚು ಪ್ರಮುಖರು. ಇವರು ಆಳುತ್ತಿದ್ದ ಪ್ರದೇಶದ ಮುಖ್ಯ ಸ್ಥಳವು 'ಬೆಳಗವರ್ತಿ' ಅಥವಾ ಬೆಳಗುತ್ತಿ ಎಂಬ ಸ್ಥಳವಾಗಿದ್ದರಿಂದ ಇವರನ್ನು ಬೆಳಗುತ್ತಿ ಸಿಂದರೆಂದು ಇತಿಹಾಸಕಾರರು ಗುರುತಿಸಿದ್ದಾರೆ. ಈ ಬೆಳಗುತ್ತಿಯು ಇಂದಿನ ಶಿವಮೊಗ್ಗ ಜಿಲ್ಲೆಯ ಹೊನ್ನಾಳಿ ತಾಲೂಕಿನ ಒಂದು ಗ್ರಾಮ. ಈ ಮನೆತನದ ಮಾಂಡಲಿಕರು ಹೆಚ್ಚಾಗಿ ಬೆಳಕಿಗೆ ಬಂದಿದ್ದು ಕಲ್ಯಾಣದ ಚಾಲುಕ್ಯರ ಆರಂಭ ಕಾಲದಲ್ಲಿ. ಅಲ್ಲಿಂದ ಮುಂದೆ ಈ ವಂಶದ ಇತಿಹಾಸವು ಅವರ ಶಾಸನಗಳಿಂದ ತಿಳಿದು ಬರುತ್ತದೆ. ಆದರೆ ಅದಕ್ಕೂ ಮುಂಚೆಯೇ ಸಿಂದ ಮನೆತನದವರ ಕೆಲವು ಹೆಸರುಗಳು ಶಾಸನಗಳಲ್ಲಿ ಉಲ್ಲೇಖಿಸಲ್ಪಟ್ಟಿದ್ದು ಅವುಗಳನ್ನು ಗಮನಿಸುವುದು ಅವಶ್ಯಕವಾಗಿದೆ.

ದಿನಕರ ದೇಸಾಯಿಯವರು ಹೊಳಲ್ಕೆರೆ ಶಾಸನದಲ್ಲಿ[೧] ಬರುವ ನನ್ನಿಯಸಿಂದ ಎಂಬವನ ಹೆಸರನ್ನು ಉಲ್ಲೇಖಿಸುತ್ತಾರೆ.[೨] ಈ ಶಾಸನದಕಾಲ ಕ್ರಿ.ಶ. ೯೬೭. ಈ ಶಾಸನದಲ್ಲಿ ಅಕಾಲವರ್ಷದೇವನ ಅಂದರೆ ರಾಷ್ಟ್ರಕೂಟ ೩ನೇ ಕೃಷ್ಣನ ಸಾಮಂತನಾದ ಶೂದ್ರಕ ಎಂಬುವನು

ಕದಂಬಳಿಗೆ-೧೦೦೦ ಪ್ರಾಂತವನ್ನು ಆಳುತ್ತಿದ್ದು, ಸಾಯಿರನಾಡಪ್ರಭು ಶ್ರೀಕರಸಿಗ ನನ್ನಿಯ ಸಿಂದನು ಶಿಡಿಲಂಕರಾಮನೆಂಬುವನು ಕಟ್ಟಿಸಿದ ಶಿಡಿಲೇಶ್ವರ ದೇವಾಲಯಕ್ಕೆ ಕೆಲವು ದಾನಗಳನ್ನು ಮಾಡಿದನೆಂದು ಹೇಳಿದೆ. ಈ ನನ್ನಿಯ ಸಿಂದನು ಬೆಳಗುತ್ತಿ ಸಿಂದ ಮನೆತನದ ಮೊದಲನೆಯ ಸಾಮಂತನೆಂಬುದು ದಿನಕರ ದೇಸಾಯಿಯವರ ಅಭಿಮತ. ಆದರೆ ಹಾಗೆಂದು ಗ್ರಹಿಸುವ ಯಾವ ಸೂಚನೆಯೂ ಈ ಶಾಸನದಲ್ಲಿ ಇಲ್ಲ. ಬಿ.ಆರ್. ಗೋಪಾಲ ಅವರ ಪ್ರಕಾರ ನನ್ನಿಯಸಿಂದ ಎಂಬುದು ಒಂದು ಬಿರುದು ಮಾತ್ರ ಇದ್ದಿರಬಹುದು; ಹಾಗೆಂದ ಮಾತ್ರಕ್ಕೆ ಅವನು ಸಿಂದ ಮನೆತನಕ್ಕೆ ಸೇರಿದವನೆಂದು ಹೇಗೆ ಹೇಳುವುದು ಎಂದು ಪ್ರಶ್ನಿಸುತ್ತಾರೆ.[೩] ಆದರೂ ನನ್ನಿಯ ಸಿಂದನ ಸಂಬಂಧವನ್ನು ಬೆಳಗುತ್ತಿ ಸಿಂದ ಮನೆತನಕ್ಕೆ ಕಲ್ಪಿಸುವುದು ದುಸ್ತರವಾದರೂ ಅವನು ಯಾವುದೋ ಒಂದು ಸಿಂದ ಮನೆತನಕ್ಕೆ ಸೇರಿದವನೆಂಬುದನ್ನು ಅಲ್ಲಗಳೆಯುವಂತಿಲ್ಲ. ಏಕೆಂದರೆ ಈ ನನ್ನಿಯಸಿಂದನು ಮಾಡಿದ ದಾನವು 'ಸಿಂದರ ಧರ್ಮ' ಎಂದು ಕರೆಯಲ್ಪಟ್ಟಿದ್ದು ಸಿಂದ ವಂಶಜರೆಲ್ಲರೂ ಇದನ್ನು ಪಾಲಿಸಬೇಕೆಂದು ವಿಧಿಸುತ್ತದೆ. ಹೀಗಾಗಿ ನನ್ನಿಯಸಿಂದನು ಯಾವುದೋ ಒಂದು ಸಿಂದ ಮನೆತನಕ್ಕೆ ಸೇರಿದವನೆಂದು ತಿಳಿಯುವುದು ಅನಿವಾರ್ಯವಾಗುತ್ತದೆ. ಅದೂ ಅಲ್ಲದೇ ನನ್ನಿಯಸಿಂದನು 'ಸಾಯಿರನಾಡಪ್ರಭು' ಎಂದು ಕರೆಯಲ್ಪಟ್ಟಿದ್ದಾನೆ. ಸಾಯಿರನಾಡು ಅಂದರೆ ಸಿಂದವಾಡಿ-೧೦೦೦ ಎಂಬ ಪ್ರಾಂತವೆಂದು ಗ್ರಹಿಸುವುದು ಸಹಜವಾಗಿದೆ. ಸಿಂದವಾಡಿ ನಾಡು ಅಥವಾ ಸಿಂದವಾಡಿ-೧೦೦೦ ರಾಷ್ಟ್ರಕೂಟರ ಕಾಲಕ್ಕೆ ಆಗಲೇ ಅಸ್ತಿತ್ವದಲ್ಲಿತ್ತೆಂದು ಈ ಮೊದಲೇ ನೋಡಿದ್ದೇವೆ. ಆದ್ದರಿಂದ ನಮ್ಮ ಅಭಿಪ್ರಾಯದಲ್ಲಿ ನನ್ನಿಯಸಿಂದನು ೧೦ನೇ ಶತಮಾನದ ಯಾವುದೋ ಒಂದು ಮನೆತನಕ್ಕೆ ಸೇರಿದವನಾಗಿದ್ದು ರಾಷ್ಟ್ರಕೂಟ ಅರಸನ ಸಾಮಂತನೊಬ್ಬನ ಕೈಕೆಳಗಿನ ಅಧಿಕಾರಿಯಾಗಿದ್ದನು ಎಂದು ಮಾತ್ರ ಗ್ರಹಿಸಬಹುದು.

ಶಾಸನಗಳ ಆಧಾರದ ಮೇಲೆ ಹರಿಹರದ ಶಾಸನದಲ್ಲಿ ಉಲ್ಲೇಖಿಸಲ್ಪಟ್ಟ[೪] ಪಿರಿಯಚಟ್ಟರಸನೇ ಮೊದಲ ಬೆಳಗುತ್ತಿ ಸಿಂದ ಮನೆತನದ ಸಾಮಂತನೆಂಬುದು ನಿರ್ವಿವಾದ. ವಿಶದವಾದ ಚರ್ಚೆಯ ನಂತರ ಬಿ.ಆರ್. ಗೋಪಾಲ ಅವರು ಪಿರಿಯಚಟ್ಟರಸನ ಮಗ ಜೋಗರಸನು ಸುಮಾರು ಕ್ರಿ.ಶ. ೧೦೬೦ ರಿಂದ ೧೦೯೦ ರ ಕಾಲಾವಧಿಯಲ್ಲಿ ಆಳಿದನೆಂದು ನಿರ್ಧರಿಸುತ್ತಾರೆ.[೫] ಈ ಗ್ರಹಿಕೆಯಂತೆ ಚಟ್ಟರಸನು ಸುಮಾರು ಕ್ರಿ.ಶ. ೧೦೪೦-೧೦೬೦ ರ ಕಾಲಾವಧಿಯಲ್ಲಿ ಅಧಿಕಾರದಲ್ಲಿದ್ದನೆಂದು ಊಹಿಸಬಹುದು. ಇದರಿಂದ ಇವನಿಗೂ ಮತ್ತು ಕ್ರಿ.ಶ. ೯೬೭ರ ಶಾಸನದಲ್ಲಿ ಬರುವ ನನ್ನಿಯಸಿಂದನಿಗೂ ಸುಮಾರು ೭೦ ವರ್ಷಗಳಿಗೂ ಮೇಲ್ಪಟ್ಟು

ಅಂತರವಾಗುತ್ತದೆ. ಈ ಅವಧಿಯಲ್ಲಿ ಇನ್ನು ಕೆಲವು ಸಿಂದರ ಹೆಸರುಗಳು ಶಾಸನಗಳಲ್ಲಿ ಸಿಗುತ್ತವೆ. ಈ ಶಾಸನಗಳನ್ನು ಪರಿಶೀಲಿಸಬಹುದು. ಹಾವೇರಿ ಜಿಲ್ಲೆಯ ಖಂಡೆಬಾಗೂರು[೬] ಶಾಸನದಲ್ಲಿ ಸಿಂದರದೇವನ ಉಲ್ಲೇಖವಿದ್ದು ಅವನ ಮಗ ವಿಕ್ರಮಾದಿತ್ಯನನ್ನು ಹೆಸರಿಸಿದೆ. ಈ ಶಾಸನದ ಕಾಲ ಕ್ರಿ.ಶ. ೯೨೪ ಈ ಸಿಂದರಸನೇ ಬೆಳಗುತ್ತಿ ಸಿಂದ ಮನೆತನದ ಮೊದಲ ಸಾಮಂತನೆಂದು ಹಿರೇಮಠ ಚನ್ನಬಸವಯ್ಯ ಅಭಿಪ್ರಾಯಪಡುತ್ತಾರೆ.[೭] ಆದರೆ ಇದಕ್ಕೆ ಯಾವುದೇ ಆಧಾರವಿಲ್ಲ. ಅಲ್ಲದೇ ಇವನು ಮೇಲೆ ಉಲ್ಲೇಖಿಸಲಾದ ನನ್ನಿಯಸಿಂದನಿಗಿಂತಲೂ ಮೊದಲಿನವನಾಗುತ್ತಾನೆ ಎಂಬುದನ್ನು ಗಮನಿಸಬೇಕು. ಬಳ್ಳಾರಿ ಜಿಲ್ಲೆಯ ಕುಡತಿನಿಯಲ್ಲಿ ದೊರೆತ ಒಂದು ಶಾಸನದಲ್ಲಿ ಸಿಂದು ಕುಲದ ಸ್ತ್ರೀಯೊಬ್ಬಳ ಉಲ್ಲೇಖವಿದೆ. ಶಾಸನ ಒಡೆದು ಹೋಗಿದ್ದರಿಂದ ಅವಳ ಹೆಸರು ಮತ್ತು ಉಳಿದ ವಿವರಗಳು ಕಳೆದು ಹೋಗಿವೆ. ಶಾಸನವು ರಾಷ್ಟ್ರಕೂಟರ ೩ನೇ ಇಂದ್ರನ ಕಾಲಕ್ಕೆ ಸೇರಿದೆ. ಶಾಸನದ ಕಾಲ ಸುಮಾರು ಕ್ರಿ.ಶ. ೯೨೧[೮].

ದಿನಕರ ದೇಸಾಯಿಯವರು ನನ್ನಿಯಸಿಂದನ ನಂತರ ಜಾತರಸ ಎಂಬುವನನ್ನು ಹೆಸರಿಸುತ್ತಾರೆ.[೯] ಇದಕ್ಕೆ ಮುಖ್ಯ ಕಾರಣವೆಂದರೆ, ಅವನು ದಾವಣಗೆರೆ ತಾಲೂಕಿನ ಶಾಸನವೊಂದರಲ್ಲಿ[೧೦] ಮುಳಗುಂದ ಸಿಂದ ಎಂದು ಕರೆಯಲ್ಪಟ್ಟಿದ್ದಾನೆ. ಈ ಶಾಸನದ ಕಾಲ ಕ್ರಿ.ಶ. ೯೯೨. ಮುಳಗುಂದ ಎಂಬುದು ಒಂದು ಗ್ರಾಮದ ಹೆಸರು. ಈಗ ಗದಗ ಜಿಲ್ಲೆಯಲ್ಲಿದೆ. ಮುಳಗುಂದ ಸಿಂದ ಎಂದರೆ ಮುಳಗುಂದಕ್ಕೆ ಸೇರಿದ ಅಥವಾ ಮುಳಗುಂದವನ್ನು ಆಳುತ್ತಿದ್ದ ಸಿಂದನು ಎಂದು ಅರ್ಥವಾಗುತ್ತದೆ. *ಸಿಂದ* ಎಂಬ ಹೆಸರು ಸಿಂದ ವಂಶಕ್ಕೆ ಅನ್ವಯವಾಗುತ್ತದೆ. ಆದ್ದರಿಂದ ಇವನು ಸಿಂದ ವಂಶದವನೇ ಎಂದು ಹೇಳಬಹುದು. ಆದರೆ ಎಷ್ಟರ ಮಟ್ಟಿಗೆ ಬೆಳಗುತ್ತಿ ಸಿಂದ ಮನೆತನಕ್ಕೆ ಸೇರಿದವನು ಎಂದು ಹೇಳುವುದು ಕಷ್ಟ. ಈ ಕಾಲದಲ್ಲಿ ಕಲ್ಯಾಣ ಚಾಲುಕ್ಯ ವಂಶವು ಸಂಸ್ಥಾಪಿತವಾಯಿತು. ಈ ಮನೆತನದ ೨ನೇ ತೈಲಪನು ಇದನ್ನು ಸ್ಥಾಪಿಸಿದನು. ಈ ಚಾಲುಕ್ಯರ ಕಾಲದಲ್ಲಿ ಸಿಂದ ಮನೆತನಗಳು ಬೆಳಕಿಗೆ ಬಂದವು. ಮುಳಗುಂದವು ಚಾಲುಕ್ಯ ಸಾಮ್ರಾಜ್ಯದಲ್ಲಿ ಮುಳಗುಂದ-೧೨ ಎಂಬ ಚಿಕ್ಕ ಆಡಳಿತ ಪ್ರಾಂತವಾಗಿ ರೂಪಗೊಂಡಿತು. ಜಾತರಸನು ಈ ಪ್ರದೇಶವನ್ನು ಆಳುತ್ತಿದ್ದರಿಂದ *ಮುಳಗುಂದ ಸಿಂದ* ಎಂಬ ಬಿರುದು ಬಂದಿರಬೇಕು. ಈ ಶಾಸನದಲ್ಲಿ ಜಾತರಸನು ಮಹಾಸಾಮಂತ ಎಂದು ಕರೆಯಲ್ಪಟ್ಟಿದ್ದರಿಂದ ಮತ್ತು ಪಂಚಮಹಾಶಬ್ದಗಳ ಗೌರವವನ್ನು ಪಡೆದಿದ್ದರಿಂದ ರಾಜಕೀಯವಾಗಿ ಪ್ರಭಾವಶಾಲಿಯಾಗಿದ್ದನೆಂದು ಊಹಿಸಬಹುದು. ಬಿ.ಆರ್. ಗೋಪಾಲ ಮಾತ್ರ ಇವನು ಬೆಳಗುತ್ತಿ ಮನೆತನಕ್ಕೆ ಸೇರಿದವನೆಂಬುದನ್ನು ಹೇಳುವುದಕ್ಕೆ ಯಾವ ಆಧಾರಗಳಿಲ್ಲ ಎಂದು ಹೇಳುತ್ತಾರೆ.[೧೧]

ಆದರೆ ಸಿಂದ ಎಂಬ ಹೆಸರು ನೋಡಿದರೆ ಅವನು ಬೆಳಗುತ್ತಿ ಅಲ್ಲದಿದ್ದರೂ ಯಾವುದೋ ಒಂದು ಸಿಂದ ವಂಶಕ್ಕೆ ಸೇರಿದವನೆಂದು ಸ್ಪಷ್ಟವಾಗಿ ಸೂಚಿತವಾಗುತ್ತದೆ.

ಗದಗ ಜಿಲ್ಲೆ ಹೊಸೂರಿನಲ್ಲಿ ದೊರೆತ ಒಂದು ಶಾಸನದ ಕಾಲ ಕ್ರಿ.ಶ. ೯೯೪[೧೨]. ಅದು ಸ್ಪಷ್ಟವಾಗಿ ಸಿಂದ ವಂಶದ ಸಾಮಂತನಾದ ಕೊರಲಗುಂದ ಎಂಬವನು ಮುಳಗುಂದ-೧೨ ರ ಮನ್ನೆಯನೆಂದು ವರ್ಣಿಸುತ್ತದೆ. ಈ ಶಾಸನವು ಇವನನ್ನು *'ಸಿಂದಕುಲೋದ್ಭವ, ಪನ್ನಗಧ್ವಜ, ವ್ಯಾಘ್ರಲಾಂಛನ, 'ಮುಳಗುಂದವಿದ್ಯಾಧರ'* ಎಂಬ ಬಿರುದುಗಳಿಂದ ವರ್ಣಿಸಿದೆ. ಭೌಗೋಳಿಕ ಸಾಮಿಪ್ಯದಿಂದಾಗಿ ಇವನು ಬೆಳಗುತ್ತಿ ಮನೆತನಕ್ಕೆ ಸೇರಿದ್ದವನಾಗಿರಬಹುದೆಂದು ಊಹಿಸಲಾಗಿದೆ. ಒಂದು ಶಾಸನದಲ್ಲಿ ಇವನು ಹೊಸವೂರಿನ ಅಂದರೆ ಹೊಸೂರಿನ *'ನಾಳ್ಗಾವುಂಡ'* ಎಂದು ಕರೆಯಲ್ಪಟ್ಟಿದ್ದಾನೆ. ಹೊಸವೂರಿನ ಕ್ರಿ.ಶ. ೧೦೨೨ರ ಇನ್ನೊಂದು ಶಾಸನದಲ್ಲಿ[೧೩] ಈ ಕೊರಲಗುಂದನ ಮಗನಾದ ಸಿಂದರಸ ಎಂಬವನ ಹೆಸರಿದ್ದು ಅವನಿಗೂ ಇವೇ ಬಿರುದುಗಳು ಇವೆ. ಅವನೂ ಮುಳಗುಂದ ವಿದ್ಯಾಧರ ಎಂದು ಕರೆಯಲ್ಪಟ್ಟಿದ್ದಾನೆ. ಹೀಗಾಗಿ, ಸ್ಪಷ್ಟವಾಗಿ ಸಿಂದ ಮನೆತನಕ್ಕೆ ಸೇರಿದ ಸಾಮಂತನು ಎಂದು ಹೇಳಲು ಆಧಾರಗಳಿವೆ. ಬಹುಶಃ ಸಿಂದ ಮನೆತನದ ನಿಜವಾದ ಇತಿಹಾಸ ಇವನಿಂದಲೇ ಆರಂಭವಾಗುವುದು ಎಂದು ಹೇಳಬಹುದು. ಆದರೂ ಇವರನ್ನು ಬೆಳಗುತ್ತಿ ಮನೆತನಕ್ಕೆ ಸೇರಿಸಲು ಸ್ಪಷ್ಟ ಆಧಾರಗಳಿಲ್ಲ.



ಈ ಶಾಸನವು ಆಹವಮಲ್ಲದೇವನ ಅಂದರೆ ೨ನೆಯ ತೈಲಪನ ಆಳಿಕೆಗೆ ಸೇರಿದ್ದು, ಇದರ ಕಾಲ ಕ್ರಿ.ಶ. ೯೯೫. ಈ ಕಾಲಕ್ಕೆ ಅರಸನ ಮಾಂಡಲೀಕನಾದ ಶೋಭನರಸನೆಂಬುವನು ಎರಡರನೂರು ಪ್ರಾಂತಗಳನ್ನು ಆಳುತ್ತಿದ್ದನು. ಸಿಂದ ಕೊರಲಗುಂದನು ಇವನ ಕೈಕೆಳಗಿನ ಅಧಿಕಾರಿಯಾಗಿದ್ದನು. ಹೊಸೂರಿನ ಇನ್ನೊಂದು ಶಾಸನವು ಕ್ರಿ.ಶ. ೧೦೨೯ ಕ್ಕೆ ಸೇರಿದ್ದು ತೈಲನ ನಂತರ ಬಂದ ೧ನೆಯ ಜಗದೇಕಮಲ್ಲನ ಆಳಿಕೆಗೆ ಸೇರಿದೆ. ಇದರಲ್ಲಿ ಮಾಂಡಲಿಕನಾದ ವಾವಣರಸನು ಎರಡರನೂರು ಪ್ರಾಂತವನ್ನು ಆಳುತ್ತಿದ್ದನೆಂದು ಹೇಳಿದೆ. ವಾವಣರಸನ ಹೆಂಡತಿ ರೇವಕಬ್ಬರಸಿ ಹೊಸವೂರು ಅಂದರೆ ಹೊಸೂರನ್ನು ಆಳುತ್ತಿದ್ದಳು.[೧೪]

ದೇಸಾಯಿ ದಿನಕರ ಅವರು ಜಾತರಸನ ನಂತರ ಕಯವೀರರಸ ಎಂಬುವನು ಬೆಳಗುತ್ತಿ ಸಿಂದ ವಂಶದ ಸಾಮಂತನೆಂದು ಹೇಳುತ್ತಾರೆ.[೧೫] ಇದು ಶಿಕಾರಿಪುರ ತಾಲೂಕಿನಲ್ಲಿಯ ಒಂದು ವೀರಗಲ್ಲಿನಲ್ಲಿ ಉಕ್ತವಾಗಿದೆ.[೧೬] ಇದರ ಕಾಲ ಕ್ರಿ.ಶ. ೧೦೬೧. ಇವನ ಆಳಿಕೆಯು ಬೆಳಗುತ್ತಿ ಸಿಂದರ ಇತಿಹಾಸದಲ್ಲಿ ಮಹತ್ವದ ಸ್ಥಾನ ಪಡೆದಿತ್ತೆಂದು ಹೇಳುತ್ತಾರೆ. ಇವನ ಕಾಲದಿಂದಲೇ ಇವರು 'ಮಹಾಮಂಡಳೇಶ್ವರ' ಪದವಿಗೆ ಏರಿದರೆಂದು ತರ್ಕಿಸುತ್ತಾರೆ. ಆದರೆ ಪ್ರಸ್ತುತ ಶಾಸನದಲ್ಲಿ

ಕಯವೀರರಸ ಸಿಂದ ಮನೆತನಕ್ಕೆ ಸೇರಿದವನೆಂದು ಹೇಳಲು ಯಾವ ಆಧಾರವೂ ಇಲ್ಲ. ಶಾಸನದಲ್ಲಿ ಎಲ್ಲಿಯೂ ಸಿಂದ ಎಂಬ ಪದವೇ ಕಾಣುವುದಿಲ್ಲ. ಇವನು ಸಿಂದ ವಂಶಕ್ಕೆ ಸೇರಿದವನೇ ಅಲ್ಲ.[೧೭] ಈ ಶಾಸನವು ಬೆಳಗುತ್ತಿ ಸಮೀಪ ಅಂದರೆ ಶಿಕಾರಿಪುರ ತಾಲೂಕಿನ ಮುತ್ತಿಗೆಯಲ್ಲಿ ದೊರೆತ್ತಿದುದ್ದರಿಂದ ಇವನು ಬೆಳಗುತ್ತಿಯ ಸಿಂದನೆಂದು ದೇಸಾಯಿ ದಿನಕರ ತರ್ಕಿಸಿದ್ದಾರೆ. ಇವನು ಚಾಲುಕ್ಯ ೧ನೆಯ ಸೋಮೇಶ್ವರನ ಅಧೀನ ಮಾಂಡಲೀಕನಾಗಿದ್ದನೆಂದೂ ಸಹ ಊಹಿಸುತ್ತಾರೆ. ಈ ಯಾವ ತರ್ಕಗಳಿಗೂ ಆಧಾರಗಳಿಲ್ಲ. ಆದ್ದರಿಂದ ಕಯವೀರರಸನು ಸಿಂದ ವಂಶಕ್ಕೆ ಸೇರಿದವನೆಂದು ಹೇಳಲು ಯಾವ ಸಾಕ್ಷ್ಯಾಧಾರಗಳಿಲ್ಲ ಎಂಬ ಬಿ.ಆರ್. ಗೋಪಾಲ ಅವರ ನಿರ್ಣಯವೇ ಸರಿಯೆಂದು ಹೇಳಬಹುದು.

ಇನ್ನು ಮುಂದೆ ಶಾಸನಗಳಲ್ಲಿ ದೊರೆತಿರುವ ಬೆಳಗುತ್ತಿ ಸಿಂದರ ವಂಶಾವಳಿಯನ್ನು ಪರೀಕ್ಷಿಸೋಣ. ಮೇಲೆ ನಿಡುದೋಳ ಸಿಂದನನ್ನು ಕುರಿತು ಪರೀಕ್ಷಿಸುವಾಗ ಹರಿಹರದ ಶಾಸನವನ್ನು ಉಲ್ಲೇಖಿಸಿದೆ. ಕಳಚುರಿ ೨ನೇ ಬಿಜ್ಜಳನ ಕಾಲಕ್ಕೆ ಸೇರಿದ ಈ ಶಾಸನದಲ್ಲಿ[೧೮] ಈ ಮನೆತನದ ವಿವರವಾದ ವಂಶಾವಳಿ ಕೊಡಲ್ಪಟ್ಟಿದೆ. ಇದರ ಕಾಲ ೧೧೩೮ ಈ ವಂಶಾವಳಿ ಹೀಗಿದೆ ;

ಶಿವ ಸಿಂಧು ಇವರಿಂದ ಹುಟ್ಟಿದ ನಿಡುದೋಳ ಸಿಂದ ಮತ್ತು ಅವನ ನಂತರ ಆಳಿದ ಅನೇಕರು ಐತಿಹಾಸಿಕ ವ್ಯಕ್ತಿಗಳಲ್ಲವೆಂದು ಆಗಲೇ ನಿರ್ಧರಿಸಿದ್ದೇವೆ. ಅವರ ನಂತರ ಬರುವ ಐತಿಹಾಸಿಕ ಹೆಸರು ಅಂದರೆ ಪಿರಿಯಚಟ್ಟರಸ ಹಾಗೂ ಮುಂದಿನ ಹೆಸರುಗಳು ಹೀಗಿವೆ:

**ಪಿರಿಯ ಚಟ್ಟರಸ = ದೋರಬ್ಬರಸಿ**
|
**ಜೋಗರಸ**
|
**ಚಟ್ಟರಸ (೨ನೇ ಚಟ್ಟರಸ)**
|
**ಮಾಚರಸ = ಚಟ್ಟಲದೇವಿ** — **ಮಲ್ಲರಸ** — **ಅಯ್ಯರಸ**

**ಅಯ್ಯರಸ**
|
**ರಾಯರಸ = ಬೂಚಲದೇವಿ**
|
**ಈಶ್ವರದೇವ**

ಕಳಚುರಿ ಸಂಕಮನ ಬೆಳಗುತ್ತಿ ಶಾಸನದಲ್ಲಿ ಇದೇ ವಂಶಾವಳಿಯಿದ್ದು[೧೯] ಅಲ್ಲಿಗೆ ಶಾಸನವು ಒಡೆದಿದ್ದರಿಂದ ಮಾಚರಸನ ಒಬ್ಬನೇ ತಮ್ಮನ ಹೆಸರು ಇದೆ. ಇನ್ನೊಬ್ಬನು ಅಂದರೆ

ಅಯ್ಯರಸ. ಆದರೂ ಈ ಶಾಸನದ ಪಾಠವು ಮೇಲಿನದರಂತೆಯೇ ಇದ್ದುದರಿಂದ ಅವರ ಹೆಸರುಗಳು ಇವೇ ಎಂದು ಊಹಿಸಬಹುದು. ಇಲ್ಲಿ ಬರುವ ಹೆಚ್ಚಿನ ವಿಷಯ ಅಂದರೆ ಈಶ್ವರದೇವನಿಗೂ ಮೂವರು ಮಕ್ಕಳಿದ್ದರು ಎಂಬುದು ಅವರೆಂದರೆ ಪಾಂಡ್ಯದೇವ, ಮಲ್ಲಿದೇವ ಮತ್ತು ವಿಜಯ.

ವಿಶದವಾದ ವಂಶಾವಳಿಯನ್ನು ಕೊಡುವ ಶಾಸನಗಳು ಇವೆರಡೇ. ಆದರೂ ಇನ್ನೂ ಕೆಲವು ಶಾಸನಗಳಲ್ಲಿ ಕೆಲ ಹೆಚ್ಚಿನ ಮಾಹಿತಿಗಳು ದೊರೆಯುತ್ತವೆ. ಅವುಗಳನ್ನು ಇಲ್ಲಿ ಪರಿಶೀಲಿಸಬಹುದು. ಹೊನ್ನಾಳಿ ತಾಲೂಕಿನ ಬೆಳಗುತ್ತಿಯ ಒಂದು ಶಾಸನದಲ್ಲಿ[೨೦] ಈಶ್ವರದೇವ ಎಂಬ ಹೆಸರಿದ್ದು, ಅವನಿಗೆ ಮಲ್ಲಿದೇವ ಎಂಬ ಮಗನಿದ್ದನೆಂದು ಮತ್ತು ಮಲ್ಲಿದೇವನಿಗೆ ಈಶ್ವರದೇವನೆಂಬ ಮಗನಿದ್ದನೆಂದು ಹೇಳಿದೆ. ಈ ೨ನೇ ಈಶ್ವರದೇವನಿಗೆ ಅಲ್ಲಮರಸನೆಂಬ ಮಾವನಿದ್ದನೆಂದು ಹೇಳಿದೆ. ಶಾಸನದ ಕಾಲವು ಕ್ರಿ.ಶ. ೧೧೭೫.

ಹಾವೇರಿ ಜಿಲ್ಲೆಯ ಹಿರೇಕಬ್ಬಾರ ಎಂಬಲ್ಲಿ ಕಳಚೂರಿ ೨ನೇ ಬಿಜ್ಜಳನ ಶಾಸನವೊಂದಿದ್ದು[೨೧] ಅದು ಸಿಂದರ ಬಗ್ಗೆ ಮಾಹಿತಿಯನ್ನು ಕೊಡುತ್ತದೆ. ಶಾಸನವು ಅಲ್ಲಲ್ಲಿ ಒಡೆದು ಹೋಗಿದ್ದರೂ ಈ ಮಾಹಿತಿಯನ್ನು ಸ್ಥೂಲವಾಗಿ ಹೀಗೆ ಸಂಗ್ರಹಿಸಬಹುದು. ಈಶ್ವರದೇವನು ಸಿಂದ ವಂಶದ ಎಲ್ಲ ಬಿರುದುಗಳನ್ನು ಹೊಂದಿದ್ದನು. ಇವನಿಗೆ ಲಕುಮಿ ಎಂಬ ಹೆಂಡತಿ ಇದ್ದಳು. (ಬಹುಶಃ ಆಕೆಗೆ ಬಾಚಲದೇವಿ ಎಂಬ ಇನ್ನೊಂದು ಹೆಸರಿದ್ದಿತೆಂಬ ಸೂಚನೆ ಈ ಶಾಸನದಲ್ಲಿದೆ). ಕಾದಂಬ ವಂಶದ ಒಬ್ಬ ಸಾಮಂತ (ಹೆಸರು ಒಡೆದು ಹೋಗಿದೆ) ಮತ್ತು ಅವನ ಹೆಂಡತಿ ಬೊಪ್ಪದೇವಿ, ಇವರು ಲಕುಮಿಯ ತಾಯಿ ತಂದೆಯರು. ಇವರಿಗೆ ಮಾಚಿದೇವ ಮತ್ತು ಮಲ್ಲಿದೇವ ಎಂಬ ಮಕ್ಕಳಿದ್ದರು.

ಮೇಲಿನ ವಂಶಾವಳಿಯಲ್ಲಿ ತೋರಿಸಿದ ಚಟ್ಟರಸನ ನಂತರ ಬಂದ ಮಾಚರಸ ಮತ್ತು ಮಲ್ಲಿದೇವರಸ ಇವರೂ ಮತ್ತು ಬೆಳಗುತ್ತಿ ಶಾಸನದಿಂದ ಬಂದ ಈಶ್ವರದೇವನ ಮಕ್ಕಳು ಮಾಚರಸ ಮತ್ತು ಮಲ್ಲರಸ ಇವರೂ ಒಂದೇ ಎಂದಾದರೆ ಚಟ್ಟರಸ ಮತ್ತು ಮಾಚರಸರ ನಡುವೆ ಈಶ್ವರದೇವನನ್ನು ಸೇರಿಸಬೇಕಾಗುತ್ತದೆ. ಮಾಚರಸನು, ಚಟ್ಟರಸನ ಮಗನಲ್ಲ ಎಂಬುದು "ತದನಂತರ" ಎಂಬ ಶಬ್ದದಿಂದ ಸ್ಪಷ್ಟವಾಗುತ್ತದೆ. ಈ "ತದನಂತರ" ಕಾಲದಲ್ಲಿ ಈಶ್ವರದೇವನು ಇದ್ದಿರಬೇಕು. ಕಣ್ಣತಪ್ಪಿನಿಂದಾಗಿ ಅಥವಾ ಇನ್ನಾವುದೋ ಕಾರಣದಿಂದ ವಂಶಾವಳಿಯಲ್ಲಿ ಈ ಹೆಸರು ಬಂದಿರಲಿಕ್ಕಿಲ್ಲ. ಈ ಈಶ್ವರದೇವನು ಪಟ್ಟಕ್ಕೆ ಬಾರದೇ ಇದ್ದುದರಿಂದ ವಂಶಾವಳಿಯಲ್ಲಿ ಅವನ ಹೆಸರು ಬಿಟ್ಟಿರಬಹುದೆಂಬ ಬಿ.ಆರ್. ಗೋಪಾಲ್ ಅವರ ಅಭಿಪ್ರಾಯ ಸರಿಯಲ್ಲ

ಅನಿಸುತ್ತದೆ.[೨೨] ಈ ಈಶ್ವರದೇವನು ಅಷ್ಟೊಂದು ಪ್ರಭಾವಶಾಲಿಯಾಗದಿದ್ದುದರಿಂದ ವಂಶಾವಳಿಯಲ್ಲಿ ಅವನ ಹೆಸರನ್ನು ಬಿಟ್ಟಿರಬಹುದೆಂಬ ದೇಸಾಯಿ ದಿನಕರರ ಅಭಿಪ್ರಾಯ ಬರೆ ಊಹೆ ಅಷ್ಟೆ.[೨೩] ಮೇಲೆ ಉಲ್ಲೇಖಿಸಿದ ೨ನೇ ಈಶ್ವರದೇವನ ಕಾಲ ಕ್ರಿ.ಶ. ೧೧೭೫. ಇದರಿಂದ ತಲೆಮಾರಿನ ಲೆಕ್ಕ ಹಾಕಿದರೂ ಪಿರಿಯಚಟ್ಟರಸನ ಕಾಲವು ಸುಮಾರು ೧೧ನೇ ಶತಮಾನದ ಆದಿಭಾಗವೆಂದು ಸೂಚಿತವಾಗುತ್ತದೆ. ಇಲ್ಲಿ ಚರ್ಚಿಸಿದ ಎಲ್ಲ ವಿಷಯಗಳನ್ನು ಒಟ್ಟುಗೂಡಿಸಿ ಬೆಳಗುತ್ತಿಯ ಸಿಂದ ಮನೆತನದ ವಂಶಾವಳಿಯನ್ನು ಈ ರೀತಿಯಾಗಿ ತೋರಿಸಬಹುದು.




ಸದ್ಯಕ್ಕೆ ದೊರೆತಿರುವ ಆಧಾರದ ಮೇಲೆ ಬೆಳಗುತ್ತಿ ಸಿಂದ ಸಾಮಂತರ ಆಳಿಕೆಯ ಕಾಲಾನುಕ್ರಮವನ್ನು ಖಚಿತವಾಗಿ ನಿರ್ಧರಿಸುವುದು ತೀರ ಕಠಿಣ. ಅನೇಕ ಶಾಸನಗಳಲ್ಲಿ ಕಾಲವು ಸರಿಯಾಗಿ ನಮೂದಿಸಲ್ಪಟ್ಟಿಲ್ಲ. ಇನ್ನು ಕೆಲವುದರಲ್ಲಿ ಕಲ್ಲು ಒಡೆದು ಹೋಗಿದ್ದು ಪೂರ್ಣ ವಿವರಗಳು ಸಿಗುವುದಿಲ್ಲ. ಅಲ್ಲದೇ ಇನ್ನೂ ಹಲವಾರು ತೊಡುಕುಗಳು ಇವೆ. ಆದ್ದರಿಂದ ಯಾವ

ಕಾಲಾನುಕ್ರಮವನ್ನು ಸೂಚಿಸಿದರೂ ಅದು ಖಚಿತವಾಗಿ ಇರಲಾರದು. ಮೇಲೆ ಸೂಚಿಸಿದ ತೇದಿಗಳು ಸ್ಥೂಲವಾದವುಗಳು ಎಂದು ಹೇಳುವುದು ಅನಿವಾರ್ಯವಾಗಿದೆ.

ರಾಜಕೀಯ ಚರಿತ್ರೆ

ಈ ವಂಶದ ರಾಜಕೀಯ ಚರಿತ್ರೆಯನ್ನು ಪುನರ್‌ರಚಿಸುವಾಗ ಗಮನಿಸಬೇಕಾದ ಒಂದು ಅಂಶವೆಂದರೆ, ಆರಂಭದಲ್ಲಿ ಇವರು ಅಷ್ಟೇನೂ ಪ್ರಬುದ್ಧರಾಗಿರಲಿಲ್ಲ. ಆಳರಸರ ಹೆಚ್ಚು ಪ್ರಬಲವಾದ ಮಾಂಡಲಿಕರಿಗೆ ಅಧೀನರಾಗಿ ಅಧಿಕಾರದಲ್ಲಿದ್ದರು. ಹೀಗಾಗಿ ಅವರ ಕಾರ್ಯಚಟುವಟಿಕೆಗಳ ಬಗ್ಗೆ ಮಹತ್ವ ಎನ್ನಬಹುದಾದ ಮಾಹಿತಿ ದೊರೆಯುವುದಿಲ್ಲ. ಮುಂದೆ ಬರಬರುತ್ತ ಅವರ ಅಧಿಕಾರ ವ್ಯಾಪ್ತಿ ವಿಸ್ತಾರವಾಗುತ್ತ ಬಂದು, ಚಾಲುಕ್ಯ ಅರಸರ ನೇರ ಸಾಮಂತರೆನಿಸಿಕೊಂಡರು. ಆಗಲೂ ಕೂಡ ಅವರ ಅಧೀನವಾದ ಆಡಳಿತ ಪ್ರದೇಶಗಳ ವಿವರಗಳು ದೊರೆಯುತ್ತವೆ ಹೊರತು ಆಳರಸರೊಡನೆ ಸಂಬಂಧ, ಯುದ್ಧ ಇತ್ಯಾದಿಗಳಲ್ಲಿ ಭಾಗವಹಿಸಿದುದರ ಬಗ್ಗೆ ಹೆಚ್ಚಿನ ಮಾಹಿತಿ ದೊರೆಯುವುದಿಲ್ಲ.

ಪಿರಿಯಚಟ್ಟರಸ ಅಥವಾ ೧ನೇ ಚಟ್ಟರಸನೇ ಈ ಮನೆತನದ ಮೊದಲ ಪ್ರಮುಖ ವ್ಯಕ್ತಿ ಎಂದು ನಾವು ಈಗಾಗಲೇ ನೋಡಿದ್ದೇವೆ. ಈ ಮನೆತನಕ್ಕೆ ನೇರವಾಗಿ ಸೇರಿದ ಇವರ ಹಿಂದಿನವರ ಬಗ್ಗೆ ಯಾವ ಮಾಹಿತಿಯೂ ಇಲ್ಲ. ದೇಸಾಯಿ ದಿನಕರ ಹೆಸರಿಸುವ ನನ್ನಿಯ ಸಿಂದ, ಜಾತರಸ ಮತ್ತು ಕಯವೀರರಸ ಇವರು ನೇರವಾಗಿ ಮನೆತನಕ್ಕೆ ಸಂಬಂಧಿಸಿದವರಿರಲಿಕ್ಕಿಲ್ಲ ಎಂಬ ನಮ್ಮ ಅಭಿಪ್ರಾಯವನ್ನು ಈಗಾಗಲೇ ನಮೂದಿಸಿದ್ದೇವೆ.

ನಾವು ಈಗಾಗಲೇ ಸೂಚಿಸಿದಂತೆ ೧ನೇ ಚಟ್ಟರಸನು ಸುಮಾರು ೧೧ನೇ ಶತಮಾನದ ಆರಂಭದ ಅವಧಿಯಲ್ಲಿ ಇದ್ದಿರಬಹುದೆಂದು ಊಹಿಸಿದ್ದೇವೆ. ಯಾವುದೇ ಆಧಾರಗಳಿಲ್ಲದಾಗ ಖಚಿತವಾಗಿ ಕಾಲವನ್ನು ನಿರ್ದೇಶಿಸಲು ಸಾಧ್ಯವಿಲ್ಲದಾದರೂ ಬಹುಶಃ ಕ್ರಿ.ಶ. ೧೦೨೦ ಸುಮಾರಿಗೆ ಅವನ ಆಡಳಿತ ಆರಂಭವಾಗಿರಬೇಕು ಎಂದು ನಮ್ಮ ಊಹೆ. ಆಗ ಕಲ್ಯಾಣ ಚಾಲುಕ್ಯರ ರಾಜ್ಯವು ಪ್ರವರ್ಧಮಾನವಾಗುತ್ತಲಿದ್ದು ಜಗದೇಕಮಲ್ಲ ೨ನೇ ಜಯಸಿಂಹನು ಆಳುತ್ತಿದ್ದನು. ಬೆಳಗುತ್ತಿಯ ಮುಂದಿನ ಸಾಮಂತರ ಶಾಸನಗಳ ಆಧಾರದ ಮೇಲಿಂದ ಹೇಳುವುದಾದರೆ ೧ನೇ ಚಟ್ಟರಸನು ೨ನೇ ಜಯಸಿಂಹನ ನೇರವಾದ ಸಾಮಂತನಿದ್ದಿರಲಿಕ್ಕಿಲ್ಲ ಎನ್ನಬಹುದು. ಬಹುಶಃ ಆಗ ಚಾಲುಕ್ಯ ಮಾಂಡಲಿಕರಾಗಿದ್ದ ನೊಳಂಬಪಲ್ಲವರ ಅಧೀನರಾಗಿ ಕಾರ್ಯನಿರ್ವಹಿಸುತ್ತಿದ್ದನೆನ್ನಬಹುದು. ಹೀಗೆಂದು ಹರಿಹರ ಶಾಸನದಲ್ಲಿಯ[೨೪] "ಆ ಪಾಂಡ್ಯ ಮಂಡಳಾಧೀಶ್ವರಂ ನೊಳಂಬವಾಡಿ ಮುವತ್ತಿರ್ಚ್ಛಾಸಿರಮುಮಂ ಸ್ವಧರ್ಮದಿಂ ಪ್ರತಿಪಾಳಿಸುತ್ತಮಿರೆ ತದನುಜ ವರ್ತಿಎನಿಪ

ಸಿಂದಾನ್ವಯದವತಾರವೆಂತೆಂದಡೆ" ಎಂಬ ಹೇಳಿಕೆಯಿಂದ ಇದು ವ್ಯಕ್ತವಾಗುತ್ತದೆ. ಬಹುಶಃ ನೊಳಂಬ ಪಲ್ಲವರ ಅಧೀನರೆಂದೆ ಇವರ ರಾಜಕೀಯ ಚಟುವಟಿಕೆಗಳು ಆರಂಭವಾಗಿರಬೇಕು. ಇದೇ ಶಾಸನವು ೧ನೇ ಚಟ್ಟರಸನನ್ನು ಅತಿ ಪರಾಕ್ರಮಿ ಎಂದೂ, ಅನೇಕ ವೈರಿ ರಾಜ್ಯಗಳನ್ನು ವಶಪಡಿಸಿಕೊಂಡನು ಎಂದೂ ಬಣ್ಣಿಸುತ್ತದೆ. ಇವುಗಳ ಆಧಾರದ ಮೇಲೆಯೇ ದೇಸಾಯಿ ದಿನಕರ ಅವರು ಇಂಥ ಬಣ್ಣನೆಗಳು ಅತೀಶಯೋಕ್ತಿಯಾಗಿರದೆ ಈ ಕಾಲದಲ್ಲಿ ನಡೆದ ಚೋಳ ಚಾಲುಕ್ಯರ ಸಂಘರ್ಷದಲ್ಲಿ ಭಾಗವಹಿಸಿದನೆಂದು ಹೇಳುತ್ತಾರೆ.[೨೫] ಆದರೆ ಇಂಥ ಯಾವ ಸೂಚನೆಯೂ ಇಲ್ಲ.

೧ನೇ ಚಟ್ಟರಸನ ಮಗ ಜೋಗರಸನು ನಂತರ ಬಂದ ಸಾಮಂತನು. ಹರಿಹರ ಶಾಸನದಲ್ಲಿ[೨೬] ಹಾಗು ಬೆಳಗುತ್ತಿ ಶಾಸನದಲ್ಲಿ[೨೭] ಇವನು ಚಟ್ಟರಸನ ಹೆಂಡತಿಯಾದ ದೋರಬ್ಬರಸಿಯ ಮಗನೆಂದು ಹೇಳಿದೆ. ಆದರೆ ಮಾದನಭಾವಿ ಶಾಸನದಲ್ಲಿ[೨೮] ಇವನು ಲೋಕಬ್ಬರಸಿಯ ಮಗನೆಂದು ಹೇಳಿದೆ. ಶಾಸನದ ಲೇಖಕನಿಗೆ ದೊರೆತ ತಪ್ಪು ಮಾಹಿತಿಯಿಂದಾಗಿ ಇಂಥ ಬದಲಾವಣೆಯಾಗಿರಬಹುದು. ಹಿರೇಕೆರೂರು ಜಿಲ್ಲೆಯ ಮೇದೂರಿನ ಒಂದು ಶಾಸನದಲ್ಲಿ ಕರಹಾಟಪುರವರಾಧೀಶ್ವರ, ಮಾಳಚಿದೇವಿಲಬ್ಧವರಪ್ರಸಾದ, ಸಿಂದಮಾರ್ತಂಡ ಎಂಬ ಬಿರುದುಗಳನ್ನು ಹೊಂದಿದ ಅಯ್ಯಣ ಜೋಗ ಎಂಬವನ ಹೆಸರಿದೆ. ಇವನು ಮತ್ತು ೧ನೇ ಚಟ್ಟರಸನ ಮಗ ಜೋಗರಸನು ಒಂದೇ ಎಂದು ಬಿ.ಆರ್. ಗೋಪಾಲ್ ಅಭಿಪ್ರಾಯಪಡುತ್ತಾರೆ.[೨೯] ಈ ಶಾಸನದ ಕಾಲವನ್ನು ನಿರ್ದೇಶಿಸುವ ಶಾಸನದ ಭಾಗ ಒಡೆದು ಹೋಗಿದೆ. ಆದರೆ ಮೆಕೆಂಝಿಯ ಹಸ್ತಪ್ರತಿಗಳ ಸಂಗ್ರಹದ ಆಧಾರದ ಮೇಲಿಂದ ಬಿ.ಆರ್. ಗೋಪಾಲ ಅವರು ಶಕ ೯೬೯ ಅಂದರೆ ಕ್ರಿ.ಶ. ೧೦೪೭ ಎಂದು ನಿರ್ಧರಿಸಿದ್ದಾರೆ.[೩೦] ಈ ಜೋಗರಸನು ಕ್ರಿ.ಶ. ೧೦೪೦ ರಿಂದ ತನ್ನ ಆಳಿಕೆಯನ್ನು ಆರಂಭಿಸಿದನು ಎಂದು ಹೇಳುತ್ತಾರೆ. ಹಿರೇಕೆರೂರು ತಾಲೂಕಿನ ಅಣಜಿ ಎಂಬಲ್ಲಿ ದೊರೆತ ಒಂದು ತುಂಡು ಶಾಸನದಲ್ಲಿ[೩೧] ಎಡವಟ್ಟೆ-೭೦, ನರಿಯಳಗೆ, ಎಳಂಬಾರು-೧೨, ಅತ್ತಿಗೆರೆ-೧೨ ಮುಂತಾದ ಪ್ರಾಂತಗಳನ್ನು ಆಳುತ್ತಿದ್ದ ಜೋಗರಸನ ಹೆಸರಿದೆ. ಶಾಸನವು ದೊರೆತ ಸ್ಥಳ ಮತ್ತು ಜೋಗರಸನು ಆಳುತ್ತಿದ್ದ ಪ್ರದೇಶಗಳ ಆಧಾರದ ಮೇಲೆ ಈ ಜೋಗರಸನು ೧ನೇ ಚಟ್ಟರಸನ ಮಗ ಜೋಗರಸನೇ ಆಗಿರಬೇಕೆಂಬ ಬಿ.ಆರ್. ಗೋಪಾಲ್ ಅವರ ಊಹೆಯು ಸರಿಯಾಗಿಯೇ ಇದೆ. ಈ ಶಾಸನದಲ್ಲಿ ಕಾಲದ ಉಲ್ಲೇಖವಿಲ್ಲ. ೧ನೇ ಚಟ್ಟರಸನು ಕ್ರಿ.ಶ. ೧೦೨೦ ರಲ್ಲಿ ಆಳಿಕೆಯನ್ನು ಆರಂಭಿಸಿರಬಹುದೆಂದು ಮೇಲೆ ಹೇಳಿದ್ದೇವೆ. ಬಿ. ಆರ್. ಗೋಪಾಲ ಅವರ ಹೇಳಿಕೆಯ ಆಧಾರದ ಮೇಲೆ ೧ನೇ ಚಟ್ಟರಸನ ಕಾಲವು ೧೦೨೦ ರಿಂದ ೧೦೪೫ ರವರೆಗೆ ಇದ್ದಿರಬಹುದೆಂದು ಹೇಳಬಹುದಾಗಿದೆ.

ಜೋಗರಸನ ಬಗ್ಗೆಯೂ ಯಾವ ಮಹತ್ವದ ಮಾಹಿತಿ ದೊರೆಯುವುದಿಲ್ಲ. ಅವನು ಮಾಸೂರು-೧೨, ಅರಕೇರಿ-೧೨ ಮತ್ತು ಇನ್ನೂ ಕೆಲವು ಪ್ರದೇಶಗಳನ್ನು ಆಳುತ್ತಿದ್ದನೆಂದು ಹೇಳಿದೆ. ಮಾಸೂರು ಇಂದಿನ ಹಿರೇಕೆರೂರು ತಾಲೂಕಿನ ಮದಗಮಾಸೂರು ಮತ್ತು ಅರಕೇರಿಯು ಇದೇ ತಾಲೂಕಿನ ಅರಕೇರಿ ಎಂಬ ಗ್ರಾಮ. ಜೋಗರಸನು ಚಿಕ್ಕವನಿದ್ದಾಗಲೇ ಅಧಿಕಾರಕ್ಕೆ ಬಂದನೆಂದೂ ತರುಣ ವಯಸ್ಸಿನಲ್ಲಿಯೇ ನಿಧನ ಹೊಂದಿದನೆಂದೂ ಹೇಳುವ ದೇಸಾಯಿ ದಿನಕರ ಅವರ ಈ ಊಹೆಗಳಿಗೆ ಯಾವ ಆಧಾರಗಳಿಲ್ಲ.

ಜೋಗರಸನ ಮಗ ಚಟ್ಟರಸ. ಹರಿಹರ ಶಾಸನದಲ್ಲಿ[೩೨] ಬರುವ ಅವನ ವರ್ಣನೆಯನ್ನು ನೋಡಿದರೆ ಅವನು ಪ್ರವರ್ಧಮಾನವಾಗತೊಡಗಿದ್ದನೆಂದು ಭಾಸವಾಗುತ್ತದೆ. ಈ ಶಾಸನವು ಸಾಂಪ್ರದಾಯಿಕ ರೀತಿಯಲ್ಲಿ ಅವನ ಶೌರ್ಯವನ್ನು, ಹಿರಿಮೆಯನ್ನು ಬಣ್ಣಿಸುತ್ತದೆ. ಇಲ್ಲಿ ಯಾವ ಐತಿಹಾಸಿಕ ಘಟನೆಯೂ ಉಕ್ತವಾಗಿಲ್ಲ. ಕ್ರಿ.ಶ. ೧೧೧೭ ರ ಗೊಗ್ಗ ಗ್ರಾಮದ ಶಾಸನದಲ್ಲಿ[೩೩] ಕರಹಾಟಪುರವರಾಧೀಶ್ವರ ಮಾಳಚಿದೇವಿಲಬ್ಧವರಪ್ರಸಾದ, ಸಿಂದಮಾರ್ತಂಡ ಎಂಬ ಬಿರುದುಗಳುಳ್ಳ "ಮಹಾಮಾಂಡಳಿಕ" ಚಟ್ಟರಸನು ಚಾಲುಕ್ಯ ೬ನೇ ವಿಕ್ರಮಾದಿತ್ಯನ ಕಾಲದಲ್ಲಿ ಬನವಾಸಿ-೧೨೦೦೦ ಪ್ರಾಂತದ ಮಾಂಡಲಿಕನಾದ, ದಂಡನಾಯಕ ಗೋವಿಂದರಸನ ಅಧೀನನಾಗಿ ಎಡವಟ್ಟೆ-೭೦ ಪ್ರಾಂತವನ್ನು ಆಳುತ್ತಿದ್ದನೆಂದು ಹೇಳಿದೆ. ಈ ಚಟ್ಟರಸನು ನಾವು ತಿಳಿಸಿರುವ ವಂಶಾವಳಿಯ ೨ನೇ ಚಟ್ಟರಸನಾಗಿರುವ ಸಾಧ್ಯತೆಯಿದೆ. ಅವನು ಕ್ರಿ.ಶ. ೧೧೧೭ ರಲ್ಲಿ ಅಧಿಕಾರದಲ್ಲಿದ್ದನೆಂದು ಶಾಸನದಿಂದ ತಿಳಿದುಬರುವುದರಿಂದ ಜೋಗರಸನ ಕಾಲವನ್ನು ಕ್ರಿ.ಶ. ೧೦೪೫ ರಿಂದ ೧೦೭೦ ರವರೆಗೆ ಎಂದು ಪರಿಗಣಿಸಬಹುದು. ಆಗ ಚಟ್ಟರಸನ ಕಾಲವು ೧೦೭೦ ರಿಂದ ಆರಂಭವಾಗುತ್ತದೆ. ಮೇಲಿನ ವಂಶಾವಳಿಯಲ್ಲಿ ತೋರಿಸಿದ ಚಟ್ಟರಸನ ಮೊಮ್ಮಗನಾದ, ಅಂದರೆ ೧ನೇ ಈಶ್ವರದೇವನ ಮಗನಾದ ಮಾಚರಸನ ಒಂದು ಶಾಸನವು ಹಿರೇಕೆರೂರು ತಾಲೂಕಿನ ನಾಗವಂದ ಎಂಬಲ್ಲಿ ದೊರೆತಿದ್ದು ಅವನು ಚಾಲುಕ್ಯ ೩ನೇ ಸೋಮೇಶ್ವರನ ಆಳಿಕೆಯಲ್ಲಿ ಎಡವಟ್ಟೆ-೭೦ ಪ್ರಾಂತದಲ್ಲಿ ಆಳುತ್ತಿದ್ದನೆಂದು ಹೇಳಿದೆ. ಶಾಸನದ ಕಾಲ ಕ್ರಿ.ಶ. ೧೧೨೮[೩೪]. ಅಂದರೆ ಮಾಚರಸನು ಸುಮಾರು ಕ್ರಿ.ಶ. ೧೧೨೦ ರಲ್ಲಿ ಆಳಲು ಆರಂಭಿಸಿದ ಎಂದು ಗ್ರಹಿಸಿದರೆ, ೨ನೇ ಚಟ್ಟರಸನ ಹಾಗೂ ಅವನ ಮಗ ಈಶ್ವರದೇವನ ಕಾಲಗಳನ್ನು ಕ್ರಿ.ಶ. ೧೦೭೦ ಮತ್ತು ಕ್ರಿ.ಶ. ೧೧೨೦ ರ ನಡುವೆ ಹೊಂದಿಸಬೇಕಾಗುತ್ತದೆ. ಆಗ ಕ್ರಿ.ಶ. ೧೦೭೦ ರಿಂದ ೧೧೦೦, ೨ನೇ ಚಟ್ಟರಸನ ಕಾಲವೆಂದು ಮತ್ತು ಅವನ ಮಗ ೧ನೇ ಈಶ್ವರದೇವನ ಕಾಲವು ಕ್ರಿ.ಶ. ೧೧೦೦ ರಿಂದ ೧೧೨೦ ಎಂದು ಗ್ರಹಿಸಬಹುದು.

ಮೇದೂರಿನಲ್ಲಿ ಕ್ರಿ.ಶ. ೧೧೧೧ ರ ಒಂದು ಶಾಸನ ದೊರೆತಿದ್ದು[೩೫] ಅದರಲ್ಲಿ ಸಿಂದ ಮನೆತನದ ಸಾಮಂತನೊಬ್ಬನು ಮೇಲೆ ಹೆಸರಿಸಲಾದ ಗೋವಿಂದರಸನ ಅಧೀನನಾಗಿ ಎಡೆವಟ್ಟೆ-೭೦, ಅರಕೇರೆ-೧೨ ಪ್ರಾಂತಗಳನ್ನು ಆಳುತ್ತಿದ್ದನೆಂದು ಹೇಳಿದೆ. ಇಲ್ಲಿ ಸಾಮಂತನ ಹೆಸರು ಒಡೆದು ಹೋಗಿದ್ದರೂ, ಅವನು ಆಳುತ್ತಿದ್ದ ಪ್ರಾಂತಗಳು ಮತ್ತು ಗೋವಿಂದರಸನ ಉಲ್ಲೇಖವಿದ್ದ ಆಧಾರದ ಮೇಲಿಂದ ಇವನು ೨ನೇ ಚಟ್ಟರಸನೇ ಎಂಬುದರಲ್ಲಿ ಸಂದೇಹವಿಲ್ಲ. ಇವನು ಆಳುತ್ತಿದ್ದ ಎಡವಟ್ಟೆ-೭೦ ರ ಮುಖ್ಯಸ್ಥಳವು ಮೆಜವೂರು ಎಂದಿದ್ದು ಅದು ಇಂದಿನ ಮೇದೂರು ಎಂದು ಗುರುತಿಸಬಹುದು. ಈ ಎಲ್ಲಾ ಉಲ್ಲೇಖಗಳು ಮತ್ತು ಗೊಗ್ಗ ಶಾಸನದಲ್ಲಿ ಬರುವ ಮಹಾಮಂಡಳೇಶ್ವರ ಎಂಬ ಬಿರುದು ಚಟ್ಟರಸನು ಹೆಚ್ಚು ಶಕ್ತಿಶಾಲಿಯಾಗಿ ಬೆಳೆಯುತ್ತಿದ್ದನು ಎಂದು ಸೂಚಿಸುತ್ತದೆ.

ಮೇಲಿನ ವಂಶಾವಳಿಯಲ್ಲಿ ತೋರಿಸಿದ ೧ನೇ ಈಶ್ವರದೇವನು ೨ನೇ ಚಟ್ಟರಸನ ಮಗನೆಂದು ಎಲ್ಲಿಯೂ ಹೇಳಿಲ್ಲ. ಆದರೆ ಅವನು ಮಾಚರಸ ಮತ್ತು ಮಲ್ಲಿದೇವನ ತಂದೆ ಎಂದು ಬೆಳಗುತ್ತಿ ಶಾಸನದಲ್ಲಿ ಹೇಳಿದ್ದರಿಂದ, ಅವನು ಚಟ್ಟರಸನ ಮಗನಿರಬಹುದೆಂದು ಊಹಿಸಲಾಗಿದೆ. ಚಟ್ಟರಸ ಮತ್ತು ಮಾಚರಸನ ನಡುವೆ ಕಾಲದ ಅಂತರವಿದೆ ಎಂದು ಹೇಳಿದ್ದನ್ನು ಪರಿಗಣಿಸಿ[೩೬] ಈ ಅವಧಿಯಲ್ಲಿಯೇ ಮಲ್ಲಿದೇವನ ತಂದೆ ೧ನೇ ಈಶ್ವರದೇವನು ಆಳಿಕೆಯಲ್ಲಿದ್ದುದನ್ನು ಮತ್ತು ಅವನು ೧ನೇ ಚಟ್ಟರಸನ ಮಗನಾಗಿದ್ದಿರಬಹುದೆಂಬ ಊಹೆಯನ್ನು ಈಗಾಗಲೇ ನಮೂದಿಸಿದ್ದೇವೆ.

೧ನೇ ಈಶ್ವರದೇವನ ಶಾಸನಗಳು ಯಾವವೂ ದೊರೆತಿಲ್ಲ. ಬಹುಶಃ ಅವನು ಚಾಲುಕ್ಯ ೬ನೇ ವಿಕ್ರಮಾದಿತ್ಯನ ಆಳಿಕೆಯ ಕೊನೆಯ ಭಾಗದಲ್ಲಿ ಯಾವನೋ ಮಾಂಡಲಿಕನ ಅಧೀನನಾಗಿ ಆಳುತ್ತಿದ್ದಿರಬೇಕು. ಈಶ್ವರದೇವನ ಮಗ ಮಾಚರಸನ ಹಲವಾರು ಶಾಸನಗಳಲ್ಲಿ ಉಲ್ಲೇಖಿಸಲ್ಪಟ್ಟಿದ್ದಾನೆ. ಅವನ ಒಂದು ಶಾಸನವು ಮೇಲೆ ಹೇಳಿದಂತೆ ಹಿರೇಕೆರೂರು ತಾಲೂಕಿನ ನಾಗವಂದ ಎಂಬಲ್ಲಿ ದೊರೆತಿದ್ದು,[೩೭] ಇದರ ಕಾಲ ಕ್ರಿ.ಶ. ೧೧೨೮. ಆಗ ಚಾಲುಕ್ಯ ೩ನೇ ಸೋಮೇಶ್ವರನು ಆಳರಸನಾಗಿದ್ದನು. ಮಾಚರಸನ ಕಾಲದ ಒಂದು ಪ್ರಮುಖ ಬೆಳವಣಿಗೆ ಎಂದರೆ ಸಿಂದ ಮನೆತನದ ಸ್ಥಾನಮಾನದಲ್ಲಿ ಹೆಚ್ಚಳ. ಇಲ್ಲಿಯವರೆಗೆ ಅವರು ಚಾಲುಕ್ಯ ಅರಸರ ಮಾಂಡಲಿಕರ ಅಧೀನರಾಗಿ ಆಳುತ್ತಿದ್ದರೆಂಬುದನ್ನು ಮೇಲೆ ನೋಡಿದ್ದೇವೆ. ಆದರೆ ಮಾಚರಸನು ನೇರವಾಗಿ ಚಾಲುಕ್ಯ ಅರಸನಿಗೆ ಅಧೀನನಾಗಿ ಎಡವಟ್ಟೆ-೭೦, ಅರಕೆರೆ-೧೨ ಮತ್ತು ಐವತ್ತಾರರ ಒಂದು ಪ್ರದೇಶವನ್ನು ಆಳುತ್ತಿದ್ದನು. ಈ ಶಾಸನವು ಮೊದಲು ಭೂಲೋಕಮಲ್ಲನು ಅಂದರೆ

೩ನೇ ಸೋಮೇಶ್ವರನು ಕಲ್ಯಾಣಪುರದ ರಾಜಧಾನಿಯಲ್ಲಿ ಆಳುತ್ತಿದ್ದನೆಂದು ಹೇಳಿ ಒಡನೆಯೇ "ಸಿಂದವಂಶ ತಿಲಕನಾದ" ಮಾಚರಸನನ್ನು ಹೆಸರಿಸುತ್ತದೆ. ಅಲ್ಲದೇ ಅವನ ಅಧೀನನಾದ ಮುದ್ದಕನಚಟ್ಟ ಬೂವ ಎಂಬುವರನ್ನು ಉಲ್ಲೇಖಿಸುತ್ತದೆ. ವಿಶೇಷವೆಂದರೆ ಮೇಲೆ ಹೆಸರಿಸಲಾದ ಮಾದನಭಾವಿ ಶಾಸನವು, ಇವನು ತನ್ನ ಒಂದೇ ಕುದರೆಯನ್ನು ಹಾಯಿಸಿ ಯುದ್ಧದಲ್ಲಿ ವೈರಿಯ ಬಲವನ್ನು ಹಿಮ್ಮೆಟ್ಟಿಸಿದನೆಂದು ಹೇಳುತ್ತದೆ. ಇದು ಸಾಂಪ್ರದಾಯಿಕ ವರ್ಣನೆ ಎನಿಸಿದರೂ ಇವನು ಸಮಕಾಲೀನ ಕದನಗಳಲ್ಲಿ ಭಾಗವಹಿಸಿದ್ದನೆಂಬುದನ್ನು ಸೂಚಿಸುತ್ತದೆ. ಈ ಕಾಲದಲ್ಲಿ ಸಾವಕಾಶವಾಗಿ ರಾಜಕೀಯ ಬದಲಾವಣೆಗಳಾಗುತ್ತಿದ್ದವು. ಚಾಲುಕ್ಯರ ಮಾಂಡಲಿಕರಾಗಿದ್ದ ಹೊಯ್ಸಳರು ಅವಕಾಶಕ್ಕಾಗಿ ಕಾಯುತ್ತಿದ್ದು, ಈ ವಂಶದ ವಿಷ್ಣುವರ್ಧನನು ಚಾಲುಕ್ಯ ಅರಸರನ್ನು ಎದುರಿಸಲು ಹವಣಿಸುತ್ತಿದ್ದನು. ಇಂಥ ಒಂದು ಪ್ರಸಂಗದಲ್ಲಿ ಸಿಂದ ಮಾಚರಸನು ತನ್ನ ಆಳರಸನಿಗೆ ಬೆಂಬಲವಾಗಿ ನಿಂತಿದ್ದರಲ್ಲಿ ಆಶ್ಚರ್ಯವೇನಿಲ್ಲ. ಮಾಚರಸನ ಹೆಂಡತಿಯ ಹೆಸರು ಚಟ್ಟಲದೇವಿ ಎಂದಿತ್ತೆಂದು ಮೇಲೆ ಹೇಳಿದ್ದೇವೆ. ಮಾಚರಸನ ಕಾಲಾವಾಧಿಯನ್ನು ಖಂಡಿತವಾಗಿ ನಿರ್ಧರಿಸಲು ಆಧಾರಗಳಿಲ್ಲ. ಇವನ ಆಳಿಕೆಯ ಕಾಲಾವಧಿಯು ಕ್ರಿ.ಶ. ೧೧೨೦ ರಿಂದ ೧೧೪೦ ಎನ್ನಬಹುದು. ಆದರೂ ರೂಢಿಯಂತೆ ೨೦-೨೫ ವರ್ಷಗಳ ಅವಧಿಯನ್ನು ಹಿಡಿದರೆ ಸ್ಥೂಲವಾಗಿ ಅವನ ಆಳಿಕೆ ಕ್ರಿ.ಶ. ೧೧೪೫ ರ ಹೊತ್ತಿಗೆ ಮುಗಿದಿರುವ ಸಾಧ್ಯತೆಯಿದೆ. ಈಶ್ವರದೇವನ ಮಗ ಮಲ್ಲಿದೇವನು ಭೂಮಿಯನ್ನು ಆಳಿದನೆಂದು ಇಷ್ಟೆ ಒಂದು ಶಾಸನದಲ್ಲಿ ಹೇಳಿದೆ.[೩೮] ಅವನ ಆಳಿಕೆಯ ಅವಧಿ ಚಿಕ್ಕದಾಗಿದ್ದು ಅದು ಕ್ರಿ.ಶ. ೧೦೪೦ ರಿಂದ ೧೦೫೦ ಇದ್ದಿತೆಂದು ಊಹಿಸಬಹುದು. ಅವನ ಇನ್ನೊಬ್ಬ ತಮ್ಮ ಅಯ್ಯರಸ ಮತ್ತು ಅಯ್ಯರಸನ ಮಗ ರಾಯರಸ ಇವರು ಆಳಿದ ಬಗ್ಗೆಯೂ ಯಾವುದೇ ಮಾಹಿತಿ ಇಲ್ಲ. ಬಹುಶಃ ಮಾಚರಸನಿಗೆ ಮಕ್ಕಳಿಲ್ಲದ್ದರಿಂದ ರಾಯರಸನ ಮಗ ೨ನೇ ಈಶ್ವರದೇವನು ಅಧಿಕಾರಕ್ಕೆ ಬಂದಿರಬೇಕು.

೨ನೇ ಈಶ್ವರದೇವನಿಂದ ಸಿಂದ ಸಾಮಂತರು ರಾಜಕೀಯವಾಗಿ ಹೆಚ್ಚು ಬಲಿಷ್ಠರಾದರು ಪ್ರಸ್ತುತ ರಾಜಕೀಯದಲ್ಲಿ ಗಮನಿಸುವಾಗ ಬದಲಾವಣೆಗಳಾಗುತ್ತಿದ್ದುದೇ ಇದಕ್ಕೆ ಕಾರಣ. ಚಾಲುಕ್ಯ ೬ನೇ ವಿಕ್ರಮಾದಿತ್ಯನ ಕೊನೆಯಾದ ನಂತರ ಸಾಮ್ರಾಜ್ಯದ ಮೇಲೆ ಚಾಲುಕ್ಯರ ಹಿಡಿತ ಸಡಿಲವಾಯಿತು. ಬಲಾಢ್ಯನೂ, ಮುತ್ಸದ್ದಿಯೂ ಆಗಿದ್ದ ೬ನೇ ವಿಕ್ರಮಾದಿತ್ಯನು ತನ್ನ ಎಲ್ಲ ಮಾಂಡಲಿಕರನ್ನು ಹದ್ದುಬಸ್ತಿನಲ್ಲಿ ಇಟ್ಟಿದ್ದು ಅವನ ನಂತರ ಈ ಮಾಂಡಲಿಕರು, ಸಾಮಂತರು ಮತ್ತೆ ತಲೆ ಎತ್ತಹತ್ತಿದರು. ಅಂತಹವರಲ್ಲಿ ಇಬ್ಬರು ಪ್ರಮುಖರು. ಒಬ್ಬನು ರಾಜಮನೆತನಕ್ಕೆ ನಿಕಟ ಸಂಬಂಧವಿದ್ದ ಮತ್ತು ರಾಜ್ಯದೊಳಗೆಯೇ ಅಧಿಕಾರದಲ್ಲಿದ್ದ ಕಳಚುರಿ ಮನೆತನದ ಬಿಜ್ಜಳನು.

ಇವನು ಸಮಯವನ್ನು ಸಾಧಿಸಿ ಚಾಲುಕ್ಯ ೩ನೇ ತೈಲನನ್ನು ಕಿತ್ತೊಗೆದು ರಾಜಧಾನಿ ಕಲ್ಯಾಣವನ್ನು ಆಕ್ರಮಿಸಿ ತಾನೇ ಅರಸನಾದನು. ಇಂತಹ ಸಮಯಕ್ಕಾಗಿಯೇ ಕಾಯುತ್ತಿದ್ದ ಹೊಯ್ಸಳ ಸಾಮಂತರು, ಆಳರಸರ ವಿರುದ್ಧವಾಗಿ ತಲೆ ಎತ್ತತೊಡಗಿದರು. ಹೊಯ್ಸಳರು ತಮ್ಮ ನಾಡಿನ ಉತ್ತರ ಭಾಗದಲ್ಲಿ ತುಂಗಭದ್ರೆಯನ್ನು ದಾಟಿ ಬೆಳ್ವೊಲ ಪ್ರದೇಶವನ್ನು ಆಕ್ರಮಿಸಲು ಹಾತೊರೆಯುತ್ತಿದ್ದರು. ಮಹತ್ವಾಕಾಂಕ್ಷಿಯಾದ ಹೊಯ್ಸಳ ವಿಷ್ಣುವರ್ಧನನು ವಿಕ್ರಮಾದಿತ್ಯನ ಕಾಲದಲ್ಲಿಯೇ ಇಂಥ ಪ್ರಯತ್ನಗಳನ್ನು ನಡೆಸಿದ್ದನು. ಆದರೆ ಆಗ ಅವನ ಆಟ ನಡೆಯಲಿಲ್ಲ. ವಿಕ್ರಮಾದಿತ್ಯನ ಪತನದ ನಂತರ ಅವನ ಆಸೆ ಗರಿಗೆದರಿತು. ಅವನು ತನ್ನ ಪ್ರದೇಶಗಳಲ್ಲಿ ಚಾಲುಕ್ಯರ ನೊಗವನ್ನು ಕಿತ್ತೊಗೆದು ಸ್ವತಂತ್ರನಾಗಿ ಆಳತೊಡಗಿದನಲ್ಲದೇ ಬೆಳ್ವೊಲ ಪ್ರದೇಶದಲ್ಲಿ ಅತಿಕ್ರಮಣದ ಚಟುವಟಿಕೆಗಳನ್ನು ಮುಂದುವರೆಸಿದನು. ಮುಂದೆ ಅವನ ಮೊಮ್ಮಗ ೨ನೇ ಬಲ್ಲಾಳನು ಈ ಕಾರ್ಯವನ್ನು ಸಾಧಿಸಿಯೇ ಬಿಟ್ಟನು. ಅತ್ತ ಚಾಲುಕ್ಯ ಸಾಮ್ರಾಜ್ಯದ ಉತ್ತರದ ಗಡಿಯಲ್ಲಿ ಸೇವುಣರು ಕಲ್ಯಾಣದ ಮೇಲೆ ಕಣ್ಣಿಟ್ಟು ಇಂಥದೇ ಪ್ರಯತ್ನಗಳನ್ನು ನಡೆಸಿದ್ದರು. ಸಾಮ್ರಾಜ್ಯದ ಹೃದಯ ಭಾಗದಲ್ಲಿ ಕಳಚುರಿ ಬಿಜ್ಜಳನಿಂದ ಮತ್ತು ಗಡಿಭಾಗಗಳಲ್ಲಿ ಹೊಯ್ಸಳರ ಮತ್ತು ಸೇವುಣರ ಒತ್ತಡಗಳಿಂದ ಚಾಲುಕ್ಯ ಸಾಮ್ರಾಜ್ಯವು ಕೊನೆಗೂ ಅಸ್ತಂಗತವಾಯಿತು. ಇಂತಹ ವಿಪ್ಲವಕಾರಿ ಪರಿಸ್ಥಿತಿಯಲ್ಲಿ ಸಿಂದ ಸಾಮಂತರು ಕಾರ್ಯಭಾರ ಮಾಡಬೇಕಾಯಿತು. ಬದಲಾದ ಪರಿಸ್ಥಿತಿಗೆ ಅನುಗುಣವಾಗಿ ಅವರು ತಮ್ಮ ಅಧೀನತ್ವವನ್ನು ಹೆಚ್ಚು ಬಲಶಾಲಿಗಳಾದ ಅರಸರೊಂದಿಗೆ ಒಪ್ಪಿಕೊಳ್ಳುತ್ತಾ ತಾವೂ ಪ್ರಬಲರಾಗಲು ಯತ್ನಿಸಿದರು. ೨ನೇ ಈಶ್ವರದೇವನು ಇಂಥ ಚಟುವಟಿಕೆಗಳ ಕೇಂದ್ರಬಿಂದುವಾಗಿದ್ದನು.

೨ನೇ ಈಶ್ವರದೇವನು ರಾಯರಸ ಮತ್ತು ಅವನ ಹೆಂಡತಿ ಬೂಚಲದೇವಿಯವರ ಮಗನೆಂದು ಹರಿಹರ ಶಾಸನದಲ್ಲಿ[೩೯] ಸ್ಪಷ್ಟವಾಗಿ ಹೇಳಿದೆ. ಸಿಂದರನ್ನು ಕುರಿತು ಬರೆದ ವಿದ್ವಾಂಸರೆಲ್ಲರೂ ಇದನ್ನು ಒಪ್ಪಿಕೊಂಡಿದ್ದಾರೆ. ಆದರೆ ಚೋದ್ಯವೆಂದರೆ ಬೆಳಗುತ್ತಿಯಲ್ಲಿಯೇ ದೊರೆತ ಒಂದು ತ್ರುಟಿತ ಶಾಸನದಲ್ಲಿ ಈಶ್ವರದೇವನು ಮಲ್ಲರಸ ಅಥವಾ ಮಲ್ಲದೇವನ ಮಗ ಎಂದು ಕರೆಯಲ್ಪಟ್ಟಿದ್ದಾನೆ.[೪೦] ("ಸಿಂದಕುಳಾಂಬರದ್ಯುಮಣಿ ಕಲಿ ಮಲ್ಲನೃಪಾಳನ ಪುತ್ರನಂ"). ಈ ಹೇಳಿಕೆಯನ್ನು ನೋಡಿದರೆ ಮಲ್ಲಿದೇವನ ನಂತರ ಈಶ್ವರದೇವನೆ ಅಧಿಕಾರಕ್ಕೆ ಬಂದನೆಂಬ ನಮ್ಮ ಊಹೆಗೆ ಪುಷ್ಟಿ ಸಿಗುತ್ತದೆ. ಈಶ್ವರದೇವನು ಚಾಲುಕ್ಯ ಮತ್ತು ಕಳಚುರಿಗಳ ಸಂಘರ್ಷದ ಸಮಯದಲ್ಲಿ ಅಧಿಕಾರಕ್ಕೆ ಬಂದನು. ಬದಲಾದ ಪರಿಸ್ಥಿತಿಗಳನ್ನು ಗಮನಿಸಿ ಅದೇ ಆಗ ಅರಸನಾಗಿದ್ದ ಬಿಜ್ಜಳನ ಅಧೀನತ್ವವನ್ನು ಒಪ್ಪಿಕೊಂಡನು ಎಂಬುದು ಅವನ ಶಾಸನಗಳಿಂದ

ಸೂಚಿತವಾಗುತ್ತದೆ. ಹರಿಹರದ ಕ್ರಿ.ಶ. ೧೧೬೪ ರ ಒಂದು ಶಾಸನದಲ್ಲಿ ಬಿಜ್ಜಳನ ಆಳಿಕೆಯ ೮ನೇ ವರ್ಷದಲ್ಲಿ ಅವನು "ಶ್ರೀ ದಕ್ಷಿಣಗಂಗೆ ವಾರಣಾಸಿ" ಸ್ವಯಂಭೂಶಂಕರನಾರಾಯಣ ದೇವರ ಪೂಜೆ, ನೈವೇದ್ಯ ಇತ್ಯಾದಿಗಳಿಗೆ ಎಂದು ತನ್ನ ಅಧಿಕಾರಕ್ಕೊಳಪಟ್ಟಿದ್ದ ಭ್ರಾಂತಿ-೩೦ ಎಂಬ ಪ್ರಾಂತದಲ್ಲಿಯ ಒಂದೊಂದು ಊರಿನಿಂದ ಒಂದೊಂದು ಹೊನ್ನಿನಂತೆ ದತ್ತಿಯನ್ನು ಕೊಟ್ಟನೆಂದು ಹೇಳಿದೆ. ಈ ಶಾಸನದಲ್ಲಿ ಈಶ್ವರದೇವನು ಮಹಾಮಂಡಳೇಶ್ವರ ಎಂದು ಕರೆಯಲ್ಪಟ್ಟಿದ್ದನ್ನು ವಿಶೇಷವಾಗಿ ಗಮನಿಸಬೇಕು. ಚಾಲುಕ್ಯರ ಕಾಲದಲ್ಲಿ ಸಿಂದರು ಚಾಲುಕ್ಯರ ಮಾಂಡಲಿಕರ, ವಿಶೇಷವಾಗಿ ಬನವಾಸಿ ಪ್ರಾಂತವನ್ನು ಆಳುತ್ತಿದ್ದ ಮಾಂಡಲಿಕರ ಅಧೀನರಾಗಿದ್ದರು. ಈಗ ಮಹಾಮಂಡಳೇಶ್ವರ ಪದವಿಗೇರಿದರು. ಈಶ್ವರದೇವನು ತನಗೆ ಕೊಟ್ಟ ಬೆಂಬಲವನ್ನು ಗೌರವಿಸಿ ಬಿಜ್ಜಳನು ಅವನಿಗೆ ಪದೋನ್ನತಿ ಮತ್ತು ಹೆಚ್ಚಿನ ಅಧಿಕಾರಗಳನ್ನು ಕೊಟ್ಟನೆಂದು ಯಥಾರ್ಥವಾಗಿ ತರ್ಕಿಸಬಹುದು. ಹಿರೇಕೆರೂರು ತಾಲೂಕಿನ ನಿಡುನೇಗಿಲುದಲ್ಲಿ ದೊರೆತ ಒಂದು ಶಾಸನವು ಈ ಈಶ್ವರದೇವನ ಸವಿಸ್ತಾರವಾದ ಪ್ರಶಸ್ತಿಯನ್ನು ಹೊಂದಿದ್ದು ಅವನ ಹೆಚ್ಚಿದ ಸ್ಥಾನಮಾನಗಳನ್ನು ಸೂಚಿಸುತ್ತದೆ. ಈ ಶಾಸನವು ಭುಜಬಲಮಲ್ಲದೇವನು ಅಂದರೆ ಕಳಚುರಿ ೨ನೇ ಬಿಜ್ಜಳನು ತನ್ನ ಭುಜಬಲದಿಂದ ಚಾಲುಕ್ಯನನ್ನು ಸೋಲಿಸಿ ರಾಜ್ಯವನ್ನು ಪಡೆದನೆಂದು ಹೇಳುತ್ತದೆ. ಈ ವಿಜಯಕ್ಕೆ ಸಿಂದ ಸಾಮಂತರು ಕಾರಣವೆಂದು ಹೇಳುವ ಶಾಸನದ ಮಾತನ್ನು (ವಿಜಯರಾಜ್ಯಾಭ್ಯುದಯ ಕಾರಣಕಾರಣರಪ್ಪ ಸಿಂದಾನ್ವಯ) ಗಮನಿಸಬೇಕು. ಈ ಶಾಸನದ ಕಾಲ ಕ್ರಿ.ಶ. ೧೧೬೫[೪೧]. [೪೨]ಈ ಶಾಸನದ ಭಾಷೆಯಲ್ಲಿ ಅತ್ಯುಕ್ತಿ ಇದೆ ಎಂದೆನಿಸಿದರೂ ಈಶ್ವರದೇವನ ಸ್ಥೂಲ ಚಿತ್ರಣವನ್ನು ಪಡೆಯಲು ಸಾಧ್ಯವಾಗುತ್ತದೆ. ಅವನ ಅಧೀನದಲ್ಲಿದ್ದ ನಾಡುಗಳೆಂದರೆ ಬನವಾಸಿ ನಾಡಿನ ಮಾಸವೂರು-೧೨, ಎಡವಟ್ಟೆ-೭೦, ಬಳ್ಳವೆ-೭೦, ನರಿಯಳಗೆ-೩೦ ; ಸಾಂತಳಿಗೆಯ ಸಾವಿರದೊಳಗೆ ಎಡಮಲೆ-೧೨, ಮದವೂರು-೩೦ ; ಮಂಡಲಿ ನಾಡೊಳಗೆ ಹಳಲೂರು-೧೨ ; ನೊಳಂಬವಾಡಿ ನಾಡೊಳಗೆ ಕುಂದೂರು-೭೦, ಐವತ್ತಾರುಬಾಡ ಪ್ರದೇಶ, ಅತ್ತಿಗೆರೆ-೧೨, ಪಡುಗಲ-೧೨ ; ಆಸಂದಿನಾಡೊಳಗೆ ಅರಬಲ್ಲ-೭೦, ಕಳಕಟ್ಟಿ-೧೨ ಆಳುತ್ತಿದ್ದನೆಂದು ಹೇಳಿದೆ. ಇವನ ಈ ಸಾಧನೆಗಳಲ್ಲಿ ಮಾವ ಅಲ್ಲಮನು ಇವನಿಗೆ ಬಹಳಷ್ಟು ಸಹಾಯ ಮಾಡಿದನೆಂದು ಸ್ಪಷ್ಟವಾಗುತ್ತದೆ. (ಮಾವನಲ್ಲರಸಂ ತನ್ನ ರಾಜ್ಯಕ್ಕೆ ಮುಖ್ಯನಾಗಿ ನಡೆಯೆ) ಈ ಅಲ್ಲಮನು ಈಶ್ವರದೇವನ ಮಾವನೆಂದು ಬೆಳಗುತ್ತಿ ಶಾಸನದಲ್ಲಿ ಹೆಸರಿಸಲ್ಪಟ್ಟಿದ್ದಾನೆ.[೪೩] ಇವನ ಮಂತ್ರಿಯಾದ ಮಹಾದೇವ ಎಂಬವನ ವರ್ಣನೆಯನ್ನು ಈ ಶಾಸನ ಒಳಗೊಂಡಿದೆ. ಈ ಎಲ್ಲ ವರ್ಣನೆಗಳಿಂದ ಸಿಂದ ಮನೆತನವು ಕಳಚುರಿ ಬಿಜ್ಜಳನ ಔದಾರ್ಯದಿಂದಾಗಿ ಹೆಚ್ಚು ಪ್ರಸಿದ್ಧಿಗೆ ಬಂದಿತು ಎಂದು ಹೇಳಬಹುದು.

ನಿಡುನೇಗಿಲು ಶಾಸನದ ಆಧಾರದ ಮೇಲಿಂದ ದೇಸಾಯಿ ದಿನಕರ ಅವರು ಈ ಊರನ್ನು ಈಶ್ವರದೇವನು ಹಾನಗಲ್ಲ ಕದಂಬರಿಂದ ಕಿತ್ತುಕೊಂಡನೆಂದು ತರ್ಕಿಸಿದ್ದಾರೆ.[೪೪] ಇದಕ್ಕೆ ಮುಖ್ಯ ಕಾರಣವೆಂದರೆ ನಿಡುನೇಗಿಲವು ಧಾರವಾಡ ಜಿಲ್ಲೆಯ ಹಾನಗಲ್ಲ ತಾಲೂಕಿನಲ್ಲಿ ಇದ್ದಿತೆಂಬ ತಪ್ಪು ಕಲ್ಪನೆ. ನಿಡುನೇಗಿಲವು ಹಿರೇಕೆರೂರು ತಾಲೂಕಿನಲ್ಲಿದ್ದು ದೇಸಾಯಿ ದಿನಕರ ಅವರ ಕಾಲದಲ್ಲಿಯೂ ಅಲ್ಲಿಯೇ ಇದ್ದಿತೆಂದು ಹೇಳಲು ಆಧಾರಗಳಿವೆ.

ಮೇಲೆ ಹೇಳಿದಂತೆ ಹೊಯ್ಸಳರು ಸಹ ಈ ಸಂಧಿಕಾಲದಲ್ಲಿ ತಮ್ಮ ಅಧಿಕಾರ ವಿಸ್ತಾರಕ್ಕೆ ಹಾತೊರೆಯುತ್ತಿದ್ದರು. ಕಳಚುರಿ ಅರಸನ ಮಾಂಡಲಿಕನಾಗಿದ್ದ ಈಶ್ವರದೇವನನ್ನು ಮಣಿಸಲು ಹೊಯ್ಸಳ ೧ನೇ ನರಸಿಂಹನು ಪ್ರಯತ್ನ ಮಾಡಿದನೆಂದು ಬೇಲಿಮಲ್ಲೂರ ಎಂಬ ಗ್ರಾಮದಲ್ಲಿ ದೊರೆತ ಒಂದು ವೀರಗಲ್ಲಿನಿಂದ ಸೂಚಿತವಾಗುತ್ತದೆ.[೪೫] ಶಾಸನವು ಸ್ಪಷ್ಟವಿಲ್ಲದಿದ್ದರೂ ಪರಿಸ್ಥಿತಿಯನ್ನು ಊಹಿಸಬಹುದಾಗಿದೆ. ಈಶ್ವರದೇವನು ಅಧಿಕಾರದಲ್ಲಿದ್ದ ಅರಕೆರೆಯಲ್ಲಿ ಹೊಯ್ಸಳ ಅಧಿಕಾರಿಯೊಬ್ಬ ಒಳಹೊಕ್ಕಂತೆ ಕಾಣುತ್ತದೆ. ಆಗ ಸಿಟ್ಟಿಗೆದ್ದ ಈಶ್ವರದೇವನು ಅರಕೆರೆ ಮೇಲೆ ದಾಳಿ ಮಾಡಲು ಆಜ್ಞಾಪಿಸುತ್ತಾನೆ. ಆ ಕದನದಲ್ಲಿ ಹೊಯ್ಸಳ ಅರಸನ ಇನ್ನಿತರ ನಂಬಿಗಸ್ತ ಸೈನಿಕರು ಮೃತ ಹೊಂದಿದರೆಂದು ತಿಳಿದು ಬರುತ್ತದೆ.[೪೬] ಬೆಳಗುತ್ತಿ ನಾಡು ಕಳಚುರಿ ಮತ್ತು ಹೊಯ್ಸಳ ರಾಜ್ಯಗಳ ಗಡಿಯಲ್ಲಿ ಇದ್ದುದರಿಂದ ಈ ರಾಜಕೀಯ ಒತ್ತಡಗಳನ್ನು ಈಶ್ವರದೇವನು ಎದುರಿಸುವುದು ಅನಿವಾರ್ಯವಾಯಿತು. ಸಂಘರ್ಷಗಳು ಸತತವಾಗಿ ನಡದೇ ಇದ್ದವು. ಹೊಯ್ಸಳ ಬಲ್ಲಾಳನ ಅಧಿಕಾರಿಯೊರ್ವನಾದ ತೊಡಪಿಳ್ಳೆದಂಡಾಧಿಪನೆಂಬುವನು ಬೆಳಗುತ್ತಿಯನ್ನು ಆಳುತ್ತಿದ್ದನೆಂದು ಕ್ರಿ.ಶ. ೧೧೭೫ರ ಒಂದು ಶಾಸನ ತಿಳಿಸುತ್ತದೆ.[೪೭] ಆದರೆ ಮುಂದೆ ಮತ್ತೆ ಕಳಚುರಿಗಳ ಕೈ ಮೇಲಾಯಿತು ಎಂದು ಹೇಳಲು ಆಧಾರಗಳಿವೆ ಏಕೆಂದರೆ, ಕ್ರಿ.ಶ. ೧೧೭೯ ರಲ್ಲಿ ಈಶ್ವರದೇವನು ಕಳಚುರಿ ಸಂಕಮನ ಅಧೀನನಾಗಿದ್ದನೆಂದು ಒಂದು ಶಾಸನ ಹೇಳುತ್ತದೆ.[೪೮] ಕ್ರಿ.ಶ. ೧೧೮೦ ರಲ್ಲಿ ಸಹ ಅವನು ಇದೇ ಅಧಿಕಾರದಲ್ಲಿ ಮುಂದುವರೆದಿದ್ದನು.[೪೯] ಅವನ ಮಗ ೨ನೇ ಮಲ್ಲಿದೇವನು ಕ್ರಿ.ಶ. ೧೧೮೯ ರಲ್ಲಿ ಅಧಿಕಾರದಲ್ಲಿದ್ದನೆಂದು ಬೆಳಗುತ್ತಿ ಶಾಸನದಿಂದ ತಿಳಿದು ಬರುತ್ತದೆ.[೫೦] ಅವನು ಸುಮಾರು ಕ್ರಿ.ಶ. ೧೧೮೫ ರಲ್ಲಿ ಅಧಿಕಾರಕ್ಕೆ ಬಂದಿದ್ದನೆಂದು ಗ್ರಹಿಸಿದರೆ, ೨ನೇ ಈಶ್ವರದೇವನು ಕ್ರಿ.ಶ. ೧೧೫೧ ರಿಂದ ೧೧೮೫ ರವರೆಗೆ ಆಳಿದನೆಂದು ನಿರ್ಧರಿಸಬಹುದು.

ಈಶ್ವರದೇವನ ಆಳಿಕೆಯು ಧೀರ್ಘವಾಗಿದ್ದಿತು ಮತ್ತು ಅನೇಕ ಮಹತ್ವದ ಘಟನೆಗಳಿಂದ ಕೂಡಿದ್ದಿತು. ಚಾಲುಕ್ಯ ಕಳಚುರಿಗಳ ಘರ್ಷಣೆ ಮತ್ತು ಕಳಚುರಿ ಹೊಯ್ಸಳರ ನಡುವಿನ

ಕಾದಾಟಗಳು ಇವುಗಳಲ್ಲಿ ಅವನು ಪ್ರತ್ಯಕ್ಷ ಭಾಗಿಯಾಗಿದ್ದನು. ಇದರ ಪ್ರತಿಫಲವಾಗಿ ಸಿಂದ ವಂಶವು ಮಹಾಮಂಡಳೇಶ್ವರ ಸ್ಥಾನಕ್ಕೆ ಏರಿ ಪ್ರಸಕ್ತ ರಾಜಕೀಯದಲ್ಲಿ ಗಮನಾರ್ಹ ಶಕ್ತಿ ಎನಿಸಿತು. ಅಧಿಕಾರ ವ್ಯಾಪ್ತಿ ಹೆಚ್ಚಿತು. ೨ನೇ ಈಶ್ವರದದೇವನ ಆಳಿಕೆಯ ಕೊನೆ ಕೊನೆ ಭಾಗದಲ್ಲಿ ಮತ್ತೊಂದು ರಾಜಕೀಯ ಪಲ್ಲಟವಾಯಿತು. ೪ನೇ ಸೋಮೇಶ್ವರನು ಚಾಲುಕ್ಯ ಆಧಿಪತ್ಯವನ್ನು ಪುನಃ ಸ್ಥಾಪಿಸಿದಾಗ ಈಶ್ವರದೇವನ ಮಗ ೨ನೇ ಮಲ್ಲಿದೇವನು ಅವನಿಗೆ ಬೆಂಬಲವಾಗಿ ನಿಂತನು. ಮೇಲೆ ಉಲ್ಲೇಖಿಸಿದ ಬೆಳಗುತ್ತಿ ಶಾಸನವು ಮಲ್ಲಿದೇವನು ಚಾಲುಕ್ಯ ಸೋಮೇಶ್ವರನ ಅಧೀನನಾಗಿ ಬೆಳಗುತ್ತಿ ನೆಲೆವೀಡಿನಿಂದ ಆಳುತ್ತಿದ್ದನೆಂದು ಹೇಳಿದೆ. ಬೆಳಗುತ್ತಿಯಲ್ಲಿಯ ಕ್ರಿ.ಶ. ೧೧೯೫ ರ ಒಂದು ಶಾಸನವು ಇವನ ಆಳಿಕೆಯನ್ನು ಉಲ್ಲೇಖಿಸಿದ್ದು ಯಾವ ಆಳರಸರನ್ನೂ ಹೆಸರಿಸುವುದಿಲ್ಲ.[೫೧] ಇದರಿಂದ ಈ ಅವಧಿಯಲ್ಲಿ ಮಲ್ಲಿದೇವನು ಸ್ವತಂತ್ರನಾಗಲು ಯತ್ನಿಸಿರಬೇಕೆಂದು ಬಿ.ಆರ್. ಗೋಪಾಲ ಅವರು ಸೂಚಿಸುತ್ತಾರೆ.[೫೨] ಒಂದು ಶಾಸನದಲ್ಲಿ ಆಳರಸನ ಹೆಸರಿಲ್ಲದಿದ್ದುದು ಇಂತಹ ಊಹೆಗೆ ಧೃಡವಾದ ಆಧಾರವೆನಿಸದಿದ್ದರೂ ರಾಜಕೀಯ ಅನಿಶ್ಚಿತತೆಯ ವಾತಾವರಣದಲ್ಲಿ ಅದು ಆಶ್ಚರ್ಯವೇನಲ್ಲ. ಈ ಶಾಸನದಲ್ಲಿಯ ವಿಶೇಷವೇನೆಂದರೆ, ಮಲ್ಲಿದೇವನು ರಟ್ಟಪಳ್ಳಿಯ ಮೇಲೆ ಆದ (ಹಿರೇಕೆರೂರು ತಾಲೂಕಿನ ರಟ್ಟಿಹಳ್ಳಿ) ದಾಳಿ ಎದುರಿಸಲು ತನ್ನ ದಂಡನಾಯಕ ಕಲ್ಲೆಯನಾಯಕನನ್ನು ಕಳುಹಿಸಿದನೆಂದು, ಅವನು ಕದನದಲ್ಲಿ ಹೋರಾಡಿ ನಿಧನ ಹೊಂದಿದರು ಎಂದು ಶಾಸನ ಹೇಳುತ್ತದೆ. ಈ ಕದನದ ಕಾರಣದ ಬಗ್ಗೆ ಶಾಸನದಲ್ಲಿ ಸೂಚನೆ ಇರದಿದ್ದರೂ, ಇದು ಚಾಲುಕ್ಯ ಹೊಯ್ಸಳರ ಸಂಘರ್ಷದ ಒಂದು ಭಾಗ ಎಂಬುದು ಸ್ಪಷ್ಟ.

ಈ ಹೊತ್ತಿಗಾಗಲೇ ಹೊಯ್ಸಳ ೨ನೇ ಬಲ್ಲಾಳನು ಪಟ್ಟಕ್ಕೆ ಬಂದಿದ್ದನು. ಮಹತ್ವಾಕಾಂಕ್ಷಿಯಾದ ಇವನು ಚಾಲುಕ್ಯರನ್ನು, ಕಳಚುರಿಗಳನ್ನು ಯಶಸ್ವಿಯಾಗಿ ಎದುರಿಸಿ ಸ್ವತಂತ್ರ ಅರಸನಾದನು. ಅಲ್ಲದೆ ತನ್ನ ಆಕ್ರಮಣಕಾರಿ ನೀತಿಯನ್ನು ಮುಂದುವರೆಸಿ ಚಾಲುಕ್ಯ ಸಾಮ್ರಾಜ್ಯದ ಹೃದಯ ಭಾಗವಾಗಿದ್ದ ಬೆಳ್ವೊಲ ಪ್ರಾಂತದಲ್ಲಿ ಲಕ್ಕುಂಡಿ, ಅಣ್ಣಿಗೇರಿ, ಗದಗ ಮುಂತಾದ ಕಡೆಗಳಲ್ಲಿ ತನ್ನ ನೆಲೆಗಳನ್ನು ಸ್ಥಾಪಿಸಿದನು. ಇದರ ಬಿಸಿ ಮಲ್ಲಿದೇವನಿಗೆ ತಟ್ಟದೇ ಇರಲಿಲ್ಲ. ಅವನು ಮೇಲಿಂದ ಮೇಲೆ ಹೊಯ್ಸಳರ ದಾಳಿಗಳನ್ನು ಎದುರಿಸಬೇಕಾಯಿತು. ಬೆಳಗುತ್ತಿ ಪ್ರದೇಶದ ಮೇಲೆ ನಡೆದ ಹೊಯ್ಸಳರ ದಾಳಿಗಳನ್ನು ೨ನೇ ಬಲ್ಲಾಳನ ರಾಣಿಯಾದ ಉಮಾದೇವಿಯು ಮುನ್ನಡೆಸಿದಳು ಎನ್ನುವುದಕ್ಕೆ ಹಲವಾರು ವೀರಗಲ್ಲುಗಳು ಸಾಕ್ಷಿಯಾಗಿವೆ. ಉದಾಹರಣೆಗೆ, ಬೆಳಗುತ್ತಿಯಲ್ಲಿ ದೊರೆತ ಕ್ರಿ.ಶ. ೧೧೯೬ರ ಒಂದು ವೀರಗಲ್ಲು ಶಾಸನವು

ಉಮಾಬಾಯಿಯ ಅಂದರೆ ಉಮಾದೇವಿಯ ಸೈನಿಕರು ಅಶ್ವದಳದೊಂದಿಗೆ ದಾಳಿ ಮಾಡಲು ಮಲ್ಲಿದೇವನ ದಂಡನಾಯಕನಾದ ಗಟ್ಟೆಯನಾಯಕನು ಹೋರಾಡಿ ಕದನದಲ್ಲಿ ನಿಧನ ಹೊಂದಿದನು; ಆಗ ಅವನ ಶೌರ್ಯವನ್ನು ಮೆಚ್ಚಿ ಮಲ್ಲಿದೇವರಸ ಮತ್ತು ಇತರ ಅಧಿಕಾರಿಗಳು ಭೂಮಿದಾನ ಮಾಡಿದರೆಂದು ಹೇಳಿದೆ.[೫೩] ಬೆಳಗುತ್ತಿಯ ಮೇಲಿನ ಉಮಾದೇವಿಯ ಇನ್ನೊಂದು ದಾಳಿಯಲ್ಲಿ ಕವಡಿಯೊಳೆ ಎಂಬಲ್ಲಿ ಬೀಡು ಬಿಟ್ಟು, ಬೆಳಗುತ್ತಿ ಮೇಲೆ ದಾಳಿ ಮಾಡಿದಾಗ ಆ ನಾಡವರು ಎಲ್ಲರೂ ಬಂದು ಎದುರಿಸಿ, ಚಿಲಯ ಎಂಬ ಯೋಧನು ಹೋರಾಡಿ ಸತ್ತನೆಂದೂ, ಅವನ ನೆನಪಿಗಾಗಿ ಬೀರಯ್ಯನೆಂಬುವನು ಒಂದು ವೀರಗಲ್ಲನ್ನು ನಿಲ್ಲಿಸಿದನೆಂದೂ ಹೇಳಿದೆ.[೫೪] ಈ ದಾಳಿಗಳಲ್ಲಿ ಉಮಾದೇವಿಯು ಸೋಲನ್ನು ಅನುಭವಿಸಿದಳು ಎಂದು ದೇಸಾಯಿ ದಿನಕರ ಅಭಿಪ್ರಾಯ ಪಡುತ್ತಾರೆ.[೫೫] ಇನ್ನೊಂದು ಗಮನಿಸಬೇಕಾದ ವಿಷಯವೇನೆಂದರೆ, ಈ ಶಾಸನದಿಂದ ಮಲ್ಲಿದೇವನಿಗೆ ಬೊಪ್ಪಾದೇವಿ ಎಂಬ ಹೆಂಡತಿ ಇದ್ದಳೆಂದು ತಿಳಿದು ಬರುತ್ತದೆ.

ಇದೇ ಸಂಧಿಕಾಲದಲ್ಲಿ ಮಲ್ಲಿದೇವನು ಇನ್ನೊಬ್ಬ ಎದುರಾಳಿಯನ್ನು ಎದುರಿಸಬೇಕಾಯಿತು. ಅವನೆಂದರೆ ಉಚ್ಚಂಗಿಯ ಪಾಂಡ್ಯ ಮನೆತನದ ಅರಸನು. ಅವನು ಇದೇ ಸಂಧಿಯನ್ನು ಸಾಧಿಸಿ ತನ್ನ ಪ್ರಾಬಲ್ಯವನ್ನು ಬೆಳೆಸಿಕೊಳ್ಳಲು ಯತ್ನಿಸುತ್ತಿದ್ದಿರಬೇಕು. ಬೆಳಗುತ್ತಿಯ ಒಂದು ಶಾಸನ ಪ್ರಕಾರ ಈ ಪಾಂಡ್ಯನು ಚಟ್ಟನೃಪನೆಂಬವನೊಡನೆ ಸೇರಿಕೊಂಡು ಬೆಳಗುತ್ತಿಗೆ ಸೇರಿದ ನೇಲಿವರ್ತಿ ಎಂಬ ಗ್ರಾಮದ ಮೇಲೆ ದಾಳಿ ಮಾಡಿ ದನಗಳನ್ನು ಕೊಂಡೊಯ್ಯಲು ಹವಣಿಸಿದಾಗ ಚಟ್ಟನೆಂಬ ವೀರನು ಕದನದಲ್ಲಿ ಹೋರಾಡಿ ಮಡಿದನು. ಮಲ್ಲಿದೇವನು ಚಟ್ಟನ ವಂಶಸ್ಥರು ವಂಶ ಪರಂಪರೆಯಾಗಿ ಉಪಭೋಗಿಸುವಂತೆ ಚಟ್ಟನ ನೆನಪಿಗಾಗಿ ಭೂಮಿಯನ್ನು ದಾನ ಮಾಡಿದನು.[೫೬]

ಈ ಹೊತ್ತಿಗೆ ಈ ಪ್ರದೇಶದಲ್ಲಿ ಮತ್ತೆ ರಾಜಕೀಯ ಬದಲಾವಣೆಗಳು ಆಗತೊಡಗಿದವು. ಕಳಚುರಿ ಮನೆತನದಲ್ಲಿ ಬಿಜ್ಜಳನ ನಂತರದ ಅರಸರು ಅಷ್ಟು ಬಲಿಷ್ಠರಾಗಿರಲಿಲ್ಲ. ತನ್ನ ಆಧಿಪತ್ಯವನ್ನು ಮತ್ತೆ ಸ್ಥಾಪಿಸಲು ಹವಣಿಸುತ್ತಿದ್ದ ಚಾಲುಕ್ಯ ೪ನೇ ಸೋಮೇಶ್ವರನು ಅನುಕೂಲ, ಅವಕಾಶಕ್ಕಾಗಿ ಕಾಯುತ್ತಿದ್ದನು. ಬಿಜ್ಜಳನ ಮಕ್ಕಳಾದ ಸಂಕಮ, ಆಹವಮಲ್ಲ, ಸಿಂಘಣ ತಮ್ಮ ತಮ್ಮಲ್ಲಿಯೇ ಅಧಿಕಾರಕ್ಕಾಗಿ ಹೊಡೆದಾಡತೊಡಗಿದರು. ಚಾಲುಕ್ಯ ಮಾಂಡಲಿಕರಾದ ಹಾನಗಲ್ಲ ಕದಂಬರು, ಗುತ್ತರು ಈ ಅನಿಶ್ಚಿತತೆಯ ಪರಿಸ್ಥಿತಿಯ ಲಾಭವನ್ನು ಪಡೆದು ತಮ್ಮ ತಮ್ಮ ಬಲವನ್ನು ಹೆಚ್ಚಿಸಿಕೊಳ್ಳತೊಡಗಿದರು. ಸಿಂದ ಮಲ್ಲಿದೇವನು ಸಂಕಮನ ಬೆಂಬಲಕ್ಕೆ ನಿಂತಿದ್ದನು. ಆದರೆ ಸೋಮೇಶ್ವರನ ಒತ್ತಡದಿಂದಾಗಿ ಸಂಕಮನ ಸ್ಥಾನ ಅಲ್ಲಾಡತೊಡಗಿತು. ಕೊನೆಗೂ

ಸೋಮೇಶ್ವರನು ಸಂಕಮನನ್ನು ಕಿತ್ತೊಗೆದು ಕಲ್ಯಾಣದ ಸಿಂಹಾಸನವನ್ನು ಮತ್ತೆ ಆಕ್ರಮಿಸಿದನು. ಈ ಘಟನೆ ನಡೆದುದು ಸುಮಾರು ಕ್ರಿ.ಶ. ೧೧೮೩ ರ ಕೊನೆಯ ಭಾಗದಲ್ಲಿ[೫೭]. ಬಹುಶಃ ಸಿಂದ ಮಲ್ಲಿದೇವನು ಅನಿವಾರ್ಯವಾಗಿ ಸೋಮೇಶ್ವರನ ಆಧಿಪತ್ಯವನ್ನು ಒಪ್ಪಿಕೊಳ್ಳಲೇಬೇಕಾಯಿತು. ಬೆಳಗುತ್ತಿಯ ಒಂದು ಶಾಸನವು ಈ ಮಾತನ್ನು ಸ್ಪಷ್ಟವಾಗಿ ನಿರೂಪಿಸುತ್ತದೆ.[೫೮] ಏಕೆಂದರೆ ಈ ಶಾಸನವು ಮಲ್ಲಿದೇವನು ಸೋಮೇಶ್ವರನ "ಪಾದಪದ್ಮೋಪಜೀವಿ" ಎಂದು ವರ್ಣಿಸುತ್ತದೆ. ಆದರೂ ಸೋಮೇಶ್ವರನಿಗೆ ಬಹಳ ದಿವಸ ತನ್ನ ಅಧಿಕಾರ ಉಳಿಸಿಕೊಳ್ಳಲಾಗಲಿಲ್ಲ. ಸೇವುಣ ೫ ನೇ ಬಿಲ್ಲಮನ ಹೆಚ್ಚಿದ ಒತ್ತಡದಿಂದಾಗಿ ಅವನು ರಾಜಧಾನಿಯನ್ನು ಬಿಟ್ಟು ತೆರಳಬೇಕಾಯಿತು. ಹಲವಾರು ಶಾಸನಗಳು ಚಾಲುಕ್ಯ ಮತ್ತು ಸೇವುಣರ ನಡುವಿನ ಸೆಣಸಾಟಗಳನ್ನು ಉಲ್ಲೇಖಿಸುತ್ತವೆ. ಇತ್ತ ಕಡೆ ಹೊಯ್ಸಳರು ಒತ್ತಡ ಹೇರುತ್ತಿದ್ದರಿಂದ ಅವರ ಮತ್ತು ಸೇವುಣರ ನಡುವಿನ ಕಾದಾಟಗಳನ್ನು ಶಾಸನಗಳು ಬಣ್ಣಿಸುತ್ತವೆ. ಈ ಹೋರಾಟಗಳಲ್ಲಿ ಎಷ್ಟೋ ಸಲ ಸೋಮೇಶ್ವರನ ಕೈ ಮೇಲಾಯಿತು. ಅವನ ಸಮರ್ಥ ದಂಡನಾಯಕನಾದ ಬರ್ಮ ಅಥವಾ ಬ್ರಹ್ಮ ಎಂಬುವನು ಭಿಲ್ಲಮನನ್ನೆ ಬಗ್ಗು ಬಡೆದನು.[೫೯] ಕಳಚೂರಿ ಸಿಂಘಣನು ಸಹ ಸೋಮೇಶ್ವರನ ಅಧಿಕಾರವನ್ನು ಒಪ್ಪಿಕೊಂಡನು[೬೦] ಇಷ್ಟಾದರೂ ಸೋಮೇಶ್ವರನ ಆಟ ಬಹಳ ನಡೆಯಲಿಲ್ಲ. ಭಿಲ್ಲಮನು ಕಲ್ಯಾಣವನ್ನು ವಶಪಡಿಸಿಕೊಂಡನು. ಆಗ ಸೋಮೇಶ್ವರನು ರಾಜಧಾನಿಯನ್ನು ತೊರೆದು ತನ್ನ ಮಾಂಡಲಿಕನಾದ ಕದಂಬರ ಆಶ್ರಯಕ್ಕೆ ಎಂದು ಬನವಾಸಿಗೆ ತೆರಳಿದನು.[೬೧] ಭಿಲ್ಲಮನು ಇದೇ ಸಮಯ ಸಾಧಿಸಿ ಬೆಳ್ವೊಲ ಪ್ರದೇಶದ ಕಡೆಗೆ ಸಾಗಿ ಹೊಯ್ಸಳ ಬಲ್ಲಾಳನನ್ನು ಸಮರ್ಥವಾಗಿ ಎದುರಿಸಿದನು. ಇಬ್ಬರೂ ಸಮಬಲ ಎದುರಾಳಿಗಳೇ ಆಗಿದ್ದರಿಂದ ಯಾರ ಕೈಯೂ ಮೇಲಾಗಲಿಲ್ಲ. ಇಬ್ಬರೂ ತಾವು ಆಕ್ರಮಿಸಿದ ಪ್ರದೇಶಗಳನ್ನು ಧೃಡಪಡಿಸಿಕೊಳ್ಳಲು ಯತ್ನಿಸಿದರು. ಇದೆಲ್ಲದರ ಪರಿಣಾಮವಾಗಿ ನರ್ಮದೆಯಿಂದ ಕಾವೇರಿವರೆಗೆ ಹಬ್ಬಿದ್ದ ಚಾಲುಕ್ಯ ಸಾಮ್ರಾಜ್ಯವು ಇಬ್ಭಾಗವಾಯಿತು. ತುಂಗಭದ್ರೆಯಿಂದ ಉತ್ತರದ ಪ್ರದೇಶವು ಸೇವುಣರ ವಶವಾಯಿತು; ತುಂಗಭದ್ರೆಯಿಂದ ಕಾವೇರಿ ವರೆಗಿನ ಪ್ರದೇಶವು ಹೊಯ್ಸಳ ರಾಜ್ಯವಾಯಿತು. ಇದೇ ಅವಕಾಶದಲ್ಲಿ ಮೊದಲಿನ ಚಾಲುಕ್ಯ ಸಾಮ್ರಾಜ್ಯದ ಪೂರ್ವಭಾಗದಲ್ಲಿ ಚಾಲುಕ್ಯ ಮಾಂಡಲಿಕರಾದ ಕಾಕತೀಯರೂ ತಮ್ಮ ಪ್ರದೇಶದಲ್ಲಿ ಸ್ವತಂತ್ರರಾಗಿ ಆಳತೊಡಗಿದರು. ಹೀಗಾಗಿ ಮೊದಲಿನ ಅಖಂಡ ಚಾಲುಕ್ಯ ಸಾಮ್ರಾಜ್ಯವು ಮೂರು ಭಾಗಗಳಾಗಿ ವಿಭಜಿಸಲ್ಪಟ್ಟಿತು.[೬೨]

ಈ ಅನಿಶ್ಚಿತತೆಯ ರಾಜಕೀಯ ಪರಿಸ್ಥಿತಿಯಲ್ಲಿ ಸಿಂದ ಮಲ್ಲಿದೇವನ ಪರಿಸ್ಥಿತಿಯೂ ಅನಿಶ್ಚಿತವೇ ಆಯಿತು. ಇತ್ತ ಕಡೆ ಹೊಯ್ಸಳರು, ಅತ್ತ ಕಡೆ ಸೇವುಣರು ಇವರ ನಡುವೆ ಯಾರ

ಆಧಿಪತ್ಯವನ್ನು ಒಪ್ಪಿಕೊಳ್ಳಬೇಕು ಎಂಬುದೇ ತಿಳಿಯದಾಗಿರಬೇಕು. ಎಂತಲೇ ಮಲ್ಲಿದೇವನ ಕೆಲವು ಶಾಸನಗಳು ಯಾವ ಆಳರಸರನ್ನೂ ಹೆಸರಿಸುವುದಿಲ್ಲ.[೬೩] ಇದೇ ಕಾರಣಕ್ಕಾಗಿ ಮಲ್ಲಿದೇವನು ಸ್ವತಂತ್ರನಾಗಿದ್ದನೆಂದು ದೇಸಾಯಿ ದಿನಕರ ರವರು ಊಹಿಸುತ್ತಾರೆ.[೬೪] ಆದರೆ ಅವರೇ ಒಪ್ಪುವಂತೆ ಅವನು ಹೊಯ್ಸಳ ಬಲ್ಲಾಳನ ಅರಸಿಯಾದ ಉಮಾದೇವಿಯ ಹಲವು ದಾಳಿಗಳನ್ನು ಎದುರಿಸಬೇಕಾಯಿತು. ಅವನು ಎಷ್ಟೋ ಸಲ ಉಮಾದೇವಿಯನ್ನು ಸೋಲಿಸಿದನೆಂದು ಅಭಿಪ್ರಾಯಪಡುತ್ತಾರಾದರೂ ಅದಕ್ಕೆ ಸ್ಪಷ್ಟ ಆಧಾರಗಳಿಲ್ಲ.[೬೫] ಆದರೆ ಸಾಮ್ರಾಟನ ಸೈನ್ಯದ ಮುಂದೆ ಮಲ್ಲಿದೇವನಿಗೆ ನಿಲ್ಲಲಾಗಲಿಲ್ಲ. ಕ್ರಿ.ಶ. ೧೨೦೪ರ ಕುರುವರಗದ್ದೆ ಎಂಬಲ್ಲಿ ದೊರೆತ ಒಂದು ಶಾಸನದಲ್ಲಿ ಹೇಳಿದಂತೆ ಕೊನೆಗೆ ಅವನು ವೀರಬಲ್ಲಾಳನ ಪಾದಪದ್ಮೋಪಜೀವಿ ಎಂದು ಒಪ್ಪಿಕೊಳ್ಳಬೇಕಾಯಿತು.[೬೬] ಹೊಯ್ಸಳನ ಎದುರು ನಿಂತಿದ್ದಕ್ಕಾಗಿ ಮಲ್ಲಿದೇವನು ಹೆಚ್ಚಿನ ಬೆಲೆಯನ್ನು ತೆರಬೇಕಾಯಿತು. ಏಕೆಂದರೆ, ಇದರ ಪರಿಣಾಮವಾಗಿ ಅವನು ತನ್ನ ಆಧೀನದಲ್ಲಿದ್ದ ಕೆಲವು ಪ್ರದೇಶಗಳನ್ನು ಕಳೆದುಕೊಳ್ಳಬೇಕಾಯಿತು. ಬಲ್ಲಾಳನು ಸಹ ಈ ಪ್ರದೇಶವನ್ನು ಎಚ್ಚರದಿಂದ ಕಾಯುತ್ತಾ ಹಳವೂರು ಎಂದರೆ ಹಳವೂರನ್ನು ತನ್ನ ಉಪರಾಜಧಾನಿಯನ್ನಾಗಿ ಮಾಡಿಕೊಂಡು ಹೆಚ್ಚು ಕಾಲ ಅಲ್ಲಿಯೇ ಇರುತ್ತಿದ್ದನು.[೬೭]

ಮಲ್ಲಿದೇವನ ಆಳಿಕೆ ಸುಮಾರು ಕ್ರಿ.ಶ. ೧೨೦೫ ರಲ್ಲಿ ಮುಗಿದಿರಬೇಕು. ಅವನ ಕೊನೆಯ ಉಲ್ಲೇಖವಿರುವುದು ಕ್ರಿ.ಶ. ೧೨೦೪ ರಲ್ಲಿ[೬೮]. ಮುಂದೆ ೧೨೦೮ ರ ಒಂದು ಶಾಸನವೊಂದರಲ್ಲಿ ಅವನ ಮಗ ೩ನೇ ಈಶ್ವರದೇವನ ಉಲ್ಲೇಖ ಬರುತ್ತದೆ. ಆದ್ದರಿಂದ ಮಲ್ಲಿದೇವನ ಆಳಿಕೆ ಕ್ರಿ.ಶ. ೧೧೮೫ ರಿಂದ ೧೨೦೫ ರ ವರೆಗೆ ಎಂದು ನಿರ್ಧರಿಸಬಹುದು.

೩ನೇ ಈಶ್ವರದೇವನ ಕಾಲದಿಂದ ಬೆಳಗುತ್ತಿ ಸಿಂದರ ಆಳಿಕೆ ಕೊನೆ ಕೊನೆಗೆ ಸಮೀಪಿಸುತ್ತಿದ್ದರೂ, ಈ ಆಳಿಕೆಯಲ್ಲಿ ಹೆಚ್ಚು ಮಹತ್ವದ ಘಟನೆಗಳು ನಡೆದವು. ಈ ಕಾಲಕ್ಕೆ ಈ ಪ್ರದೇಶದಲ್ಲಿ ಸೇವುಣ ೨ನೇ ಸಿಂಘಣನು ಅತಿ ಪ್ರಬಲನಾಗಿದ್ದು, ಅವನು ಬಲ್ಲಾಳನನ್ನು ಬೆಳ್ವೊಲ ಪ್ರದೇಶದಿಂದ ಹಿಮ್ಮೆಟ್ಟಿಸಲು ಸಮರ್ಥನಾದನು.

೩ನೇ ಈಶ್ವರದೇವನು ತನ್ನ ತಂದೆಯ ಕಾಲದಿಂದಲೂ ಹೊಯ್ಸಳರ ದಾಳಿಗಳ ದುಷ್ಪರಿಣಾಮಗಳನ್ನು ಎದುರಿಸಿ ಈಗ ಸೇಡು ತೀರಿಸಿಕೊಳ್ಳಲು ಹವಣಿಸುತ್ತಿದ್ದನು. ಇದಕ್ಕೆ ಮೊದಲ ಹೆಜ್ಜೆಯಾಗಿ ಅವನು ಹೊಯ್ಸಳ ಅರಸನನ್ನು ಧಿಕ್ಕರಿಸಿ ಸೇವುಣ ಸಿಂಘಣನ ಮೊರೆ ಹೊಕ್ಕನು. ಸಿಂಘಣನಿಗೂ ದಕ್ಷಿಣದ ಗಡಿಯಲ್ಲಿ ಕಾಯಲು ಓರ್ವ ಸಮರ್ಥ ಸಾಮಂತನು ಬೇಕಾಗಿದ್ದನು. ಆದ್ದರಿಂದ ಸಹಜವಾಗಿಯೇ ಅವನು ಈಶ್ವರದೇವನನ್ನು ಪುರಸ್ಕರಿಸಿದನು.

ಚೋದ್ಯವೆಂದರೆ, ಮೇಲೆ ಉಲ್ಲೇಖಿಸಿದ ಕ್ರಿಶ. ೧೨೦೮ರ ಶಾಸನವು[೬೯] ಕುಂತಲ ದೇಶದಲ್ಲಿ ಚಾಲುಕ್ಯರ ನಂತರ ಸಿಂದರು ಆಳಿದರು ಎಂದು ಹೇಳುತ್ತದೆ. ಇದರಿಂದ ಈಶ್ವರದೇವನು ಹೊಯ್ಸಳರನ್ನು ಪೂರ್ಣವಾಗಿ ಕಡೆಗಣಿಸಲು ಯತ್ನಿಸಿದನು ಎಂಬುದು ಸ್ಪಷ್ಟವಾಗುತ್ತದೆ. ಬರಬರುತ್ತ ಸೇವುಣ ರಾಜ್ಯದಲ್ಲಿ ಈಶ್ವರದೇವನ ಪ್ರಭಾವ ಎಷ್ಟು ಹೆಚ್ಚಾಯಿತು ಎಂದರೆ ಅವನು ಸೇವುಣ ರಾಜ್ಯದ ಏಳ್ಗೆಗೆ ಕಾರಣನಾದನು (ಸಿಂಹಣ ರಾಜ್ಯಾಭ್ಯುದಯ ಕಾರಣ). ಎಂಬ ಬಿರುದನ್ನು ಪಡೆದನು.[೭೦]

ಬೆಳಗುತ್ತಿಯು ಹೊಯ್ಸಳ ಮತ್ತು ಸೇವುಣ ರಾಜ್ಯಗಳಿಗೆ ಹೊಂದಿಕೊಂಡು ಆಯ ಕಟ್ಟಿನ ಸ್ಥಳದಲ್ಲಿದ್ದಿತು. ಈ ಪ್ರದೇಶದ ಈಶ್ವರದೇವನು ಸೇವುಣ ಸಿಂಘಣನೊಡನೆ ಕೈ ಜೋಡಿಸಿದ್ದರಿಂದ, ಸಿಂಘಣನಿಗೆ ಹೊಯ್ಸಳ ರಾಜ್ಯದ ಮೇಲೆ ದಾಳಿ ಮಾಡಲು ಅನುಕೂಲವಾಯಿತು. ಅಂದಿನ ರಾಜಕೀಯದಲ್ಲಿ ಈಶ್ವರದೇವನ ಪ್ರಸ್ಥವೂ ಬೆಳೆಯಿತು. ಅವನು ಸಿಂಘಣನ ಆಧಿಪತ್ಯವನ್ನು ಒಪ್ಪಿಕೊಂಡನೆಂದು ಬೆಳಗುತ್ತಿಯ ಒಂದು ಶಾಸನದಿಂದ ತಿಳಿದು ಬರುತ್ತದೆ.[೭೧]

ಈ ಪರಿಸ್ಥಿತಿಯಲ್ಲಿ ಹೊಯ್ಸಳ ಬಲ್ಲಾಳನು ಕೈಕಟ್ಟಿಕೊಂಡು ಕುಳಿತುಕೊಳ್ಳುವಂತಿರಲಿಲ್ಲ. ಶತ್ರುವು ಈಗ ಅವನ ಮನೆ ಬಾಗಿಲಿಗೆ ಬಂದಿದ್ದನು. ಎಚ್ಚರಗೊಂಡ ಅವನು ಸಿಂದ ಈಶ್ವರದೇವನನ್ನು ಮಣಿಸಲು ಕ್ರಮವನ್ನು ಕೈಕೊಳ್ಳಲೇಬೇಕಾಯಿತು. ಇದರ ಒಂದು ಸೂಚನೆಯು ಕ್ರಿಶ. ೧೨೧೬ ರ ಶಾಸನದಲ್ಲಿ ಸಿಗುತ್ತದೆ.[೭೨] ಬಹುಶಃ ಹೊಯ್ಸಳರ ಪರವಾಗಿದ್ದ ಬೇಡರು ಮಾದನಬಾಗೆ ಮೇಲೆ (ಇದು ಸಿಂದರ ಪ್ರದೇಶದಲ್ಲಿದ್ದಿತು) ದಾಳಿ ಮಾಡಿ ದನಗಳನ್ನು ಎತ್ತಿಕೊಂಡು ಹೋಗಲು ಹವಣಿಸಿದರು. ಆಗ ಈಶ್ವರದೇವನ ಪಟ್ಟಸಾಹಣಿ ಚೆಣ್ಣಯ್ಯನು ಹೋರಾಡಿ ರಣಭೂಮಿಯಲ್ಲಿ ಮಡಿದನು. ಈ ವೀರಗಲ್ಲಿನಲ್ಲಿಯ ವರ್ಣನೆಯನ್ನು ನೋಡಿದರೆ, ಹೋರಾಟವು ಭೀಕರವಾಗಿಯೇ ಇದ್ದಿತೆಂದು ತೋರುತ್ತದೆ. ಈಶ್ವರದೇವನ ಡಿಂಗರಿಗ ಅಂದರೆ ನೆಚ್ಚಿನ ಸೇವಕನಾದ ಚೆಣ್ಣಯ್ಯನು ಸ್ವಾಮಿ ಕಾರ್ಯಕ್ಕಾಗಿ ತನ್ನ ದೇಹವನ್ನು ಅರ್ಪಿಸಿದನು ಎಂದು ಶಾಸನವು ಸಾರುತ್ತದೆ. ಕೃತಜ್ಞನಾದ ಇನೇ ಈಶ್ವರದೇವನು ಚೆಣ್ಣಯ್ಯನ ಮಗ ಮತ್ತು ಆತನ ತಮ್ಮ ಯಂಕಯ್ಯನೆಂಬ ಮಕ್ಕಳಿಗೂ ತಲೆ ತಲಾಂತರವಾಗಿ ನಡೆಯುವಂತೆ ದತ್ತಿಯನ್ನು ಹಾಕಿಕೊಟ್ಟನು. ಮಾದನಬಾಗೆ ಅಂದರೆ ಇಂದಿನ ಮಾದನಭಾವಿಯು, ಬೆಳಗುತ್ತಿ ಸಮೀಪದಲ್ಲಿಯೇ ಇದೆ. ಈ ದಾಳಿಯಿಂದ ಪ್ರಯೋಜನವಾಗದಿದ್ದಾಗ ಈ ಸಲ ಸ್ವತಃ ಬಲ್ಲಾಳನೇ ಬೆಳಗುತ್ತಿ ಮೇಲೆ ದಂಡೆತ್ತಿ ಹೋದನು. ಈ ಹೋರಾಟದಲ್ಲಿ ಈಶ್ವರದೇವನ ಅಧಿಕಾರಿಯಾಗಿದ್ದಿರಬಹುದಾದ, ಬೆಳಗುತ್ತಿಯನ್ನು ಆಳುತ್ತಿದ್ದ ಬಂದಣಿಕೆ ಬೊಮ್ಮದೇವನು ಮಡಿದನೆಂದು ಹಿರೇಕೆರೂರು ತಾಲೂಕಿನ ಕೊಡಮಗ್ಗೀ

ಎಂಬಲ್ಲಿ ದೊರೆತ ಶಾಸನದಿಂದ ತಿಳಿದು ಬರುತ್ತದೆ[೭೩]. ಕ್ರಿ.ಶ. ೧೨೧೮ ರಲ್ಲಿ ಬೆಳಗುತ್ತಿ ಮೇಲೆ ಮತ್ತೊಂದು ದಾಳಿ ನಡೆದಾಗ ಬಂದಳಿಕೆ ಬಮ್ಮದೇವನ ಬಂಟನಾದ ಮಲ್ಲಯ್ಯನಾಯಕನು ವೀರಮರಣವನ್ನಪ್ಪಿದನೆಂದು ಅದೇ ತಾಲೂಕಿನ ಎಮ್ಮಿಗನೂರಿನ ಒಂದು ವೀರಗಲ್ಲು ಶಾಸನವು ಹೇಳುತ್ತದೆ.[೭೪] ಈ ಪ್ರದೇಶದಲ್ಲಿ ಹಲವಾರು ವೀರಗಲ್ಲುಗಳು ದೊರೆತುದ್ದಿದರಿಂದ ಕಾದಾಟಗಳು ಮೇಲಿಂದ ಮೇಲೆ ನಡೆಯುತ್ತಿದ್ದವೆಂದು ವಿದಿತವಾಗುತ್ತದೆ.

ಈ ಘಟನೆಗಳು ಮತ್ತು ಈಶ್ವರದೇವನ ಪ್ರಭಾವವು ದಿನ ದಿನಕ್ಕೆ ಹೆಚ್ಚುತ್ತಿರುವುದನ್ನು ಕಂಡು ಈಶ್ವರದೇವನು ತನ್ನ ಆಳರಸನಾದ ಸಿಂಘಣನನ್ನೇ ಧಿಕ್ಕರಿಸಿ ಸ್ವತಂತ್ರನಾಗಬಯಸಿದನೆಂಬ ಸೂಚನೆಯು ಶಾಸನದಿಂದ ತಿಳಿದು ಬರುತ್ತದೆ.[೭೫] ಕ್ರಿ.ಶ. ೧೨೧೯ರ ಸಿಂಘಣ ಆಳಿಕೆಯ ಒಂದು ಶಾಸನವು[೭೬] ಸಿಂಘಣ ಈಶ್ವರದೇವನು ಸಾಂತಳಿಗೆ ನಾಡಿನ ನಾಯಕರ ಬೆಂಬಲ ಪಡೆದು ೧೦,೦೦೦ ಸೈನಿಕರು ಮತ್ತು ೧೦೦೦ ಕುದುರೆಗಳ ಬಲಾಢ್ಯ ಸೈನ್ಯವನ್ನು ತೆಗೆದುಕೊಂಡು ಬನವಾಸಿ ಪ್ರಾಂತದ ನಾಗರಖಂಡ ಪ್ರಾಂತದಲ್ಲಿಯ ಅಬ್ಬಲೂರನ್ನು ಮುತ್ತಿದನೆಂದು ಹೇಳುತ್ತದೆ. ಅಲ್ಲಿಯ ಅಧಿಕಾರಿಯಾದ ಬೀರಗೌಡನ ಹಲವಾರು ಬಂಟರು ಮೃತರಾದರೆಂದು ಈ ಶಾಸನ ಬಣ್ಣಿಸುತ್ತದೆ. •[೭೭]ಈಶ್ವರದೇವನು ಬಂದಣಿಕೆ ಬೊಮ್ಮದೇವನ ಸಹಾಯದಿಂದ ಕ್ರಿ.ಶ. ೧೧೨೧ ರಲ್ಲಿ ಸಿಂಘಣನ ಅಧಿಕಾರಿಗಳ ವಿರುದ್ಧ ಮತ್ತೊಮ್ಮೆ ಮುಳಗುಂದದ ಮೇಲೆ ದಾಳಿ ಮಾಡಿದನೆಂದು ಹಿರೇಕೆರೂರು ತಾಲೂಕಿನ ಹಂಸಭಾವಿಯಲ್ಲಿಯ ಒಂದು ವೀರಗಲ್ಲಿನಿಂದ ಸೂಚಿತವಾಗುತ್ತದೆ.[೭೮] ಈ ಮುಳಗುಂದವು ಇದೇ ತಾಲೂಕಿನ ಚಿನ್ನಮುಳಗುಂದ ಎಂಬ ಊರು. ಕ್ರಿ.ಶ. ೧೨೨೩ ರಲ್ಲಿ ಈಶ್ವರದೇವನು ಇದೇ ಪ್ರದೇಶದ ಚಿಕ್ಕಕೆರೆಯೂರಿನ ಮೇಲೆ ದಾಳಿ ಮಾಡಿದನು.[೭೯] ಇನ್ನೊಂದು ಶಾಸನವಂತೂ ಈಶ್ವರದೇವನು ಸೇವುಣ ಅರಸರ ಸೈನ್ಯವನ್ನು ಸೂರೆಗೊಂಡನೆಂದು ಹೇಳುತ್ತದೆ.[೮೦] ಈ ಘಟನೆಗಳಿಂದ ಈಶ್ವರದೇವನು ಸೇವುಣ ಆಧಿಪತ್ಯ ತೊರೆದು ಸ್ವತಂತ್ರನಾಗಲು ತೀವ್ರವಾಗಿ ಸೆಣಸುತ್ತಿದ್ದನು ಎಂಬುದು ಸ್ಪಷ್ಟವಾಗುತ್ತದೆ. ಆದರೆ ಅವನ ಆಸೆಯೂ ಕೈಗೂಡಲಿಲ್ಲ ಎಂಬುದು ಅಷ್ಟೇ ಸ್ಪಷ್ಟವಿದೆ.

ಒಟ್ಟಿನಲ್ಲಿ ಈಶ್ವರದೇವನ ಆಳಿಕೆಯು ಮಹತ್ವದ ಘಟನೆಗಳಿಂದ ಕೂಡಿ ಅವನು ಸ್ಥಾನಮಾನಗಳಲ್ಲಿ ಏರಿಳಿತಗಳನ್ನು ಕಂಡನು. ಆದರೂ ರಾಜಕೀಯದಲ್ಲಿ ಧೃಡವಾದ ಮುದ್ರೆಯನ್ನೊತ್ತಿದನು ಎಂದು ಹೇಳಬಹುದು. ಇವನಿಗೆ ಸೋವಲೆ ಮತ್ತು ಕಾಳಲೆ ಎಂಬ ಹೆಂಡಂದಿರಿದ್ದರು.[೮೧] ಚಟ್ಟಲೆ ಎಂಬ ಇನ್ನೊರ್ವ ಹೆಂಡತಿಗೆ ಕೇಶವದೇವ ಎಂಬ ಮಗ ಹುಟ್ಟಿದ.[೮೨] ಇವನ ಆಳಿಕೆಯು ಸುಮಾರು ಕ್ರಿ.ಶ. ೧೨೦೫ರಲ್ಲಿ ಆರಂಭವಾಯಿತೆಂದು ಹೇಳಿದೆ.

ಕ್ರಿ.ಶ. ೧೨೨೮ ರ ಒಂದು ಶಾಸನದಿಂದಲೂ ಅವನು ಆಗ ಆಳುತ್ತಿದ್ದನೆಂದು ಸೂಚಿತವಾಗುತ್ತದೆ.[೮೩] ಆಗ ಅವನ ಮಗ ಕೇಶವದೇವನು ಕ್ರಿ.ಶ. ೧೨೩೨ ರಲ್ಲಿ ಬೆಳಗುತ್ತಿಯಲ್ಲಿ ಆಳುತ್ತಿದ್ದನೆಂದು ಒಂದು ಶಾಸನ ಹೇಳುತ್ತದೆ.[೮೪] ಈಶ್ವರದೇವನ ಆಳಿಕೆ ಈ ಎರಡು ವರ್ಷಗಳ ನಡುವೆ ಮುಗಿದಿರಬೇಕು. ಬಹುಶಃ ಕ್ರಿ.ಶ. ೧೨೩೦ ರಲ್ಲಿ ಮುಗಿದಿರಬೇಕು ಎಂದು ಊಹಿಸಬಹುದು. ಈಶ್ವರದೇವನ ಕಾಲವು ಕ್ರಿ.ಶ. ೧೨೦೫ ರಿಂದ ೧೨೩೦ ಎಂದು ನಿರ್ಧರಿಸಬಹುದು.

ಈಶ್ವರದೇವನ ನಂತರ ಬಂದ ಕೇಶವದೇವನ ಆಳಿಕೆ ಚಿಕ್ಕದಾಗಿತ್ತಲ್ಲದೇ ಮಹತ್ವಪೂರ್ಣವಾಗಿರಲಿಲ್ಲ. ಅವನ ಕಾಲದಲ್ಲಿ ನಡೆದ ಒಂದೇ ಒಂದು ಘಟನೆ ಎಂದರೆ, ಅವನು ಸೇವುಣ ದಂಡನಾಯಕನಾದ ಹೊನ್ನಬೊಮ್ಮಿಸೆಟ್ಟಿಯನ್ನು ಎದುರಿಸಿದುದು. ಅದರಿಂದ ಯಾವ ಪ್ರತಿಫಲವೂ ಸಿಗಲಿಲ್ಲ. ಅವನ ಆಳಿಕೆಯು ಬೇಗನೆ ಮುಗಿದಿರಬೇಕು. ಇದೇ ಶಾಸನದ ಆಧಾರದ ಮೇಲಿಂದ ಕೇಶವದೇವನು ಹಾನಗಲ್ಲ ಕದಂಬ ವಂಶದ ಮಲ್ಲಿದೇವನೊಡನೆ ಸೇರಿಕೊಂಡು ಸೇವುಣ ಅರಸನ ವಿರುದ್ಧ ದಂಗೆ ಎದ್ದು ಸ್ವತಂತ್ರನಾಗಲು ಹವಣಿಸಿದನೆಂದು ದೇಸಾಯಿ ದಿನಕರ ಅಭಿಪ್ರಾಯಪಡುತ್ತಾರೆ.[೮೫] ಆದರೆ ಈ ಊಹೆಗೆ ಯಾವುದೇ ಆಧಾರಗಳಿಲ್ಲ. ಸಿಂದ ಈಶ್ವರದೇವ ಮತ್ತು ಕೇಶವದೇವನ ಈ ಚಟುವಟಿಕೆಗಳನ್ನು ನಿಲ್ಲಿಸಲು ಸಿಂಘಣದೇವನು ಮಾಯಿದೇವ, ಹೊನ್ನಬೊಮ್ಮಸೆಟ್ಟಿಯಂತಹ ಬಲಿಷ್ಠ ನಾಯಕರನ್ನು ಬನವಾಸಿ ಪ್ರದೇಶದ ಮೇಲೆ ನೇಮಿಸಿ ಬೆಳಗುತ್ತಿ ಸಿಂದರ ಆಳಿಕೆಗೆ ಕೊನೆ ಹಾಡಿದನೆಂದು ಹೇಳಬಹುದು. ಕೇಶವದೇವನ ಆಳಿಕೆ ಯಾವ ವರ್ಷ ಮುಗಿಯಿತು ಎಂದು ಖಚಿತವಾಗಿ ನಿರ್ಧರಿಸಲಾಗದು. ಪ್ರಬಲನಾದ ಸೇವುಣ ೨ನೇ ಸಿಂಘಣನು ತನ್ನ ಸಮರ್ಥ ದಂಡನಾಯಕರ ಮೂಲಕ ಅವನನ್ನು ಬಗ್ಗು ಬಡೆದುದರಿಂದ ಅವನು ಬಹುಕಾಲ ಅಧಿಕಾರದಲ್ಲಿ ಉಳಿದಿರಲಾರನು. ಸೇವುಣ ದಂಡನಾಯಕ ಹೊನ್ನಬೊಮ್ಮಿಸೆಟ್ಟಿಯಿಂದ ಸೋಲನ್ನು ಅನುಭವಿಸಿದ ನಂತರ ಅವನ ಆಳಿಕೆ ಮುಂದುವರೆದಿರಲಾರದು. ಈ ಘಟನೆ ನಡೆದದ್ದು ಕ್ರಿ.ಶ. ೧೨೩೨ ರಲ್ಲಿ ಆಗಲೇ ಅವನು ಅಧಿಕಾರವನ್ನು ಕಳೆದುಕೊಂಡಿರಬೇಕು, ಆದ್ದರಿಂದ ಅವನ ಆಳಿಕೆಯ ಕಾಲ ಕ್ರಿ.ಶ. ೧೨೩೦ ರಿಂದ ೧೨೩೩ ಎಂದು ನಿರ್ಧರಿಸಬಹುದು.

ಕೇಶವದೇವನ ನಂತರ ಬೀರದೇವನೆಂಬವನೊಬ್ಬನು ಆಳಿದನೆಂದು ಅವನು ಕೇಶವದೇವನ ಮಗನಾಗಿದ್ದಿರಬಹುದೆಂದು ದೇಸಾಯಿ ದಿನಕರ ಊಹಿಸಿ ಸಿಂದ ಮನೆತನವನ್ನು ಇನ್ನೊಂದು ತಲೆಮಾರಿನವರೆಗೆ ಮುಂದೆ ಒಯ್ಯುತ್ತಾರೆ.[೮೬] ಇದಕ್ಕೆ ಅವರಿಗಿದ್ದ ಆಧಾರಗಳೆಂದರೆ,

ಬೀರದೇವನು ಬೆಳಗುತ್ತಿ ಪ್ರದೇಶವನ್ನಾಳುತ್ತಿದ್ದನೆಂದು ಹೇಳುವ ಈ ಪ್ರದೇಶದ ಕೆಲವು ವೀರಗಲ್ಲುಗಳು. ಆದರೆ ಅವನು ಸಿಂದ ವಂಶದವನೆಂಬ ಬಗ್ಗೆಯೇ ಸಂದೇಹವಿದೆ. ಸಿಂದ ವಂಶದ ಸಾಮಂತರೂ ನಾವು ಮೇಲೆ ನೋಡಿದ ಬಿರುದುಗಳು ಯಾವವೂ ಇವನಿಗಿಲ್ಲ. ಇವನಿಗೆ ಸಂಬಂಧಿಸಿದ ಸಿಂದ ವಂಶದ ಉಲ್ಲೇಖವೂ ಇಲ್ಲ. ಮೇಲಾಗಿ ಅವನು ಬಿಲ್ಲೇಶ್ವರದೇವ ಪಾದಾರಾದಕ ಎಂದು ಕರೆಯಲ್ಪಟ್ಟಿದ್ದಾನೆ.[೮೭] ಆದರೆ ನಮಗೆ ತಿಳಿದಂತೆ ಸಿಂದ ಸಾಮಂತರು ಮಾಳತಿದೇವಿಲಬ್ಧವರಪ್ರಸಾದ ಎಂದು ಕರೆದುಕೊಂಡಿದ್ದರು. ಅವನು ಸೇವುಣ ದಂಡನಾಯಕನೊಡನೆ ಹೋರಾಡಿದನೆಂಬ ಉಲ್ಲೇಖಗಳಿದ್ದರೂ ಸಿಂದ ವಂಶದೊಡನೆ ಅವನ ಸಂಬಂಧವನ್ನು ಕಲ್ಪಿಸಲು ಯಾವುದೇ ಆಧಾರಗಳಿಲ್ಲವೆಂದು ಬಿ.ಆರ್. ಗೋಪಾಲ್ ತೋರಿಸಿಕೊಟ್ಟಿದ್ದಾರೆ.[೮೮] ಅವರ ವಾದವು ಸಮರ್ಥನೀಯವೆಂದು ನಮಗೆನಿಸುತ್ತದೆ. ಸಿಂದರ ಆಳಿಕೆ ಈ ಹೊತ್ತಿಗೆ ಮುಗಿದರೂ ನಂತರ ಕೆಲ ವರ್ಷಗಳ ವರೆಗೆ ಅಲ್ಲಲ್ಲಿ ಸಿಂದ ಮನೆತನಕ್ಕೆ ಸೇರಿದವರ ಹೆಸರುಗಳು ದೊರೆಯುತ್ತವೆ. ದೇಸಾಯಿ ದಿನಕರರವರು ಸೆವುಣ ರಾಮಚಂದ್ರನ ಆಳಿಕೆಯಲ್ಲಿ ನಾಳ್‌ಪ್ರಭು ಆಗಿದ್ದ ಮಧುಕರಯ್ಯ ಎಂಬುವನನ್ನು ಮತ್ತು ಕ್ರಿ.ಶ. ೧೩೧೨ರ ಒಂದು ವೀರಗಲ್ಲಿನಲ್ಲಿ ಕಾಣಸಿಗುವ ಕಾಮಯ್ಯ ಎಂಬುವನನ್ನು ಹೆಸರಿಸುತ್ತಾರೆ. ಇವರಿಬ್ಬರೂ ಸಿಂದ ಮನೆತನದ ಬಿರುದಾವಳಿಗಳನ್ನು ಹೊಂದಿದ್ದರು. ಕಾಲದ ಅಂತರದಿಂದಾಗಿ ಅವರನ್ನು ಬೆಳಗುತ್ತಿಯ ಅಥವಾ ಇತರ ಸಿಂದ ಮನೆತನಗಳಿಗೆ ಜೋಡಿಸುವುದು ಸರಿಯಾಗದು. ದೇಸಾಯಿ ದಿನಕರರವರು ಈ ವಿಷಯವನ್ನು ಈಗಾಗಲೇ ಪ್ರಸ್ತಾಪಿಸಿದ್ದರಿಂದ ಮತ್ತು ಸಿಂದ ಮನೆತನದೊಡನೆ ಅವರ ಸಂಬಂಧ ಕಲ್ಪಿಸುವುದು ಸಾಧ್ಯವಿಲ್ಲದ್ದರಿಂದ ಆ ವಿವರಗಳನ್ನು ನಾವು ಇಲ್ಲಿ ಚರ್ಚಿಸಿಲ್ಲ.

**ವಂಶಾವಳಿ**

೧ನೇ ಚಟ್ಟರಸ (ಕ್ರಿ.ಶ. ೧೦೨೦ ರಿಂದ ೧೦೪೫) = ದೋರಬ್ಬರಸಿ

ಜೋಗರಸ (ಕ್ರಿ.ಶ. ೧೦೪೫ ರಿಂದ ೧೦೬೦)

೨ನೇ ಚಟ್ಟರಸ (ಕ್ರಿ.ಶ. ೧೦೬೦ ರಿಂದ ೧೧೦೦)

೧ನೇ ಈಶ್ವರದೇವ (೧೧೦೦ ರಿಂದ ೧೧೨೦)

- ಮಾಚರಸ (ಚಟ್ಟಲದೇವಿ) (೧೧೨೦ -೧೧೪೦)
- ೨ನೇ ಮಲ್ಲಿದೇವ (೧೧೪೦ ರಿಂದ ೧೧೫೦)
- ಅಯ್ಯರಸ

ರಾಯರಸ = ಮೂಚಲದೇವಿ

೨ನೇ ಈಶ್ವರದೇವ (ಕ್ರಿ.ಶ. ೧೧೫೧–೧೧೮೫)

೨ನೇ ಮಲ್ಲಿದೇವ ೧೧೮೫ ರಿಂದ ೧೨೦೫

೩ನೇ ಈಶ್ವರದೇವ (ಕ್ರಿ.ಶ. ೧೨೦೫ ರಿಂದ ೧೨೩೦) (ಚಟ್ಟಲೆ)

ಇನ್ನಿಬ್ಬರು ಮಡದಿಯರು ಕಾಳಲೆ, ಸೋಹಲೆ

ಕೇಶವದೇವ (೧೨೩೨)

## ೨ – ಯಲಬುರ್ಗಿ ಸಿಂದರು

ಬೆಳಗುತ್ತಿ ಸಿಂದರಂತೆ ಯಲಬುರ್ಗಿ ಸಿಂದರು ಕರ್ನಾಟಕದ ರಾಜಕೀಯದಲ್ಲಿ ಪ್ರಮುಖ ಪಾತ್ರವಹಿಸಿದರು. ಅವರೂ ಹೆಚ್ಚು ಕಡಿಮ ಬೆಳಗುತ್ತಿ ಸಿಂದರ ಸಮಕಾಲಿನರೇ. ಒಂದೇ ಒಂದು ವಿಶೇಷವೆಂದರೆ ಯಲಬುರ್ಗಿ ಸಿಂದರು ಬಹುತೇಕವಾಗಿ ಕಲ್ಯಾಣ ಚಾಲುಕ್ಯರಿಗೆ ನಿಷ್ಟರಾಗಿ ಉಳಿದುಕೊಂಡರು.[೮೯] ಅವರು ಸಮಯಕ್ಕೆ ತಕ್ಕಂತೆ ಆಳರಸರನ್ನು ಬದಲಿಸುವ ಪ್ರಯತ್ನ ಮಾಡಲಿಲ್ಲ. ಚಾಲುಕ್ಯ ಅರಸರ ಅನುವರ್ತಿಗಳಾಗಿ ರಾಜಕೀಯ ವ್ಯವಹಾರಗಳಲ್ಲಿ ಭಾಗವಹಿಸಿದ್ದಲ್ಲದೇ ಅಂದಿನ ಧರ್ಮ, ಸಾಹಿತ್ಯ ಕಲೆಗಳ ಪೋಷಕರಾಗಿಯೂ ಹೆಸರನ್ನು ಪಡೆದರು.

ಒಂದು ಗಮನಿಸಬೇಕಾದ ಅಂಶ ಎಂದರೆ ಬೆಳಗುತ್ತಿ ಅಥವಾ ಬಾಗಡಗೆಯ ಸಿಂದರ ಶಾಸನಗಳಂತೆ ಇವರ ಶಾಸನಗಳು ಅತೀ ಪುರಾತನ ಕಾಲದ ಪೂರ್ವಜರನ್ನು

ಹೆಸರಿಸುವುದಾಗಲಿ, ಅಥವಾ ನಿಡುದೊಳ ಸಿಂದನ ಐತಿಹ್ಯವನ್ನು ನಿರೂಪಿಸುವುದಾಗಲಿ ಮಾಡಿಲ್ಲ. "ಸಿಂದ ವಂಶೋದ್ಭವ" ಎಂದಷ್ಟೆ ತಮ್ಮನ್ನು ಕರೆದುಕೊಂಡಿದ್ದಾರೆ. ಬೆಳಗುತ್ತಿ ಸಿಂದರಂತೆ ಇವರು ರಾಜಕೀಯದಲ್ಲಿ ಬದಲಾವಣೆಗಳನ್ನು ಗಮನಿಸಿ ವಸ್ತುಸ್ಥಿತಿಗೆ ತಕ್ಕ ಕ್ರಮವನ್ನು ಕೈಕೊಂಡರು. ಚಾಲುಕ್ಯ ೩ನೇ ತೈಲನನ್ನು ಬದಿಗೊತ್ತಿ ಚಾಲುಕ್ಯ ಪಟ್ಟವನ್ನು ಆಕ್ರಮಿಸಿದ ಕಳಚುರಿ ಬಿಜ್ಜಳನೊಡನೆ ಇವರು ವೈವಾಹಿಕ ಸಂಬಂಧವನ್ನು ಬೆಳೆಸಿದರು. ಇದರಿಂದ ಇವರ ಪ್ರತಿಷ್ಠೆಯೂ, ಅಧಿಕಾರವೂ ಹೆಚ್ಚಿದವು. ಸಮಕಾಲಿನ ರಾಜಕೀಯ ಆಗುಹೋಗುಗಳಲ್ಲಿ ಇವರು ಪ್ರಮುಖ ಪಾತ್ರವಹಿಸಿದರು. ಈ ಎಲ್ಲ ವಿಷಯಗಳನ್ನು ಸಂದರ್ಭಾನುಸಾರವಾಗಿ ಈ ಮುಂದೆ ಚರ್ಚಿಸಲಾಗುವುದು.

ನಿಡುದೊಳ ಸಿಂದನನ್ನು ಹೆಸರಿಸದಿರುವುದರಿಂದ ಇವರು ಪೂರ್ಣವಾಗಿ ಬೇರೆಯವರಂದೆ ನಿರ್ಧರಿಸಲಾಗದು. ಇವರು ಮತ್ತು ಇತರ ಸಿಂದರು ಆಳಿದ ಪ್ರದೇಶಗಳಲ್ಲಿ ಕೆಲವಾದರೂ ಒಂದೇ ಇರುತ್ತವೆ. ಹೀಗಾಗಿ ಇವರು ಮೂಲ ಸಿಂದ ವಂಶಕ್ಕೆ ಸೇರಿದವರೆಂದು ಹೇಳಲು ಯಾವ ಅಭ್ಯಂತರವೂ ಇಲ್ಲ.

ಈ ಮನೆತನದ ಮೂಲ ಪುರಷನ ಬಗ್ಗೆ ಹೆಚ್ಚಿನ ಗೊಂದಲಗಳಿಲ್ಲ. ಬೆಂಚಮಟ್ಟಿ ಶಾಸನದಲ್ಲಿ ಉಲ್ಲೇಖಿಸಿದಂತೆ ಇವರ ಇತಿಹಾಸ ನೇರವಾಗಿ ೭ ಜನ ಅಣ್ಣತಮ್ಮಂದಿರಿಂದ ಆರಂಭಗೊಳ್ಳುತ್ತದೆ.[೯೦] ಆದರೂ ಇವರ ತಂದೆ ಯಾರಿರಬಹುದು, ಇವರು ಯಾವ ಮನೆತನಕ್ಕೆ ಸೇರಿದವರು ಎಂಬ ಬಗ್ಗೆ ಊಹಾಪೂಹಾಗಳು ಇರುವುದರಿಂದ ಅವುಗಳನ್ನು ಇಲ್ಲಿ ಸಂಕ್ಷಿಪ್ತವಾಗಿ ಪರಿಶೀಲಿಸಬಹುದು. ಈ ವಿಷಯದ ಮೇಲೆ ಹೆಚ್ಚಿನ ಅಭ್ಯಾಸ ಮಾಡಿದ ದೇಸಾಯಿ ದಿನಕರ ಅವರು ಯಲಬುರ್ಗಿ ಸಿಂದರು ಭೈರನಮಟ್ಟಿ ಶಾಸನದಲ್ಲಿ ವರ್ಣಿತರಾದ[೯೧] ಬಾಗಡಗೆಯ ಸಿಂದ ವಂಶದವರಿಂದ ಬಂದವರೆಂದು ಹೇಳುತ್ತಾರೆ.[೯೨] ಅವರ ಹೇಳಿಕೆಯಂತೆ ಬಾಗಡಗೆಯ ಸಿಂದರ ಪ್ರದೇಶವಾದ ಬಾಗಡಗೆ-೭೦ ಪ್ರಾಂತವನ್ನು ಯಲಬುರ್ಗಿ ಸಿಂದರು ಆಳುತ್ತಿದ್ದರು. ಬಾಗಡಗೆಯ ಸಿಂದರು ಯಲಬುರ್ಗಿ ಸಿಂದರ ಹಿಂದಿನವರು. ಭೈರನಮಟ್ಟಿ ಶಾಸನದಲ್ಲಿ ಬರುವ ನಾಗಾದಿತ್ಯ ಮತ್ತು ಅವನ ಮಗ ಪೊಲಸಿಂದರು ಬೆಂಚಮಟ್ಟಿ ಶಾಸನದಲ್ಲಿ ಬರುವ ಯಲಬುರ್ಗಿ ಸಿಂದ ಮನೆತನದ ಆಚುಗಿ ಮತ್ತು ಅವನ ಸಹೋದರರು ಸಮಕಾಲೀನರಾಗಿದ್ದು, ನಾಗಾದಿತ್ಯನೇ ಈ ೭ ಸಹೋದರರ ತಂದೆ ಎಂದು ಇವರ ಮತ್ತು ಪೊಲಸಿಂದನ ತಾಯಿಂದಿಯರು ಮಾತ್ರ ಬೇರೆ ಬೇರೆ ಇದ್ದರೆಂದು ಹೇಳುತ್ತಾರೆ ಮತ್ತು ನಾಗಾದಿತ್ಯನು ಪೊಲಸಿಂದನಿಗೆ ಆನುವಂಶಿಕವಾದ ಬಾಗಡಗೆಯ ಪ್ರದೇಶವನ್ನು ಕೊಟ್ಟು ಪೋಲಸಿಂದನಿಗೂ ಮತ್ತು ತಾನೇ ಗಳಿಸಿದ ಪ್ರಾಂತಗಳನ್ನು ಆಚುಗಿ ಮತ್ತು ಸಹೋದರರಿಗೂ ಕೊಟ್ಟನೆಂದು ಊಹಿಸುತ್ತಾರೆ. ಹೀಗೆ ಯಲಬುರ್ಗಿ ಸಿಂದ

ಮನೆತನದ ಮೊದಲ ಸಾಮಂತರ ೭ ಸಹೋದರರಲ್ಲಿ ಹಿರಿಯನಾದ ೧ನೇ ಆಚುಗಿ ಎಂದಿದ್ದರೂ ನಾಗಾದಿತ್ಯನೇ ಯಲಬುರ್ಗಿ ಮನೆತನದ ಮೂಲಪುರುಷನೆಂದು ಹೇಳುತ್ತಾರೆ. ಆದರೆ ಈಗಾಗಲೇ ನೋಡಿದಂತೆ ನಾಗಾದಿತ್ಯನ ಕಾಲ ಕ್ರಿ.ಶ. ೧೦೩೩-೩೪. ಈ ಕೆಳಗೆ ನೋಡಿದಂತೆ ೧ನೇ ಆಚುಗಿ ಕಾಲ ಕ್ರಿ.ಶ. ೧೦೭೬. ಇವರು ತಂದೆ ಮಕ್ಕಳಾಗಿದ್ದರೆ, ಈ ಕಾಲದ ಅಂತರವನ್ನು ವಿವರಿಸುವುದು ಕಷ್ಟ. ಈ ಹೇಳಿಕೆಗಳಿಗೆ ನಿಶ್ಚಿತವಾದ ಆಧಾರಗಳಿಲ್ಲದಿರುವುದರಿಂದ ಕೇವಲ ಊಹಾಪೋಹಗಳೆಂದೇ ಹೇಳಬೇಕಾಗುತ್ತದೆ.

ಮೇಲೆ ನೋಡಿದಂತೆ ರಂಜೋಲ ಶಾಸನ[೩] ೭ ಜನ ಸಹೋದರರನ್ನು ಹೆಸರಿಸುತ್ತದೆ. ಶಾಸನದಲ್ಲಿ ೪ ಮನೆತನಗಳ ಹೆಸರಿದ್ದೂ, ಅದರಲ್ಲಿ ಯಲಬುರ್ಗಿ ಸಿಂದ ಮನೆತನದ ಹೆಸರಿಲ್ಲ ಎಂಬುದು ಗಮನಾರ್ಹವಾಗಿದೆ. ಬಿ.ಆರ್. ಗೋಪಾಲ ರವರ ತರ್ಕದ ಪ್ರಕಾರ ರಂಜೋಲ ಶಾಸನ ಕಾಲಕ್ಕಾಗಲೇ ಬಾಗಡಗೆಯ ಸಿಂದರು ಅಸ್ತಂಗತರಾಗಿದ್ದರಿಂದ, ಯಲಬುರ್ಗಿ ಸಿಂದರನ್ನೇ ಬಾಗಡಗೆಯ ಸಿಂದರೆಂದು ಉಲ್ಲೇಖಿಸಬಹುದು.[೪] ಆದರೆ ಈ ತರ್ಕಕ್ಕೆ ಶಾಸನಗಳಲ್ಲಿ ಯಾವ ಆಸ್ಪದ ಇಲ್ಲ.




ಇವರೆಲ್ಲರ ತಂದೆ ಯಾರು ಎಂಬುದನ್ನು ಶಾಸನಗಳು ವಿವರಿಸುವುದಿಲ್ಲ. ಆದ್ದರಿಂದ ಯಲಬುರ್ಗಿ ಸಿಂದ ಮನೆತನದ ಇತಿಹಾಸವು ಆಚುಗಿ ಅಥವಾ ೧ನೇ ಆಚುಗಿಯಿಂದಲೇ ಆರಂಭಗೊಳ್ಳುತ್ತದೆ. ಹಾಗೇ ನೋಡಿದರೆ ೭ ಜನ ಸಹೋದರರಲ್ಲಿ ಮೊದಲನೆಯವನಾದ ೧ ಆಚುಗಿಯನ್ನು "ಆದಿ ಮಂಡಲಿಕ" ಎಂದು ಕರೆಯಲಾಗಿದೆ. ಅಂದರೆ ಸಿಂದ ವಂಶದ ಸಾಮಂತಿಕೆ ಆರಂಭವಾದದ್ದು ಇವನಿಂದಲೇ ಎಂಬುದು ಸ್ಪಷ್ಟವಾಗುತ್ತದೆ. ಇವರ ತಂದೆ ಅವನು ಯಾರೇ ಇದ್ದರೂ ಯಾವುದೇ ಅಧಿಕಾರದಲ್ಲಿರದೇ ಇದ್ದ ಕಾರಣ ಅವನ ಹೆಸರು ಎಲ್ಲಿಯೂ ಉಕ್ತವಾಗಿಲ್ಲವೆಂದು ಗ್ರಹಿಸಬಹುದು.[೫]

ಈ ಮನೆತನದ ವಂಶಾವಳಿ ರಚಿಸುವಲ್ಲಿ ಹೆಚ್ಚಿನ ತೊಡಕುಗಳಿಲ್ಲ. ಕ್ರಿ.ಶ. ೧೧೮೦ ರ ರೋಣ ಶಾಸನವು ಈ ಮನೆತನದ ಇಡೀ ವಂಶಾವಳಿಯನ್ನು ಈ ರೀತಿಯಾಗಿ ನಿರೂಪಿಸುತ್ತದೆ.




ಕ್ರಿ.ಶ. ೧೧೮೭ ಬೆಂಚಮಟ್ಟಿ ಶಾಸನವು ಒಂದಿಷ್ಟು ಹೆಚ್ಚಿನ ಮಾಹಿತಿಯನ್ನು ಒದಗಿಸುತ್ತದೆ. ಅದೇನೆಂದರೆ, ೨ನೇ ಆಚುಗಿಯ ಮಕ್ಕಳಾದ ಪೆರ್ಮ ಮತ್ತು ೨ನೇ ಚಾವುಂಡ ಇವರು ಬೇರೆ ಬೇರೆ ತಾಯಂದಿಯರಿಂದ ಹುಟ್ಟಿದ್ದರು. ಪೆರ್ಮನು ಮಹಾದೇವಿ ಮತ್ತು ಚಾವುಂಡನು ಚಂದಲದೇವಿ ಎಂಬವರಿಂದ ಹುಟ್ಟಿದ್ದರೆಂದು ಶಾಸನವು ಹೇಳುತ್ತದೆ.[೯೭] ಮೇಲೆ ತೋರಿಸಿದ ವಂಶಾವಳಿಯೇ ಇತರ ಶಾಸನಗಳಲ್ಲಿಯೂ ಕಾಣಸಿಗುತ್ತದೆ.

ಈ ಸಾಮಂತರ ಆಳಿಕೆಯ ಕಾಲಗಣನೆಯಲ್ಲಿಯೂ ವಿಶೇಷ ತೊಡಕುಗಳಿಲ್ಲ. ಈ ಮನೆತನದ ಮೊದಲನೆಯವನಾದ ೧ನೇ ಆಚುಗಿ ಚಾಲುಕ್ಯ ೬ನೇ ವಿಕ್ರಮಾದಿತ್ಯನ ನೆಚ್ಚಿನ ಬಂಟನಾಗಿದ್ದನೆಂದು (ವಿಕ್ರಮಾದಿತ್ಯನ ಕಟ್ಟಿದಲಗು) ಅವನ ಮಗ ಭೂಲೋಕಮಲ್ಲ ಪೆರ್ಮಾಡಿದೇವನು ಕ್ರಿ.ಶ. ೧೦೮೩ ರಲ್ಲಿ ಕಿಸುಕಾಡು-೭೦ ಮುಂತಾದ ಪ್ರಾಂತಗಳನ್ನು ಆಳುತ್ತಿದ್ದನೆಂದು ಹೇಳಿದೆ. ಅಂದರೆ ಆಚುಗಿಯು ೬ನೇ ವಿಕ್ರಮಾದಿತ್ಯನ ಆಳಿಕೆಯ ಆರಂಭ ಕಾಲದಲ್ಲಿ ಅಥವಾ ಬಿ.ಆರ್. ಗೋಪಾಲ ಸೂಚಿಸುವಂತೆ ವಿಕ್ರಮಾದಿತ್ಯ ಪಟ್ಟಕ್ಕೆ ಬರುವ ಮೊದಲೇ ೨ನೇ ಸೋಮೇಶ್ವರನ ಕಾಲದಲ್ಲಿ ವಿಕ್ರಮಾದಿತ್ಯನ ಬಂಟನಾಗಿ ಕಾರ್ಯಮಾಡುತ್ತಿದ್ದನೆಂದು ಸೂಚಿತವಾಗುತ್ತದೆ. ಹೀಗಾಗಿ ಅವನ ಆಳಿಕೆಯ ಆರಂಭ ಕಾಲವನ್ನು ಸುಮಾರು ಕ್ರಿ.ಶ. ೧೦೭೦ ಎಂದು ಹೇಳಬಹುದು.

ಆಚರಸ ಅಥವಾ ೧ನೇ ಆಚುಗಿಯ ಮಗನು ಬಮ್ಮ ಅಥವಾ ಬಮ್ಮರಸನೆಂದು ಶಾಸನಗಳಲ್ಲಿಯ ವಂಶಾವಳಿಯಿಂದ ತಿಳಿದು ಬರುತ್ತದೆ. ಪಂಚಮುಖಿ ಆರ್. ಎಸ್. ಹೇಳುವಂತೆ ಕ್ರಿ.ಶ. ೧೦೮೩ ರ ಸವಡಿ ಶಾಸನದಲ್ಲಿ[೬೭] ಈ ಬೊಮ್ಮರಸನು ಆಗ ಕಿಸುಕಾಡು-೭೦ ಮತ್ತು ಇತರ ಪ್ರಾಂತಗಳನ್ನು ಆಳುತ್ತಿದ್ದನು.

ಈ ಸವಡಿ ಶಾಸನದಲ್ಲಿ[೬೮] ಬಮ್ಮರಸನ ಹೆಸರಿಲ್ಲ ಆದರೆ ಅದರ ಬದಲಾಗಿ ಭೂಲೋಕಮಲ್ಲ ಪೆರ್ಮಾಡಿಯು ಆಚುಗಿದೇವನ ಮಗನೆಂದು ಹೇಳಿದೆ. ಭೂಲೋಕಮಲ್ಲ ಎಂಬ ಬಿರುದು ೬ನೇ ವಿಕ್ರಮಾದಿತ್ಯನ ಮಗ ೩ನೇ ಸೋಮೇಶ್ವರನಿಗೆ ಸೇರಿದೆ. ಭೂಲೋಕಮಲ್ಲ ಪೆರ್ಮಾಡಿ ಎಂಬುದು ಆಚುಗಿಯ ಮಗನ ನಿಜವಾದ ಹೆಸರಾಗಿರದೆ ತನ್ನ ಅರಸನಿಗೆ ನಿಷ್ಠೆಯನ್ನು ತೋರಿಸುವ ಇನ್ನೊಂದು ಹೆಸರಾಗಿರಬಹುದು ಎಂಬ ಬಿ.ಆರ್. ಗೋಪಾಲ ರವರ ಸೂಚನೆ ಸರಿಯಾಗಿಯೇ ಇದೆ ಎನಿಸುತ್ತದೆ.[೬೯] ಏಕೆಂದರೆ ಇವನು ಭೂಲೋಕಮಲ್ಲನ ನಿಷ್ಠಾವಂತ ಸೇವಕನಾಗಿದ್ದನು. (ಪಾದಪದ್ಮೋಪಜೀವಿ) ಎಂದು ಶಾಸನದಲ್ಲಿ ಹೇಳಿದೆ. ಆದ್ದರಿಂದ ಆಚುಗಿಯ ಮಗನಾದ ಬಮ್ಮ ಅಥವಾ ಬಮ್ಮರಸನು ಮತ್ತು ಭೂಲೋಕಮಲ್ಲ ಪೆರ್ಮಾಡಿಯು ಒಂದೇ ಎಂದು ಹೇಳಬಹುದು.

ಮೇಲೆ ಹೇಳಿದಂತೆ, ಈ ಶಾಸನದ ಕಾಲ ೬ನೇ ವಿಕ್ರಮಾದಿತ್ಯನ ಆಳಿಕೆಯ ೭ನೇ ವರ್ಷ ಅಂದರೆ ಕ್ರಿ.ಶ. ೧೦೮೩. ಆಗ ವಿಕ್ರಮಾದಿತ್ಯನೇ ಆಳುತ್ತಿದ್ದನು ಮತ್ತು ಆಚುಗಿಯು ಅವನ ಮಾಂಡಲಿಕನಾಗಿದ್ದ ಹೀಗಿದ್ದಲ್ಲಿ ಅದೇ ವರ್ಷ ಆಚುಗಿಯ ಮಗ ಬಮ್ಮ ಅಥವಾ ಭೂಲೋಕಮಲ್ಲ ಪೆರ್ಮಾಡಿಯು ವಿಕ್ರಮಾದಿತ್ಯನ ಮಗ ಭೂಲೋಕಮಲ್ಲನ ಮಾಂಡಲಿಕನು ಹೇಗೆ ಆದಾನು ಎಂಬ ಪ್ರಶ್ನೆ ಉದ್ಭವಿಸುತ್ತದೆ. ಇದಕ್ಕೆ ಬಿ.ಆರ್. ಗೋಪಾಲರವರು ಒಂದು ಸಮಾಧಾನ ಸೂಚಿಸಿದ್ದಾರೆ. ವಿಕ್ರಮಾದಿತ್ಯನ ಆಳಿಕೆಯು ಸುಧೀರ್ಘವಾಗಿದ್ದಿತು, ಅದಲ್ಲದೇ ತಾನೂ ಪಟ್ಟಕ್ಕೆ ಬರುವ ಮೊದಲು ವರ್ಷಗಳ ಕಾಲ ತನ್ನ ಅಣ್ಣನಾದ ೨ನೇ ಸೋಮೇಶ್ವರನಿಂದ ಅಧಿಕಾರ ಕಿತ್ತುಕೊಳ್ಳಲು ಪ್ರಯತ್ನಿಸಿದನು. ಅಂತಹ ಹೊತ್ತಿನಲ್ಲಿ ಆಚುಗಿಯು ಅವನ ಬೆಂಬಲವಾಗಿ ನಿಂತಿರಬೇಕು ಎಂತಲೇ ಅವನಿಗೆ "ವಿಕ್ರಮಾದಿತ್ಯನ ಕಟ್ಟಿದಲಗು" ಅಂದರೆ ಇನ್ನೊಂದು ಖಡ್ಗವೇ ಎಂಬ ಬಿರುದು ಬಂದಿರಬೇಕು. ವಿಕ್ರಮಾದಿತ್ಯನು ಪಟ್ಟಕ್ಕೆ ಬರುವ ವೇಳೆಗಾಗಲೇ ಅವನ ಮಗ ೩ನೇ ಸೋಮೇಶ್ವರ ಸಾಕಷ್ಟು ಪ್ರಬುದ್ಧನಾಗಿದ್ದು ತಂದೆಯ ಆಳಿಕೆಯಲ್ಲಿಯೇ ರಾಜ್ಯದ ಆಡಳಿತದಲ್ಲಿ ಸಕ್ರೀಯವಾಗಿ ಭಾಗವಹಿಸುತ್ತಿದ್ದು, ಎಷ್ಟೋ ಯುವಕರು ಅವನ ಬಂಟರಾಗಿದ್ದಿರಬೇಕು. ಭೂಲೋಕ ಪೆರ್ಮಾಡಿ ಅಥವಾ ಬಮ್ಮರಸನು ಇಂಥ ಬಂಟರಲ್ಲಿ ಒಬ್ಬನು

ಎಂದು ಹೇಳಬಹುದು.[೧೦೦] ಬಿ.ಆರ್. ಗೋಪಾಲ ಅವರೂ ಇಂಥದೇ ಅಭಿಪ್ರಾಯ ಹೊಂದಿದ್ದು ಸರಿಯಾಗಿಯೇ ಇದೆ.

೧ನೇ ಆಚುಗಿಯ ೬ ಜನ ತಮ್ಮಂದಿಯರಲ್ಲಿ ಯಾರೊಬ್ಬರು ಅಧಿಕಾರಕ್ಕೆ ಬರಲಿಲ್ಲವೆಂಬುದು ಸ್ಪಷ್ಟವಿದೆ. ವಂಶಾವಳಿಗಳನ್ನು ಹೇಳುವ ಶಾಸನಗಳು ಅವರಿಗೆ ಶೂರತ್ವವನ್ನು ಆರೋಪಿಸುವ ಸಾಂಪ್ರದಾಯಿಕ ಬಿರುದುಗಳನ್ನು ಕೊಡುತ್ತವೆ. ನಿಡಗುಂದಿಯ ಒಂದು ಶಾಸನ.[೧೦೧] ಸಿಂಗಣ್ಣದೇವನೊಬ್ಬನು ಚಾಲುಕ್ಯ ೨ನೇ ಸೋಮೇಶ್ವರನ ಅಧೀನನಾಗಿ ಕಿಸುಕಾಡು-೭೦ ಪ್ರಾಂತವನ್ನು ಆಳುತ್ತಿದ್ದನೆಂದು ಹೇಳಿದೆ. ಈ ಆಧಾರದ ಮೇಲೆ ಈ ಸಿಂಗಣ್ಣನು ವಂಶಾವಳಿಯಲ್ಲಿ ತೋರಿಸಲಾದ ೧ನೇ ಆಚುಗಿದೇವನ ತಮ್ಮನೆಂದು ತೋರಿಸಲಾದ ಸಿಂಘಣನೇ ಇದ್ದಿರಬಹುದೆಂದು ತರ್ಕಿಸಲಾಗಿತ್ತು. ಆದರೆ ಅದು ಸರಿ ಅಲ್ಲವೆಂದು ಪಂಚಮುಖಿಯವರು ತೋರಿಸಿದ್ದಾರೆ.[೧೦೨] ಇವನು ಸಿಂದ ಮನೆತನಕ್ಕೆ ಸೇರಿದವನೆಂಬ ಬಗ್ಗೆ ಆಧಾರಗಳಿಲ್ಲ ಅಲ್ಲದೇ ೧ನೇ ಆಚುಗಿಯು ಕ್ರಿ.ಶ. ೧೦೭೦ರಲ್ಲಿ ಅಧಿಕಾರಕ್ಕೆ ಬಂದಿರಬೇಕು ಎಂದು ಸೂಚಿಸಿದ್ದೇವೆ.

೧ನೇ ಆಚುಗಿಯ ನಂತರ ಅವನ ಮಗ ಬಮ್ಮ ಅಥವಾ ಬಮ್ಮರಸ ಆಳಿಕೆಗೆ ಬಂದನೆಂದು ಎಲ್ಲರೂ ಒಪ್ಪುತ್ತಾರೆ. ಅವನು ಕ್ರಿ.ಶ. ೧೦೮೩ ರಲ್ಲಿ ಅಧಿಕಾರದಲ್ಲಿ ಇದ್ದರೆಂದು ಪಂಚಮುಖಿ ಹೇಳಿದ್ದಾರೆ.[೧೦೩] ಇದನ್ನು ಅವರು ಸವಡಿ ಶಾಸನದ ಆಧಾರದ ಮೇಲಿಂದಲೇ ಹೇಳಿದ್ದಾರೆ. ಅದರಲ್ಲಿ ಉಲ್ಲೇಖಿಸಲ್ಪಟ್ಟ ೧ನೇ ಆಚುಗಿಯ ಮಗನು ಅವನ ಹೆಸರು ಭೂಲೋಕಮಲ್ಲ ಪೆರ್ಮಾಡಿದೇವ ಎಂದಿದ್ದು ಅವನೇ ಬಮ್ಮ ಅಥವಾ ಬಮ್ಮರಸ ಇದ್ದಿರಬಹುದೆಂದು ತರ್ಕಿಸಬಹುದಾಗಿದೆ. ಈ ಸವಡಿ ಶಾಸನದಲ್ಲಿ ಒಂದೆರಡು ತೊಡಕುಗಳಿವೆ. ಶಾಸನವು ಕ್ರಿ.ಶ. ೧೧೮೩ ಕ್ಕೆ ಸೇರಿದ್ದು, ಆಗ ತ್ರಿಭುವನಮಲ್ಲದೇವ ಅಂದರೆ ೬ನೇ ವಿಕ್ರಮಾದಿತ್ಯನು ಆಳುತ್ತಿದ್ದನೆಂದು ಹೇಳಿದೆ.[೧೦೪] ಆಚುಗಿದೇವನು ಅವನ ಅಧೀನನೆಂದು ಅದರಲ್ಲಿ ಹೇಳಿದೆ, ಅವನ ಮಗ ಭೂಲೋಕಮಲ್ಲ ಪೆರ್ಮಾಡಿ ಉಲ್ಲೇಖವು ಇದೇ ಶಾಸನದ ೧೧ನೇ ಸಾಲಿನಲ್ಲಿದ್ದು ಅವನು ಭೂಲೋಕಮಲ್ಲನ ಪಾದಾರಾಧಕ ಎಂದು ೨೪ನೆಯ ಸಾಲಿನಲ್ಲಿ ಹೇಳಿದೆ. ಅಂದರೆ ವಿಕ್ರಮಾದಿತ್ಯನ ಕಾಲದಲ್ಲಿ ಭೂಲೋಕಮಲ್ಲನು ಅಧಿಕಾರ ಸ್ಥಾನ ಹೊಂದಿದ್ದನೆಂದೂ ಮತ್ತು ಭೂಲೋಕಮಲ್ಲ ಪೆರ್ಮಾಡಿದೇವನು ಅವನ ಬಂಟನಾಗಿದ್ದನೆಂದು ಮೇಲೆ ಹೇಳಿದೆ. ಅವನು ಆಚುಗಿಯ ತರುವಾಯ ಅಧಿಕಾರಕ್ಕೆ ಬಂದನೆಂಬ ಸೂಚನೆ ಎಲ್ಲಿಯೂ ಇಲ್ಲ. ಕ್ರಿ.ಶ. ೧೦೮೩ರಲ್ಲಿ ಭೂಲೋಕಮಲ್ಲ ಸೋಮೇಶ್ವರನಂತೆ ಅವನೂ ಅವನ ತಂದೆ ೧ನೇ ಆಚುಗಿಯ ಜೊತೆಗೇ ಅಧಿಕಾರ ನಡೆಸುತ್ತಿದ್ದನೆಂದು ಹೇಳಬೇಕಾಗುತ್ತದೆ. ಪಟ್ಟದಕಲ್ಲಿನ ಶಾಸನದಲ್ಲಿಯೂ ಬಮ್ಮರಸನು

ಅಥವಾ ಭೂಲೋಕಮಲ್ಲ ಪೆರ್ಮಾಡಿಯು ವಿಕ್ರಮಾದಿತ್ಯನ ಅಧೀನನೆಂದು ಹೇಳಿದೆ.[೧೦೫] ನರೇಗಲ್ಲಿನ ಒಂದು ಶಾಸನದಲ್ಲಿ ಬಮ್ಮರಸನು ಅಲ್ಲಿ ಕಟ್ಟಿಸಿದ ದೇವಾಲಯದ ಉಲ್ಲೇಖ ಬರುತ್ತದೆ.[೧೦೬] ಈ ಶಾಸನದ ಕಾಲ, ಶಾಸನದಲ್ಲಿ ಹೇಳಿದಂತೆ ಕ್ರಿ.ಶ. ೧೧೦೪-೧೧೦೫. ಆದರೆ ಈ ಶಾಸನದಲ್ಲಿ ೨ನೇ ಆಚುಗಿಯ ಮಗ ಪೆರ್ಮಾಡಿಯ ಉಲ್ಲೇಖ ಬರುತ್ತದೆ. ಶಾಸನದಲ್ಲಿ ನಮೂದಿಸಲ್ಪಟ್ಟ ತೇದಿಯು ಈ ಪೆರ್ಮಾಡಿ ಆಳಿಕೆಗೆ ಹೊಂದುವುದಿಲ್ಲ. ಕಾಲ ನಿರ್ದೇಶನದಲ್ಲಿ ತಪ್ಪಿದೆ ಎಂದು ಸ್ಪಷ್ಟವಿದೆ. ಶಾಸನವು ಬಹಳಷ್ಟು ಒಡೆದು ಹೋಗಿದ್ದರಿಂದ ಹೆಚ್ಚಿನ ವಿವರ ತಿಳಿಯುವುದಿಲ್ಲ. ಹೀಗಾಗಿ ಪೆರ್ಮಾಡಿಯ ಈ ಶಾಸನದಲ್ಲಿ ಹಿಂದೆ ಬಮ್ಮರಸನು ಕಟ್ಟಿಸಿದ ದೇವಾಲಯಕ್ಕೆ ಉಲ್ಲೇಖವಿದೆ ಎಂದು ಹೇಳಬೇಕಾಗುತ್ತದೆ. ಇದರಲ್ಲಿ ಹೇಳಲಾದ ಕಾಲವು ಬಮ್ಮರಸನದ್ದೇ ಎಂದಾದರೆ ಅವನು ಕನಿಷ್ಟ ಅಲ್ಲಿಯವರೆಗೆ ಅಂದರೆ ಕ್ರಿ.ಶ. ೧೧೦೪-೧೧೦೫ ವರೆಗೆ ಅಧಿಕಾರದಲ್ಲಿದ್ದನೆಂದು ಪರಿಗಣಿಸಬೇಕಾಗುತ್ತದೆ.

ಬಮ್ಮರಸ ಅಥವಾ ಭೂಲೋಕಮಲ್ಲ ಪೆರ್ಮಾಡಿದೇವನ ನಂತರ ಒಂದನೆಯ ಆಚುಗಿಯ ತಮ್ಮನಾದ ಸಿಂಗರಸನ ಮಗ ೨ನೇ ಆಚುಗಿಯು ಪಟ್ಟಕ್ಕೆ ಬಂದನು. ಈ ಆಚರಸನು ಬಮ್ಮರಸನ ಮಗನೆಂದು ಗ್ರಹಿಸಲಾಗುತ್ತಿತ್ತು. ಆದರೆ ಇವನು ಆಚರಸನ ತಮ್ಮನಾದ ಸಿಂಗರಸನ ಮಗನೆಂದು ಪಂಚಮುಖಿ ಆರ್.ಎಸ್. ಅವರು ತೋರಿಸಿಕೊಟ್ಟಿದ್ದಾರೆ.[೧೦೭]

ಅಬ್ಬಿಗೇರಿಯಲ್ಲಿ ದೊರೆತ ಶಾಸನವೇ ಈ ಆಚರಸನ ಈವರೆಗೆ ತಿಳಿದ ಮೊದಲ ಶಾಸನ. ಇದರ ಕಾಲ ಕ್ರಿ.ಶ. ೧೧೧೩-೧೧೧೪. ನಾವು ಮೇಲೆ ಸೂಚಿಸಿದಂತೆ ಬಮ್ಮರಸ ಕ್ರಿ.ಶ. ೧೧೦೪-೧೧೦೫ ರಲ್ಲಿ ಆಳಿದ. ಈ ಎರಡು ವರ್ಷಗಳ ನಡುವಿನ ಕಾಲಾವಧಿಯಲ್ಲಿ ೨ನೇ ಆಚರಸನು ಪಟ್ಟಕ್ಕೆ ಬಂದಿರಬೇಕು. ಇಲ್ಲಿ ಗಮನಿಸಬೇಕಾದ ಒಂದು ವಿಷಯವೆಂದರೆ, ಈ ಮೂರು ತಲೆಮಾರಿನವರು ೧ನೇ ಆಚುಗಿ, ಬಮ್ಮರಸ ಮತ್ತು ೨ನೇ ಆಚುಗಿ ಚಾಲುಕ್ಯ ೬ನೇ ವಿಕ್ರಮಾದಿತ್ಯನ ಅಧೀನ ಮಾಂಡಲಿಕರಾಗಿದ್ದರು. ೧ನೇ ಆಚರಸನ ಜೊತೆಗೆ ಮಗ ಬಮ್ಮರಸನು ಆಡಳಿತದಲ್ಲಿ ಭಾಗವಹಿಸುತ್ತಿದ್ದನೆಂದು ಮೇಲೆ ಸೂಚಿಸಿದ್ದೇವೆ. ಇವರಿಬ್ಬರ ಕಾಲಾವಧಿಯನ್ನು ಕ್ರಿ.ಶ. ೧೦೭೦ ರಿಂದ ೧೧೦೮ ಎಂದು ಊಹಾತ್ಮಕವಾಗಿ ನಿರ್ಧರಿಸಬಹುದು ಮತ್ತು ೨ನೇ ಆಚುಗಿಯ ಆಳಿಕೆಯ ಆರಂಭವು ಕ್ರಿ.ಶ. ೧೧೦೮ ರಿಂದ ಆರಂಭಗೊಂಡಿತೆಂದು ಹೇಳಬಹುದು. ೨ನೇ ಆಚುಗಿಯ ಇದುವರೆಗೆ ದೊರೆತ ಕೊನೆಯ ತೇದಿ ಎಂದರೆ ಕ್ರಿ.ಶ. ೧೧೨೫. ಆಚರಸನಿಗೆ ಇಬ್ಬರು ಹೆಂಡಂದಿಯರು. ಮಹಾದೇವಿ ಮತ್ತು ಚಂದಲದೇವಿ. ಮಹಾದೇವಿಯಿಂದ ಹುಟ್ಟಿದ

ಮಗ ಪೆರ್ಮಾಡಿ ಮತ್ತು ಚಂದಲದೇವಿಯಿಂದ ಹುಟ್ಟಿದ ಮಗ ಚಾವುಂಡ ಅಥವಾ ೨ನೇ ಚಾವುಂಡ.

೬ನೇ ವಿಕ್ರಮಾದಿತ್ಯನ ಆಳಿಕೆ ಕ್ರಿ.ಶ. ೧೧೨೭ ಕ್ಕೆ ಮುಗಿಯಿತು. ಅವನ ನಂತರ ಅವನ ಮಗ ೩ನೇ ಸೋಮೇಶ್ವರನು ೧೧೩೯ ರವರೆಗೆ ಆಳಿದನು. ಮುಂದೆ ಸೋಮೇಶ್ವರನ ಮಗ ಜಗದೇಕಮಲ್ಲನು ಚಾಲುಕ್ಯ ಚಕ್ರವರ್ತಿಯಾದನು. ಪೆರ್ಮಾಡಿಯ ಚಟುವಟಿಕೆಗಳು ಈ ಮೂರು ಅರಸರ ಆಳಿಕೆಯಲ್ಲಿ ಹಬ್ಬಿದ್ದವು. ಪೆರ್ಮಾಡಿಯು ಜಗದೇಕಮಲ್ಲ ಪೆರ್ಮಾಡಿದೇವ ಎಂಬ ಹೆಸರು ಪಡೆದದ್ದನ್ನು ನೋಡಿದರೆ ಅವನು ೨ನೇ ಜಗದೇಕಮಲ್ಲನ ಸಾಮಂತನಾಗಿದ್ದನು ಎಂಬುದು ಸ್ಪಷ್ಟವಾಗುತ್ತದೆ. ಮೇಲೆ ಭೂಲೋಕಮಲ್ಲ ಪೆರ್ಮಾಡಿ ಎಂಬ ಹೆಸರಿಗೆ ಸಂಬಂಧಿಸಿದಂತೆ ಚರ್ಚಿಸುವಾಗ ಸಾಮಂತರು ಆಳರಸರ ಹೆಸರಿಟ್ಟುಕೊಳ್ಳುತ್ತಿದ್ದರು. ಇದು ರೂಢಿಗತವಾಗಿತ್ತು.

ಇದುವರೆಗೆ ತಿಳಿದಂತೆ ೨ನೇ ಆಚುಗಿಯ ಆಳಿಕೆಯ ಕೊನೆಯ ವರ್ಷವು ಕ್ರಿ.ಶ. ೧೧೨೫–೧೧೨೬. ಅವನ ಮಗ ಪೆರ್ಮಾಡಿಯು ಈ ತೇದಿಯ ನಂತರ ಸ್ವಲ್ಪ ಕಾಲದಲ್ಲಿ ಅಧಿಕಾರಕ್ಕೆ ಬಂದಿರಬೇಕು. ೨ನೇ ಆಚರಸನ ಅಧಿಕಾರವಧಿ ಸುಮಾರು ಕ್ರಿ.ಶ. ೧೧೩೦ರ ಹೊತ್ತಿಗೆ ಮುಗಿದು ಅದೇ ಅವಧಿಯಲ್ಲಿ ಪೆರ್ಮಾಡಿ ಅಧಿಕಾರಕ್ಕೆ ಬಂದಿರಬೇಕು. ಪೆರ್ಮಾಡಿ ಅಧಿಕಾರಕ್ಕೆ ಬರುವ ಹೊತ್ತಿಗೆ ೬ನೇ ವಿಕ್ರಮಾದಿತ್ಯನ ಆಳಿಕೆ ಮುಗಿದಿದ್ದಿತು. ಕ್ರಿ.ಶ. ೧೧೨೭ ಅವನ ಮಗ ೩ನೇ ಸೋಮೇಶ್ವರನ ಸ್ವತಂತ್ರ ಆಳಿಕೆ ಆರಂಭವಾದ ವರ್ಷ. ಅವನ ಕಾಲ ರಾಜಕೀಯ ದೃಷ್ಟಿಯಿಂದ ಅಷ್ಟೇನು ಪ್ರಭಾವಶಾಲಿಯಾಗಿರಲಿಲ್ಲ. ನರೇಗಲ್ಲ ಒಂದು ಶಾಸನವು ಈ ಪೆರ್ಮಾಡಿಯು ೬ನೇ ವಿಕ್ರಮಾದಿತ್ಯನ ಮಾಂಡಲಿಕನಾಗಿದ್ದನೆಂದು ಹೇಳುತ್ತದೆ. ಆದರೆ ಈ ಶಾಸನದಲ್ಲಿ ನಮೂದಿಸಲಾದ ತೇದಿಯು ಶಕ ವರ್ಷ ೮೭೨ ಎಂದಿದ್ದು ಅದು ಯಾವ ಚಾಲುಕ್ಯ ಅರಸನ ಆಳಿಕೆಗೆ ಹೊಂದುವುದಿಲ್ಲ.[೧೦೮] ಆದರೂ ಶಾಸನದ ಹೇಳಿಕೆಯನ್ನು ನಂಬುವುದಾದರೆ ಪೆರ್ಮಾಡಿಯು ತನ್ನ ತಂದೆ ಆಚುಗಿಯ ಕಾಲದಲ್ಲಿಯೇ ತಂದೆಯೊಡನೆ ರಾಜಕೀಯದಲ್ಲಿ ಭಾಗವಹಿಸುತ್ತಿದ್ದನೆಂದು ಸೂಚಿತವಾಗುತ್ತದೆ. ಯುದ್ಧ ಭೂಮಿಯಲ್ಲಿ ಆಚುಗಿಯು ಮತ್ತು ಪೆರ್ಮಾಡಿಯು ಸಾಧಿಸಿದರೆಂದು ಹೇಳಲಾದ ಕೃತ್ಯಗಳಲ್ಲಿಯ ಸಾಮ್ಯವನ್ನು ಗಮನಿಸಿದರೆ ಈ ಊಹೆಗೆ ಇನ್ನಷ್ಟು ಪುಷ್ಟಿ ದೊರೆಯುತ್ತದೆ. ಪೆರ್ಮಾಡಿಯು ಮುಂದಿನ ಅರಸನಾದ ಭೂಲೋಕಮಲ್ಲ ೩ನೇ ಸೋಮೇಶ್ವರನ ಮಾಂಡಲಿಕನೂ ಆಗಿರಲೇಬೇಕು. ಆದರೆ ಅವನ ಆಳಿಕೆ ಕಾಲದಲ್ಲಿ ಪೆರ್ಮಾಡಿಯ ಕಾರ್ಯಚಟುವಟಿಕೆಗಳ ಬಗ್ಗೆ ಯಾವ ಮಾಹಿತಿ ದೊರೆಯುವುದಿಲ್ಲ.

ಪೆರ್ಮಾಡಿಯು ಮುಂದಿನ ಚಾಲುಕ್ಯ ಅರಸನಾದ ೨ನೇ ಜಗದೇಕಮಲ್ಲನ ನೆಚ್ಚಿನ ಬಂಟನಾಗಿದ್ದನೆಂದು ಹೇಳಲು ಸಾಕಷ್ಟು ಆಧಾರಗಳಿವೆ. ಕ್ರಿ.ಶ. ೧೧೪೪ನೇ ಕೋಡಿಕೊಪ್ಪ ಶಾಸನವು ಅವನನ್ನು ಜಗದೇಕಮಲ್ಲನ ಪಾದಪದ್ಮೋಪಜೀವಿ ಎಂದು ಕರೆದಿದೆ. ಅದು ಅವನನ್ನು ಮಹಾಮಂಡಲೇಶ್ವರ ಜಗದೇಕಮಲ್ಲ ಪೆರ್ಮಾಡಿದೇವ ಎಂದು ಹೆಸರಿಸುತ್ತದೆ.[೧೦೯]

ಪೆರ್ಮಾಡಿ ನಂತರ ಅವನ ತಮ್ಮನಾದ ೨ನೇ ಚಾವುಂಡನು ಅಧಿಕಾರಕ್ಕೆ ಬಂದನು. ಇವನು ೨ನೇ ಆಚುಗಿಯ ಇನ್ನೊಬ್ಬ ಹೆಂಡತಿಯಾದ ಚಂದಲದೇವಿಯ ಮಗನು. ಕ್ರಿ.ಶ. ೧೧೫೧ರ ಅರಸಿಬೀಡಿ ಶಾಸನವು[೧೧೦] ಅವನನ್ನು ಚಾಲುಕ್ಯ ೩ನೇ ತೈಲನ ಸಾಮಂತನೆಂದು ಬಣ್ಣಿಸುತ್ತದೆ. ಅಂದರೆ ಪೆರ್ಮಾಡಿಯ ಕೊನೆಯ ತೇದಿಯು ಕ್ರಿ.ಶ. ೧೧೪೪ ಮತ್ತು ಕ್ರಿ.ಶ. ೧೧೫೧ರ ನಡುವೆ ಪೆರ್ಮಾಡಿಯ ಆಳಿಕೆ ಮುಗಿದು ಚಾವುಂಡನ ಆಳಿಕೆ ಆರಂಭವಾಯಿತೆಂದು ಸೂಚಿತವಾಗುತ್ತದೆ. ಈ ಬದಲಾವಣೆ ಕ್ರಿ.ಶ. ೧೧೫೦ರ ಹೊತ್ತಿಗೆ ಆಯಿತು ಎಂದು ಗ್ರಹಿಸಬಹುದು. ಕ್ರಿ.ಶ. ೧೧೫೫ರ ಹೊಸೂರು ಶಾಸನದಲ್ಲಿ[೧೧೧] ಈ ಚಾವುಂಡನ ಹೆಂಡತಿ ಲಕ್ಷ್ಮೀದೇವಿಯ ಉಲ್ಲೇಖವಿದ್ದು ಅವಳು ತನ್ನ ಪತಿಯು ಕೊಟ್ಟ ಕೆಲವು ಪ್ರದೇಶಗಳನ್ನು ಆಳುತ್ತಿದ್ದಳೆಂದು ಹೇಳಿದೆ.

ಚಾವುಂಡನು ಅಧಿಕಾರಕ್ಕೆ ಬಂದಾಗ ಕರ್ನಾಟಕದ ರಾಜಕೀಯ ಪರಿಸ್ಥಿತಿಯಲ್ಲಿ ಒಂದು ಮಹತ್ತರದ ಬದಲಾವಣೆ ಆಯಿತು. ಅದೇನೆಂದರೆ, ಕಳಚುರಿ ಬಿಜ್ಜಳನಿಂದ ಚಾಲುಕ್ಯ ಪಟ್ಟದ ಅತಿಕ್ರಮಣದಿಂದ ಕರ್ನಾಟಕದ ಇತಿಹಾಸದಲ್ಲಿ ಈ ಕಳಚುರಿ ಬಿಜ್ಜಳ ಅತೀ ಮಹತ್ವಾಕಾಂಕ್ಷಿ ಎಂದು ಹೆಸರಾಗಿದ್ದಾನೆ. ಅವನು ಮೊದಲಿಗೆ ಚಾಲುಕ್ಯ ಮಾಂಡಲಿಕನೇ. ಈಗಿನ ಸೊಲ್ಲಾಪುರ ಜಿಲ್ಲೆಯ ಮಂಗಳವೇಢೆ ಎಂಬಲ್ಲಿ (ಪ್ರಾಚೀನ ಮಂಗಳವಾಡ) ತರಿಕಾಡು ಪ್ರದೇಶದ ಚಾಲುಕ್ಯ ವಿಕ್ರಮಾದಿತ್ಯನ ಸಾಮಂತನಾಗಿ ಆಳುತ್ತಿದ್ದನು. ವಿಕ್ರಮಾದಿತ್ಯನ ಕಾಲದಿಂದಲೇ ತನ್ನ ಪೌರುಷವನ್ನು ಮೆರೆಯಲು ಯತ್ನಿಸುತ್ತಿದ್ದರೂ ಹೆಚ್ಚಿನ ಅವಕಾಶ ದೊರೆಯಲಿಲ್ಲ ಆದರೆ ಮುಂದೆ ವಿಕ್ರಮಾದಿತ್ಯನ ನಂತರ ೩ನೇ ಸೋಮೇಶ್ವರ ಹಾಗೂ ೨ನೇ ಜಗದೇಕಮಲ್ಲನ ಆಳಿಕೆಯಲ್ಲಿ ಸಾಮ್ರಾಜ್ಯದ ಮೇಲೆ ಚಾಲುಕ್ಯರ ಹಿಡಿತ ಸಡಿಲವಾಗತೊಡಗಿತು. ಮುಂದೆ ಕ್ರಿ.ಶ. ೧೧೪೯ ರಲ್ಲಿ ೩ನೇ ತೈಲನು ಪಟ್ಟಕ್ಕೆ ಬಂದಾಗ ಬಿಜ್ಜಳನು ತನ್ನ ಆಕ್ರಮಣಕಾರಿ ಚಟುವಟಿಕೆಗಳನ್ನು ತೀವ್ರಗೊಳಿಸಿ ತೈಲಪನನ್ನು ಪದಚ್ಯುತಗೊಳಿಸಿ, ಕಲ್ಯಾಣವನ್ನು ಆಕ್ರಮಿಸಿ ತಾನೇ ಅರಸನೆಂದು ಸಾರಿಕೊಂಡನು. ಪರಿಸ್ಥಿತಿಯು ಅವನಿಗೆ ಅನುಕೂಲಕರವಾಯಿತು. ಹಾಗೇ ನೋಡಿದರೆ ಬಿಜ್ಜಳನು ಚಾಲುಕ್ಯರ ಸಂಬಂಧಿಕನೆ. ವಿಕ್ರಮಾದಿತ್ಯನು ಅವನ ಅಜ್ಜನಾದ ಜೋಗಮನ ಮಗಳಾದ ಸಾವಳದೇವಿಯನ್ನು

ಮದುವೆಯಾಗಿದ್ದನು ಮತ್ತು ಮಗಳಾದ ನಾಗಲಾದೇವಿಯನ್ನು ಜೋಗಮನ ಮಗ ಪೆರ್ಮಾಡಿಗೆ ವಿವಾಹವಾಗಿ ಕೊಟ್ಟನು. ಹೀಗೆ ಚಾಲುಕ್ಯ ಮನೆತನಕ್ಕೆ ತೀರ ಹತ್ತಿರದವನಾಗಿ ಅಲ್ಲಿಯ ಆಗುಹೋಗುಗಳ ಬಗ್ಗೆ ಒಂದು ಕಣ್ಣು ಇಟ್ಟಿದ್ದನು. ಅವಕಾಶ ಸಾಧಿಸಿ ಕೊನೆಗೆ ತಾನೇ ಅರಸನಾದನು. ಸಿಂದ ಚಾವುಂಡನು ಬಹುಕಾಲದವರೆಗೆ ೩ನೇ ತೈಲಪನ ಸ್ವಾಮಿ ನಿಷ್ಠನಾಗಿಯೇ ಉಳಿದನು. ಕ್ರಿ.ಶ. ೧೧೬೨ ರ ಪಟ್ಟದಕಲ್ಲಿನ ಶಾಸನದಲ್ಲಿ.[೧೧೨] ಅವನು ತೈಲಪನ ಅಧೀನನೆಂದು ಹೇಳಲ್ಪಟ್ಟಿದ್ದಾನೆ. ಆದರೆ ಬಿಜ್ಜಳನ ಹೆಚ್ಚುತ್ತಿದ್ದ ಒತ್ತಡಗಳಿಂದಾಗಿ ಅವನು ಬಿಜ್ಜಳನ ಅಧಿಪತ್ಯವನ್ನು ಒಪ್ಪಬೇಕಾಯಿತು. ಕ್ರಿ.ಶ. ೧೧೬೯ ರ ಹಿರೇಮಣ್ಣೂರಿನಲ್ಲಿಯ ಶಾಸನದಲ್ಲಿ.[೧೧೩] ಅವನು ಬಿಜ್ಜಳನ ಸಾಮಂತನೆಂದು ಬಿಂಬಿಸಲ್ಪಟ್ಟಿದ್ದಾನೆ. ಅದಲ್ಲದೇ ಇದೇ ಶಾಸನದಲ್ಲಿ ಅವನು ಬಿಜ್ಜಳನ ಅಳಿಯನೆಂದು ("ತತ್ ಚಕ್ರವರ್ತಿಯಳಿಯ") ಎಂದು ಬಿಂಬಿಸಲ್ಪಟ್ಟಿದ್ದಾನೆ. ಅಂದರೆ ಅವನು ಬಿಜ್ಜಳನ ಆಧಿಪತ್ಯ ಒಪ್ಪಿಕೊಂಡು ಅವನೊಡನೆ ವೈವಾಹಿಕ ಸಂಬಂಧ ಬೆಳೆಸಿ ತನ್ನ ಸ್ಥಾನವನ್ನು ಭದ್ರಪಡಿಸಿಕೊಂಡನೆಂದು ಸ್ಪಷ್ಟವಾಗುತ್ತದೆ. ಆಶ್ಚರ್ಯವೆಂದರೆ, ಕ್ರಿ.ಶ. ೧೧೬೦ರ ಅರಸೀಬಿಡಿ ಶಾಸನವು.[೧೧೪] ಒಂದು ಹೊಸ ವಿಷಯವನ್ನೇ ಹೇಳುತ್ತದೆ. ಕಳಚುರಿ ೨ನೇ ಬಿಜ್ಜಳನ ಕಾಲಕ್ಕೆ ಸೇರಿದ ಈ ಶಾಸನವು ಸಿಂದ ಕುಳದ ಬಿಟ್ಟರಸನ ಮಗ ಹೊಲ್ಲರಸ ಎಂಬುವನನ್ನು ಬಿಜ್ಜಳನ ಸಾಮಂತ ಎಂದು ಹೆಸರಿಸುತ್ತದೆ. ನಿಜವಾಗಿ ನೋಡಿದರೆ ಈ ಕಾಲಕ್ಕೆ ಚಾವುಂಡನು ಬಿಜ್ಜಳನ ಸಾಮಂತನಾಗಿದ್ದನು. ಈ ಹೊಲ್ಲರಸನು ಸಿಂದ ಮನೆತನಕ್ಕೆ ಸಂಬಂಧಿಸಿದ ಇನ್ನೊಬ್ಬ ಸಾಮಂತನಿರಬೇಕೆಂದು ಊಹಿಸಿ ಬಿಜ್ಜಳನು ಚಾವುಂಡನ ಅವಿಧೇಯನಾಗಿದ್ದುದರಿಂದ ಅವನನ್ನು ಕಡೆಗಣಿಸಿ ಹೊಲ್ಲರಸನನ್ನು ಪ್ರೋತ್ಸಾಹಿಸಿರಬೇಕೆಂದು ಊಹಿಸುತ್ತಾರೆ.[೧೧೫]

ಬಹುಶಃ ಕ್ರಿ.ಶ. ೧೧೬೯ ನೇ ವರ್ಷವೇ ಚಾವುಂಡನ ಆಳಿಕೆಯೇ ಕೊನೆಯ ವರ್ಷವಾಗಿರಬೇಕೆನಿಸುತ್ತದೆ. ಏಕೆಂದರೆ ಕ್ರಿ.ಶ. ೧೧೭೧ ರ ನಿಡಗುಂದಿ ಎಂಬಲ್ಲಿಯ ಶಾಸನವು.[೧೧೬] ಅವನ ಇಬ್ಬರು ಮಕ್ಕಳಾದ ಬಿಜ್ಜಳದೇವ ಮತ್ತು ವಿಕ್ರಮದೇವ ಎಂಬುವರನ್ನು ಹೆಸರಿಸಿ ಅವರೇ ಅಧಿಕಾರದಲ್ಲಿದ್ದರೆಂದು ಸೂಚಿಸುತ್ತದೆ. ಇವರಿಬ್ಬರೂ ಚಾವುಂಡನ ಅಧಿಕಾರ ಸಿರಿಯಾದೇವಿ ಎಂಬ ಹೆಂಡತಿಯಿಂದ ಹುಟ್ಟಿದ ಮಕ್ಕಳೆಂದು ಹೇಳಿದೆ. ಸಿರಿಯಾದೇವಿಯು ಬಿಜ್ಜಳನ ಮಗಳೆಂದು ಮೇಲೆ ಹೇಳಿದ್ದೇವೆ. ಈ ನಿಡಗುಂದಿಯ ಶಾಸನದಲ್ಲಿ ಬಿಜ್ಜಳ ಮತ್ತು ವಿಕ್ರಮರನ್ನು ಕುಮಾರ ಎಂದು ಕರೆದಿರುವುದರಿಂದ ಅವರಿಬ್ಬರೂ ವಯಸ್ಸಿನಿಂದ ಚಿಕ್ಕವರಿದ್ದರೆಂದು, ಆ ಹೊತ್ತಿಗಾಗಲೇ ಚಾವುಂಡನು ಮೃತನಾಗಿದ್ದರಿಂದ ಸಿರಿಯಾದೇವಿಯು ಈ ಇಬ್ಬರೂ ಮಕ್ಕಳ ಪರವಾಗಿ ಆಳಿಕೆ ನಡೆಸುತ್ತಿದ್ದಳೆಂದು ಬಿ.ಆರ್. ಗೋಪಾಲ

ಅಭಿಪ್ರಾಯಪಡುತ್ತಾರೆ.[೧೧೭] ಈ ೨ನೇ ಚಾವುಂಡನ ಕಾಲ ಸುಮಾರು ಕ್ರಿ.ಶ. ೧೧೫೦ ರಿಂದ ೧೧೭೦ ಎಂದು ನಿರ್ಧರಿಸಬಹುದು.

ಚಾವುಂಡನಿಗೆ ದೇವಲದೇವಿ ಎಂಬ ಹೆಂಡತಿ ಇದ್ದು, ಅವಳಿಂದ ಆಚಿದೇವ ಮತ್ತು ಪೆರ್ಮಾಡಿ ಎಂಬ ಇಬ್ಬರು ಮಕ್ಕಳು ಇದ್ದರೆಂದು ಪಟ್ಟದಕಲ್ಲಿನ ಒಂದು ಶಾಸನದಿಂದ ತಿಳಿದುಬರುತ್ತದೆ.[೧೧೮] ಈ ಶಾಸನದ ಕಾಲ ಕ್ರಿ.ಶ. ೧೧೬೨ ಎಂದಿದ್ದು, ಆಗ ಚಾವುಂಡನು ಅಧಿಕಾರದಲ್ಲಿದ್ದನು. ಆಗಲೇ ಅವನ ಮಗ ಕುಮಾರ ಆಚಿದೇವನು ತನ್ನ ತಾಯಿ ದೇಮಲದೇವಿಯೊಡನೆ ಪಟ್ಟದಕಿಸುವೊಳಲ್ ಅಂದರೆ ಈಗಿನ ಪಟ್ಟದಕಲ್ಲನ್ನು ಕುಮಾರವೃತ್ತಿಯಾಗಿ ಆಳುತ್ತಿದ್ದನೆಂದು ಹೇಳಿದೆ. ಕುಮಾರವೃತ್ತಿ ಎಂದರೆ ಚಿಕ್ಕರಾಜಕುಮಾರನಿಗೆ ತಂದೆಯು ಕೊಟ್ಟ ಬಳುವಳಿಯೆಂದು ಅರ್ಥವಾಗುತ್ತದೆ. ಅಂದರೆ ಚಾವುಂಡನು ಅವನನ್ನು ಯುವರಾಜನನ್ನಾಗಿ ಪಟ್ಟದಕಲ್ಲಿನ ಅಧಿಕಾರಿ ಎಂದು ನೇಮಿಸಿದನೆಂದು ಅರ್ಥವಾಗುತ್ತದೆ. ಆದರೆ ಮುಂದೆ ಈ ಆಚಿದೇವನ ಹಾಗೂ ಅವನ ತಮ್ಮ ಪೆರ್ಮಾಡಿದೇವನ ಬಗ್ಗೆ ಏನೂ ತಿಳಿದುಬರುವುದಿಲ್ಲ. ಏಕೆಂದರೆ ಚಾವುಂಡನ ತರುವಾಯ ಅವನ ಇನ್ನೊಬ್ಬ ಹೆಂಡತಿ ಸಿರಿಯಾದೇವಿಯಿಂದ ಹುಟ್ಟಿದ ಬಿಜ್ಜಳ ಮತ್ತು ವಿಕ್ರಮರು ಪಟ್ಟಕ್ಕೆ ಬಂದರೆಂದು ಶಾಸನಗಳಿಂದ ತಿಳಿದು ಬರುತ್ತದೆ. ಸಿರಿಯಾದೇವಿಯು ಕಳಚೂರಿ ಬಿಜ್ಜಳ ಮಗಳೆಂದು ರೋಣ ಶಾಸನದಲ್ಲಿ ಸ್ಪಷ್ಟವಾಗಿ ಹೇಳಿದೆ.[೧೧೯] ಈ ಶಾಸನದ ಕಾಲ ಕ್ರಿ.ಶ. ೧೧೭೯ ಸಾಮಾನ್ಯವಾಗಿ ಕೆಲವು ಶಾಸನಗಳಲ್ಲಿ ಇಬ್ಬರೂ ಜೊತೆಯಾಗಿಯೇ ಹೆಸರಿಸಲ್ಪಟ್ಟಿದ್ದಾರೆ. ಈ ಇಬ್ಬರೂ ಅಣ್ಣತಮ್ಮಂದಿಯರು ಜೊತೆಯಾಗಿಯೇ ಸಾಮಂತಿಕೆ ಪಡೆದು ಅಧಿಕಾರ ನಡೆಸುತ್ತಿದ್ದರೆಂದು ಊಹಿಸಬಹುದಾಗಿದೆ. ಆದರೆ ಕೆಲವು ಶಾಸನಗಳಲ್ಲಿ ಇಬ್ಬರೂ ಪ್ರತ್ಯೇಕವಾಗಿ ಹೆಸರಿಸಲ್ಪಟ್ಟಿದ್ದಾರೆ. ಉದಾಹರಣೆಗೆ ಕ್ರಿ.ಶ. ೧೧೭೩ರ ಹರ್ತಿ ಶಾಸನದಲ್ಲಿ[೧೨೦] ವೀರಬಿಜ್ಜಣದೇವ ಎಂದು ಬಿಜ್ಜಳನೊಬ್ಬನ ಹೆಸರಷ್ಟೇ ಬರುತ್ತದೆ. ಅದೇ ರೀತಿಯಾಗಿ ಕ್ರಿ.ಶ. ೧೧೭೪ ರ ನಿಡಗುಂದಿ ಶಾಸನದಲ್ಲಿ ಬಿಜ್ಜಳನೊಬ್ಬನ ಹೆಸರಿದೆ.[೧೨೧] ಕ್ರಿ.ಶ. ೧೧೭೯ ರ ರೋಣ ಶಾಸನದಲ್ಲಿ.[೧೨೨] ವಿಕ್ರಮಾದಿತ್ಯನೊಬ್ಬನೇ ಹೆಸರಿಸಲ್ಪಟ್ಟಿದ್ದಾನೆ. ಕ್ರಿ.ಶ. ೧೧೮೬–೧೧೮೭ ರ ಸೂಳೇಭಾವಿ ಶಾಸನದಲ್ಲಿ ಇಬ್ಬರೂ ಕೂಡಿಯೇ ಭೂಮಿದಾನ ಮಾಡಿದ ಉಲ್ಲೇಖವಿದೆ.[೧೨೩] ಅಣ್ಣಿಗೇರಿಯ ಒಂದು ಶಾಸನದಲ್ಲಿ ಇಬ್ಬರು ಕೂಡಿಯೇ ರಾಜಧಾನಿ ಯರಂಬರಗೆಯಿಂದ ಆಳುತ್ತಿದ್ದರೆಂದು ಹೇಳಿದೆ.[೧೨೪] ಇದರಿಂದ ಚಾವುಂಡನ ನಂತರ ಕೆಲಕಾಲ ಪ್ರತ್ಯೇಕವಾಗಿ ಆಳುತ್ತಿದ್ದು, ಮುಂದೆ ಇಬ್ಬರು ಕೂಡಿ ಆಳತೊಡಗಿದರೆಂದು ಸೂಚಿಸಬಹುದು. ಇದಕ್ಕೆ ಒಂದು ಕಾರಣ ಊಹಿಸಬಹುದು. ಕಳಚುರಿ ೨ನೇ ಬಿಜ್ಜಳನ ನಂತರ ರಾಜ್ಯದ ಮೇಲೆ

ಕಳಚುರಿಗಳ ಹಿಡಿತ ಸಡಿಲವಾಯಿತು. ಬಿಜ್ಜಳನಿಂದ ಉಚ್ಚಾಟಿಸಲ್ಪಟ್ಟ ೩ನೇ ತೈಲನ ಮಗನಾದ ೪ನೇ ಸೋಮೇಶ್ವರನು ಕಳಚುರಿಗಳನ್ನು ಉಚ್ಚಾಟಿಸಿ ಚಾಲುಕ್ಯ ಆಧಿಪತ್ಯವನ್ನು ಮತ್ತೆ ಸ್ಥಾಪಿಸಿದನು. ಈ ಬದಲಾವಣೆಯಲ್ಲಿ ಸಿಂದ ಸಾಮಂತರ ಸ್ಥಾನಮಾನಕ್ಕೂ ಧಕ್ಕೆ ಬಂದಿರಬೇಕು. ಹೀಗಾಗಿ ತಮ್ಮ ಸ್ಥಾನಮಾನ ಭದ್ರಪಡಿಸಿಕೊಳ್ಳಲು ಇಬ್ಬರು ಅಣ್ಣತಮ್ಮಂದಿಯರು ಒಟ್ಟಾಗಿಯೇ ತಮ್ಮ ಪ್ರದೇಶದ ರಕ್ಷಣೆಯನ್ನು ಮಾಡಲು ನಿರ್ಧರಿಸಿರಬೇಕು. ಈ ಪ್ರಸಂಗದಲ್ಲಿ ಅವರು ಚಾಲುಕ್ಯ ಸೋಮೇಶ್ವರನ ಆಧಿಪತ್ಯವನ್ನು ಒಪ್ಪಿಕೊಂಡರು.[೧೨೫] ಸೋಮೇಶ್ವರನ ಆಳಿಕೆ ಬಹಳ ಕಾಲ ಉಳಿಯಲಿಲ್ಲ. ಸೇವುಣರ ಆಕ್ರಮಣದಿಂದಾಗಿ ಸೋಮೇಶ್ವರನೇ ಚಾಲುಕ್ಯರ ಕೊನೆಯ ಅರಸನಾದನು. ಕ್ರಿ.ಶ. ೧೧೮೮ ರ ಹೊತ್ತಿಗೆ ಚಾಲುಕ್ಯ ಆಳಿಕೆ ಕೊನೆಗೊಂಡಿತು. ಅದರೊಂದಿಗೆ ಸಿಂದ ಮನೆತನದ ಸಾಮಂತಿಕೆಯು ಕೊನೆಗೊಂಡಿತು. ಈ ಮನೆತನದ ಸಾಮಂತರಾದ ಬಿಜ್ಜಳ ಮತ್ತು ವಿಕ್ರಮಾದಿತ್ಯರು. ಇವರ ಅಧಿಕಾರ ಅವಧಿಯು ಕ್ರಿ.ಶ. ೧೧೭೦ ರಿಂದ ೧೧೯೦ ಎಂದು ನಿರ್ಧರಿಸಬಹುದು. ಈ ಸಂದರ್ಭದಲ್ಲಿ ಬಿ.ಆರ್. ಗೋಪಾಲ ಅವರ ಅಭಿಪ್ರಾಯ ಪರಿಶೀಲಿಸಬಹುದು. ಸೇವುಣ ಸಿಂಗಣನ ಕಾಲ ಕ್ರಿ.ಶ. ೧೧೨೦ರ[೧೨೬] ಶಾಸನದಲ್ಲಿ ಮಹಾಮಂಡಳೇಶ್ವರ ವಿಕ್ರಮಾದಿತ್ಯದೇವರಸ ಎಂಬವನ ಹೆಸರಿದ್ದು ಅವನು ಸಿಂದ ವಿಕ್ರಮಾದಿತ್ಯನಾಗಿರಬಹುದು. ಹಾಗಿದ್ದಲ್ಲಿ ಅವನು ಸೇವುಣ ಸಿಂಘಣನ ಆಧಿಪತ್ಯ ಒಪ್ಪಿಕೊಂಡು ಕನಿಷ್ಠ ಕ್ರಿ.ಶ. ೧೧೨೦ ರ ವರೆಗೆ ಅಧಿಕಾರದಲ್ಲಿದ್ದನೆಂದು ಅಭಿಪ್ರಾಯಪಡುತ್ತಾರೆ.[೧೨೭] ಇದೇ ಶಾಸನದ ಆಧಾರದ ಮೇಲಿಂದ ಪಂಚಮುಖಿಯವರು ಸಹ ಸಿಂದ ವಿಕ್ರಮನು ಸೇವುಣ ಸಿಂಘಣನ ಅಧೀನನಾದನೆಂದು ಹೇಳುತ್ತಾರೆ. ಆದರೆ ಈ ಶಾಸನದಲ್ಲಿ ಬರುವ ವಿಕ್ರಮಾದಿತ್ಯನು ಸಿಂದ ಸಾಮಂತನೆಂದು ತೋರಿಸುವ ಯಾವ ಸೂಚನೆಗಳು ಇಲ್ಲ.[೧೨೮] ಆದ್ದರಿಂದ ಅವನು ಸಿಂದ ಮನೆತನದವನಾಗಿರಲಿಕ್ಕಿಲ್ಲ ಎಂಬುದು ನಮ್ಮ ಅಭಿಪ್ರಾಯವಾಗಿದೆ.

ಮೇಲಿನ ಚರ್ಚೆಯನ್ನು ಒಟ್ಟುಗೂಡಿಸಿ ಸಿಂದ ಸಾಮಂತರ ವಂಶಾವಳಿಯನ್ನು ಅವರ ಸಾಮಂತಿಕೆಯ ಕಾಲಾನುಕ್ರಮಗಳನ್ನು ಈ ಕೆಳಗೆ ತೋರಿಸಲಾಗಿದೆ.




## ರಾಜಕೀಯ ಚರಿತ್ರೆ

ಮೇಲೆ ನೋಡಿದಂತೆ ಯಲಬುರ್ಗಿ ಸಿಂದರ ಆಳಿಕೆಯ ಆರಂಭವು ಕಲ್ಯಾಣ ಚಾಲುಕ್ಯರ ಉಚ್ಛ್ರಾಯ ಕಾಲದಿಂದ ಆರಂಭವಾಗಿ ಚಾಲುಕ್ಯರ ಆಳಿಕೆಯ ಕೊನೆಯೊಂದಿಗೆ ಮುಕ್ತಾಯವಾಗುತ್ತದೆ. ಅವರ ರಾಜಕೀಯ ಚಟುವಟಿಕೆಗಳು ಇತರ ಎದುರಾಳಿಗಳೊಡನೆ ಮಾಡಿದ ಹೋರಾಟಗಳು, ವಿಜಯಗಳು ಚಾಲುಕ್ಯ ಅರಸರ ರಾಜಕೀಯ ಚಟುವಟಿಕೆಗಳಿಗೆ ಸಂಬಂಧಿಸಿದವುಗಳಾಗಿವೆ. ಮಾಂಡಲಿಕರಾದುದರಿಂದ ಆಳರಸರಿಗೆ ಬೆಂಬಲವಾಗಿ ಅಥವಾ ಅಪ್ಪಣೆಯಂತೆ ಕಾರ್ಯ ಮಾಡಬೇಕಾಗಿದ್ದಿತು. ಸ್ವತಂತ್ರವಾಗಿ ಯುದ್ಧ ಹೂಡುವ ಅಥವಾ ದಾಳಿಗಳನ್ನು ಮಾಡುವ ಸ್ವಾತಂತ್ರ್ಯ ಅವರಿಗೆ ಇರುತ್ತಿರಲಿಲ್ಲ. ತಮ್ಮ ಆಡಳಿತ ಪ್ರದೇಶದ ಮಟ್ಟಿಗೆ ಅವರು ತಮ್ಮದೇ ಆದ ಸೈನ್ಯವನ್ನು ಕಟ್ಟಿರುತ್ತಿದ್ದರು. ಹೆಚ್ಚಾಗಿ ಅದು ಆಳರಸರಿಗಾಗಿಯೇ ಎಂಬುದು ಸ್ಪಷ್ಟ. ಈ ಚಟುವಟಿಕೆಗಳನ್ನು ಪರಾಮರ್ಶಿಸುವಾಗ ಅಂದಿನ ಕರ್ನಾಟಕದಲ್ಲಿನ ರಾಜಕೀಯ ಪರಿಸ್ಥಿತಿಗಳನ್ನು ಅವಲೋಕಿಸುವುದು ಅಗತ್ಯವಾಗುತ್ತದೆ. ಅಂದಿನ

ಪರಿಸ್ಥಿತಿಗಳಿಗನುಗುಣವಾಗಿಯೇ ಸಾಮಂತರೂ ಸಹ ಕಾರ್ಯ ಕೈಕೊಂಡರು ಎಂದು ಹೇಳಲೂಬಹುದು.

ಈ ಮನೆತನದ ಮೊದಲ ಸಾಮಂತ ೧ನೇ ಆಚುಗಿ ಅಧಿಕಾರಕ್ಕೆ ಬಂದಾಗ ಚಾಲುಕ್ಯ ಸಾಮ್ರಾಜ್ಯವು ಏರಿಕೆಯ ಕಾಲದಲ್ಲಿ ಇದ್ದಿತು. ಮೇಲೆ ನೋಡಿದಂತೆ ಆಗ ೬ನೇ ವಿಕ್ರಮಾದಿತ್ಯನು ಮುಂಚೂಣಿಯಲ್ಲಿದ್ದನು. ಬಲು ಮಹತ್ವಾಕಾಂಕ್ಷಿಯಾದ ಇವನು ಅರಸನಾಗುವ ಭರದಲ್ಲಿ ತನ್ನ ಅಣ್ಣನ ಹಕ್ಕನ್ನು ಪ್ರಶ್ನಿಸಿದನು. ತನ್ನ ಬೆಂಬಲಿಗ ಮಾಂಡಲಿಕರನ್ನು ಸೇರಿಸಿಕೊಂಡು, ಅಣ್ಣನೊಡನೆ ಹೋರಾಡಿ, ಕೊನೆಗೂ ಚಾಲುಕ್ಯ ಸಿಂಹಾಸನವನ್ನು ಪಡೆದುಕೊಂಡನು. ಈ ಕೃತಿಯಲ್ಲಿ ತಪ್ಪು ಒಪ್ಪುಗಳು ಏನೇ ಇರಲಿ, ಚಾಲುಕ್ಯ ಸಾಮ್ರಾಜ್ಯಕ್ಕೆ ಅದರಿಂದ ಒಳಿತು ಆಯಿತು. ಅದಕ್ಕೊಬ್ಬ ಸಮರ್ಥ ಅರಸ ದೊರೆತು ಇಡೀ ಕರ್ನಾಟಕವು ಸರ್ವತೋಮುಖ ಬೆಳವಣಿಗೆಯನ್ನು, ಕೀರ್ತಿಯನ್ನು ಕಂಡಿತು. ವಿಕ್ರಮಾದಿತ್ಯನಿಗಿಂತ ಮೊದಲು ಅವನ ತಂದೆಯ ಕಾಲದಲ್ಲಿ ಸಾಮ್ರಾಜ್ಯವು ದಕ್ಷಿಣದ ಚೋಳರ ನಿರಂತರ ದಾಳಿಗಳಿಂದ ತತ್ತರಿಸಿ ಹೋಗಿದ್ದಿತು. ಬಲಾಢ್ಯ ವಿಕ್ರಮಾದಿತ್ಯನು ಅರಸನಾದಾಗ ಚೋಳರ ಹಾವಳಿಗಳು ತಗ್ಗಿದವು. ವಿಕ್ರಮಾದಿತ್ಯನ ೫೦ ವರ್ಷಗಳ ಸುಧೀರ್ಘ ಆಳಿಕೆಯಲ್ಲಿ ಸಾಮ್ರಾಜ್ಯದಲ್ಲಿ ಶಾಂತಿ, ಸುವ್ಯವಸ್ಥೆಗಳ ಜೊತೆಗೆ ಧರ್ಮ, ಸಾಹಿತ್ಯ, ಕಲೆ ಮುಂತಾದವುಗಳು ಅಭಿವೃದ್ಧಿ ಹೊಂದಿದವು. ಯಾವ ಮಾಂಡಲಿಕರು ಆಡಳಿತದ ವಿರುದ್ಧ ತಲೆ ಎತ್ತುವಂತಿರಲಿಲ್ಲ. ಆಗ ಚೋಳರ ದೃಷ್ಟಿ ಪೂರ್ವ ದಿಕ್ಕಿನಲ್ಲಿ ಅಂದರೆ ಈಗಿನ ಆಂಧ್ರಪ್ರದೇಶ ಭಾಗದಲ್ಲಿ ಅಧಿಕಾರದಲ್ಲಿದ್ದ ಪೂರ್ವದ ಚಾಲುಕ್ಯರು (Eastern Chalukyas) ಎಂದು ಹೆಸರಾದ ಚಾಲುಕ್ಯ ಸಾಮ್ರಾಜ್ಯದತ್ತ ಹೊರಳಿತು. ಇವರೂ ಚಾಲುಕ್ಯ ಮಾಂಡಲಿಕರೇ. ಚೋಳ ಅರಸನು ಆ ಪ್ರದೇಶಗಳನ್ನು ಆಕ್ರಮಿಸಲು ಸತತ ಪ್ರಯತ್ನ ಮಾಡಿದನು. ವಿಕ್ರಮಾದಿತ್ಯನು ಅವನ ಆಟ ನಡೆಯಗೊಡಲಿಲ್ಲ. ಅವನ ಆಳಿಕೆಯ ಕೊನೆ ಕೊನೆಗೆ ಉತ್ತರ ಗಡಿಯಲ್ಲಿ ಸೇವುಣರು ಮತ್ತು ದಕ್ಷಿಣದ ಗಡಿಯಲ್ಲಿ ಹೊಯ್ಸಳರು ಆಗಾಗ ತಲೆ ಎತ್ತುವ ಪ್ರಯತ್ನ ಮಾಡುತ್ತಿದ್ದರು ಮತ್ತು ರಾಜ್ಯದೊಳಗೆ ಚಾಲುಕ್ಯರ ನೆಂಟನೆ ಆದ ಕಳಚುರಿ ಬಿಜ್ಜಳನ ಉಪಟಳವು ಇದ್ದಿತು. ಸ್ವತಃ ವಿಕ್ರಮಾದಿತ್ಯನು ಮತ್ತು ಅನೇಕ ಮಾಂಡಲಿಕರು ಇಂತಹ ದಂಗೆಗಳನ್ನು ಹತ್ತಿಕ್ಕಿದರು.

ವಿಕ್ರಮಾದಿತ್ಯನ ಕೊನೆಯ ನಂತರ ಬಿಜ್ಜಳನ ಆಸೆ ಗರಿಗೆದರಿತು. ೨ನೇ ಜಗದೇಕಮಲ್ಲನ ಕಾಲದಿಂದಲೇ ತನ್ನ ಸ್ವಾತಂತ್ರಾಕಾಂಕ್ಷೆಯನ್ನು ತೀವ್ರಗೊಳಿಸಿ ಜಗದೇಕಮಲ್ಲನ ತಮ್ಮನಾದ ೩ನೇ ತೈಲನನ್ನು ಉಚ್ಚಾಟಿಸಿ, ತಾನೇ ಚಾಲುಕ್ಯ ಸಾಮ್ರಾಜ್ಯದ ಅಧಿಪತಿಯಾದನು. ಈ ಕ್ಷಿಪ್ರ ಕಾಂತ್ರಿಯ

ಪರಿಣಾಮ ಬಹುಕಾಲ ಉಳಿಯಲಿಲ್ಲ. ಕಳಚುರಿಗಳ ಆಳಿಕೆ ಕೇವಲ ೨೦ ವರ್ಷಗಳಿಗೆ ಮಾತ್ರ ಸೀಮಿತವಾಯಿತು. ೩ನೇ ತೈಲಪನ ಮಗನಾದ ೪ನೇ ಸೋಮೇಶ್ವರ ಅವರನ್ನು ಹಿಮ್ಮೆಟ್ಟಿಸಿ ಚಾಲುಕ್ಯರ ಮೇಲ್ಮೆಯನ್ನು ಮತ್ತೆ ಸ್ಥಾಪಿಸಿದನು. ಆದರೆ ಅದು ಕೂಡ ಬಹಳ ದಿನ ಉಳಿಯಲಿಲ್ಲ. ವಿಕ್ರಮಾದಿತ್ಯನ ಕಾಲದಿಂದಲೂ ತುಂಗಭದ್ರೆಯನ್ನು ದಾಟಿ ಬೆಳ್ವೊಲ ದೇಶದ ಮೇಲೆ ಕಾಲೂರಲು ಹವಣಿಸುತ್ತಿದ್ದ. ಹೊಯ್ಸಳ ವಿಷ್ಣುವರ್ಧನನಿಗೆ ಸಾಕಷ್ಟು ಅವಕಾಶಗಳು ದೊರೆಯಲಿಲ್ಲ. ಅವನ ಮೊಮ್ಮಗ ೨ನೇ ಬಲ್ಲಾಳನು ಚಾಲುಕ್ಯ ಸಾಮ್ರಾಜ್ಯದ ಒಳ ಹೋಗಲು ಯಶಸ್ವಿಯಾದನು. ಇತ್ತ ಉತ್ತರದ ಗಡಿಯಲ್ಲಿಯ ಸೇವುಣರು ಇದೇ ಅವಕಾಶ ಬಳಸಿಕೊಂಡರು. ಕಲ್ಯಾಣದ ಮೇಲೆ ಕಣ್ಣನ್ನು ಇರಿಸಿದರು. ಆ ವಂಶದ ೫ನೇ ಬಿಲ್ಲಮನು ಚಾಲುಕ್ಯ ಸೋಮೇಶ್ವರನನ್ನು ನೇರವಾಗಿ ಎದುರಿಸಿದನು. ಸೋಲು ಗೆಲುವುಗಳು ಆಚೀಚೆ ಹೋಯ್ದಾಡಿದರೂ ಈ ಗುದ್ದಾಟದಲ್ಲಿ ಚಾಲುಕ್ಯ ಸೋಮೇಶ್ವರ ರಾಜ್ಯ ಬಿಟ್ಟು ಹೋಗಬೇಕಾಯಿತು. ಆಗ ಚಾಲುಕ್ಯ ಸಾಮ್ರಾಜ್ಯ ಇಬ್ಭಾಗವಾಗಿ ಉತ್ತರದ ಭಾಗವು ಸೇವುಣರ ಮತ್ತು ದಕ್ಷಿಣ ಭಾಗವು ಹೊಯ್ಸಳರ ಪಾಲಾಗಿ ಸ್ವತಂತ್ರ ರಾಜ್ಯಗಳಾದವು.

ಇತ್ತ ಪೂರ್ವದ ಕಡೆಯಲ್ಲಿ ಹಿಂದೊಮ್ಮೆ ಚಾಲುಕ್ಯ ಮಾಂಡಲಿಕರಾಗಿದ್ದ ಕಾಕತೀಯರು ಬಲಿಯತೊಡಗಿದರು. ಈ ಅನಿಶ್ಚಿತ ರಾಜಕೀಯ ಪರಿಸ್ಥಿತಿ ಲಾಭ ಪಡೆದು ಅವರು ಸ್ವತಂತ್ರ ಕಾಕತೀಯ ರಾಜ್ಯ ಸ್ಥಾಪಿಸಿದರು. ನರ್ಮದೆಯಿಂದ ಕಾವೇರಿಯವರೆಗೆ ಹಬ್ಬಿದ್ದ ಚಾಲುಕ್ಯ ಸಾಮ್ರಾಜ್ಯ ಈಗ ಮೂರು ತುಂಡಾಯಿತು. ಇತನ ಮಾಂಡಲಿಕನಂತೆ ಯಲಬುರ್ಗಿ ಸಿಂದರು ಇಂಥಹ ಪರಿಸ್ಥಿತಿಯ ನಡುವೆಯೇ ತಮ್ಮ ಚಟುವಟಿಕೆಗಳನ್ನು ನಡೆಸಿದರು. ಆಳರಸರ ಬೆಂಬಲಿಗರಾಗಿ ರಾಜ್ಯ ರಕ್ಷಣೆಯ ಕಾರ್ಯದಲ್ಲಿ ಭಾಗವಹಿಸಿದರೂ ಆಳರಸರ ಶಕ್ತಿ ಕುಗ್ಗಿದಾಗ ತಮ್ಮ ನಿಷ್ಠೆಯನ್ನು ಬದಲಾಯಿಸುವುದು ಅಗತ್ಯವಾಯಿತು. ಇವರೆಗೆ ನೋಡಿದಂತೆ ಚಾಲುಕ್ಯರಿಗೆ ನಿಷ್ಠರಾಗಿದ್ದ ಸಿಂದರು ಕಳಚುರಿ ಬಿಜ್ಜಳನ ಆಧಿಪತ್ಯವನ್ನು ಒಪ್ಪಿಕೊಂಡರು. ಆದರೆ ಸಾಧ್ಯವಾದಷ್ಟು ಕಾಲ ಚಾಲುಕ್ಯರಿಗೆ ನಿಷ್ಠರಾಗಿ ಅವರ ರಾಜ್ಯ ರಕ್ಷಣೆಯಲ್ಲಿ ಪ್ರಮುಖ ಪಾತ್ರ ವಹಿಸಿದ್ದರು. ಈ ಹಿನ್ನಲೆಯಲ್ಲಿ ನಾವು ೧ನೇ ಆಚುಗಿಯಿಂದ ಹಿಡಿದು ಬಿಜ್ಜಳ ವಿಕ್ರಮಾದಿತ್ಯರ ವರೆಗಿನ ಸಾಮಂತರ ರಾಜಕೀಯ ಚಟುವಟಿಕೆಗಳನ್ನು ಗಮನಿಸಬೇಕು.

೧ನೇ ಆಚುಗಿಯು ಸುಮಾರು ಕ್ರಿ.ಶ. ೧೦೭೦ ರಲ್ಲಿ ಅಧಿಕಾರಕ್ಕೆ ಬಂದಿರಬಹುದೆಂದು ಮೇಲೆ ಸೂಚಿಸಿದ್ದೇವೆ. ಅದು ಚಾಲುಕ್ಯ ೨ನೇ ಸೋಮೇಶ್ವರನ ಆಳಿಕೆಯ ಕಾಲ. ೬ನೇ ವಿಕ್ರಮಾದಿತ್ಯನು ಅಣ್ಣನನ್ನು ಪದಚ್ಯುತಗೊಳಿಸಿ ಚಾಲುಕ್ಯ ಸಿಂಹಾಸನವನ್ನು ತಾನೇ

ಪಡೆಯಲು ಹವಣಿಸುತ್ತಿದ್ದ ಕಾಲ, ಇದರಲ್ಲಿ ಆಚುಗಿಯ ಪಾತ್ರವೇನು ಎಂಬುದು ಸ್ಪಷ್ಟವಿರದ್ದಿದ್ದರೂ ಅವನು ವಿಕ್ರಮಾದಿತ್ಯನಿಗೆ ಬೆಂಬಲವಾಗಿ ನಿಂತುದುದಷ್ಟೇ ಅಲ್ಲದೇ ಈ ಕಾದಾಟದಲ್ಲಿ ಸಕ್ರೀಯವಾಗಿ ಭಾಗವಹಿಸಿದ್ದ ಎನಿಸುತ್ತದೆ. ಈ ಬಗ್ಗೆ ವಿವರಗಳು ಇಲ್ಲದಿದ್ದರೂ, ಸೂಡಿಯ ಒಂದು ಶಾಸನವು ಅವನನ್ನು "ವಿಕ್ರಮ ಭೂಪನ ಕಟ್ಟಿದಲಗಿನಂತೆಸೆವೆಂ" ಎಂದು ಮಾರ್ಮಿಕವಾಗಿ ಹೇಳುತ್ತದೆ.[೧೨೯] ಅಂದರೆ ವಿಕ್ರಮಾದಿತ್ಯನ ಪರವಾಗಿ ಶೌರ್ಯದಿಂದ ಹೋರಾಡಿದನು ಎಂದು ಸೂಚಿತವಾಗುತ್ತದೆ. ಅವನು ಪಟ್ಟಕ್ಕಾಗಿ ನಡೆಸಿದ ಹೋರಾಟದಲ್ಲಿ ಇವನು ಮುಂಚೂಣಿಯಲ್ಲಿದ್ದು, ಭಾಗವಹಿಸಿದನೆಂದು ತರ್ಕಿಸಬಹುದು. ನರೇಗಲ್ಲಿನ ಒಂದು ಶಾಸನವು.[೧೩೦] ಅವನು ಚಾಲುಕ್ಯ ಅರಸನ ಮುಂದೆ "ಹಟ್ಟಿಗಾಳಗದೊಳ್" ಮೆರೆದನೆಂದು ಬಣ್ಣಿಸುತ್ತದೆ. ಹೀಗೆ ಸಾಂಪ್ರದಾಯಿಕವಾಗಿ ಅವನೊಬ್ಬ ಶೂರನಾದ ಸೈನಿಕನೆಂದು ಬಣ್ಣಿಸಿದ್ದರೂ, ಅಂದಿನ ಪ್ರಸಂಗದಲ್ಲಿ ಅವನ ಪಾತ್ರವನ್ನು ಊಹಿಸಿಕೊಳ್ಳಬಹುದಾಗಿದೆ. ಆಚರಸನ ಮಗ ಬಮ್ಮರಸನು ಅಂದಿನ ಅರಸನಾದ ಭೂಲೋಕಮಲ್ಲ ೩ನೇ ಸೋಮೇಶ್ವರ ನೆಚ್ಚಿನ ಬಂಟನಾಗಿದ್ದು ಭೂಲೋಕಮಲ್ಲ ಪೆರ್ಮಾನಡಿ ಎಂಬ ಬಿರುದನ್ನು ಪಡೆದಿದ್ದನೆಂಬುದನ್ನು ಬಿಟ್ಟರೆ ಹೆಚ್ಚಿನ ವಿವರಗಳು ದೊರೆಯುವುದಿಲ್ಲ. ಆಚುಗಿಯ ತಮ್ಮನ ಮಗ ೨ನೇ ಆಚುಗಿಯು ರಾಜ್ಯದಲ್ಲಿ ಹೆಚ್ಚು ಪ್ರಭಾವಶಾಲಿಯಾಗಿದ್ದನು. ಅವನೂ ಸಹ ವಿಕ್ರಮಾದಿತ್ಯನ ಮಾಂಡಲಿಕನೇ ಆಗಿದ್ದೂ ರಾಜ್ಯ ನಿರ್ವಹಣೆಯಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದನು. ಅವನ ಹಲವಾರು ಬಿರುದುಗಳಲ್ಲಿ "ಸಾಕ್ಷರಿಕಸಮುದ್ದರಣ" ಸಾಹಿತ್ಯದಲ್ಲಿನ ಅವನ ಆಸಕ್ತಿಯನ್ನು ತೋರಿಸುವಂತಿದೆ. ಹಲವಾರು ಸಿಂದ ಶಾಸನಗಳು ಅವನ ಶೌರ್ಯವನ್ನು, ಅವನು ಎದುರಿಸಿ ಸೋಲಿಸಿದ ಮಾಂಡಲಿಕರನ್ನು ಹೆಸರಿಸುತ್ತವೆ. ವಿಕ್ರಮ ಚಕ್ರವರ್ತಿ ಅಂದರೆ ೬ನೇ ವಿಕ್ರಮಾದಿತ್ಯನ ಅಪ್ಪಣೆಯಂತೆ ಹೊಯ್ಸಳ ಗೋವೆಯ ಸಾಮಂತ, ಲಕ್ಷ್ಮ, ಪಾಂಡ್ಯ, ಮಲಪರು, ಕೊಂಕಣ ಸಾಮಂತ ಇವರನ್ನೆಲ್ಲಾ ಬಗ್ಗುಬಡೆದನೆಂದು ಶಾಸನಗಳು ಹೇಳುತ್ತವೆ.[೧೩೧] ಇವು ಒಂದು ರೀತಿಯಿಂದ ಸಾಂಪ್ರದಾಯಿಕ ವರ್ಣನೆ ಎನಿಸಿದರೂ ಇಲ್ಲಿ ಐತಿಹಾಸಿಕ ಘಟನೆಗಳ ಉಲ್ಲೇಖವಿದೆ ಎಂಬುದು ಸ್ಪಷ್ಟವಿದೆ. ವಿಶೇಷವಾಗಿ ಹೊಯ್ಸಳರು ತತ್ವಶಃ ಚಾಲುಕ್ಯರ ಮಾಂಡಲಿಕರಾಗಿದ್ದರು. ಅವರು ಆಗಾಗ ಆಳರಸರ ವಿರುದ್ಧವೇ ದಂಗೆ ಏಳುತ್ತಿದ್ದರು ಎಂಬುದಕ್ಕೆ ಹಲವಾರು ಆಧಾರಗಳಿವೆ. ಹೊಯ್ಸಳ ೧ನೇ ಬಲ್ಲಾಳ ಮತ್ತು ಅವನ ತಮ್ಮ ವಿಷ್ಣುವರ್ಧನನ ಕಾಲದಲ್ಲಿಯಂತೂ ಹೊಯ್ಸಳರ ಉಪಟಳ ಹೆಚ್ಚಾಯಿತು. ಬಲ್ಲಾಳನಿಗಾಗಲಿ ಅವನ ತಮ್ಮ ವಿಷ್ಣುವರ್ಧನನಿಗಾಗಲಿ ತುಂಗಭದ್ರೆ ಆಚೆ ತಮ್ಮ ಪ್ರಭಾವವನ್ನು ಹೆಚ್ಚಿಸಿಕೊಳ್ಳುವ ಮಹತ್ವಾಕಾಂಕ್ಷೆ ಇದ್ದಿತು. ಅವರು ಆ ಪ್ರದೇಶದ ಮೇಲೆ, ಮೇಲಿಂದ ಮೇಲೆ ದಾಳಿ ಮಾಡುತ್ತಿದ್ದುದೇ ಅದಕ್ಕೆ ಸಾಕ್ಷಿಯಾಗಿದೆ. ಬಲ್ಲಾಳನು ಮೊದಲು

ವಿಕ್ರಮಾದಿತ್ಯನನ್ನು ಕೆಣಕುವ ಬದಲು ಅವನ ಮಾಂಡಲಿಕರಾದ ಚಂಗಾಳ್ವರು, ಉಚ್ಚಂಗಿಯ ಪಾಂಡ್ಯರು, ಕದಂಬರು ಇವರನ್ನು ಸೋಲಿಸಲು ಹವಣಿಸುತ್ತಿದ್ದನು. ಎಷ್ಟೋ ಸಲ ಅದರಲ್ಲಿ ಯಶಸ್ವಿಯೂ ಆದನು. ವಿಕ್ರಮಾದಿತ್ಯನು, ವಿಷ್ಣುವರ್ಧನನಿಗೆ ಹೆಚ್ಚು ಸವಲತ್ತು ಕೊಟ್ಟರೂ ಕೊನೆಗೆ ಅದರ ಪರಿಣಾಮ ಹೆಚ್ಚು ವಿಘಾತಕವಾಯಿತು, ಎನಿಸಿದಾಗ ಅವನನ್ನು ನಿಗ್ರಹಿಸಲು ತನ್ನ ಮಾಂಡಲಿಕನನ್ನು ಕಳುಹಿಸಿದನು. ಮೊದಲು ಪರಮಾರ ಜಗ್ಗದೇವನನ್ನು ಈ ಕಾರ್ಯಕ್ಕೆ ಕಳುಹಿಸಿದ. ಜಗ್ಗದೇವನಿಗೆ ಇದರಲ್ಲಿ ಹೆಚ್ಚು ಯಶಸ್ಸು ಸಿಗಲಿಲ್ಲ ಎನಿಸುತ್ತದೆ.[೧೩೨] ಆದರೆ ಮುಂದೆ ವಿಷ್ಣುವರ್ಧನನ್ನು ಬಗ್ಗುಬಡೆಯಲು ಸಿಂದ ೨ನೇ ಆಚುಗಿಯನ್ನು ಕಳುಹಿಸಿದನು. ಆಚುಗಿಯು ವಿಷ್ಣುವರ್ಧನನ್ನು ಸಂಪೂರ್ಣವಾಗಿ ಸೋಲಿಸಿ ತನ್ನ ರಾಜ್ಯಕ್ಕೆ ಹಿಂತಿರುಗವಂತೆ ಮಾಡಿದನು. ಆದರೂ ವಿಷ್ಣುವರ್ಧನನು ತನ್ನ ಆಕ್ರಮಣಕಾರಿ ಚಟುವಟಿಕೆಗಳನ್ನು ಮುಂದುವರೆಸಿದನು. ಉಚ್ಚಂಗಿ ಪಾಂಡ್ಯರು, ಗೋವೆಯ ಕದಂಬರು ಇವರ ವಿರುದ್ಧ ದಾಳಿ ಮಾಡಿ ಅವರನ್ನು ಸೋಲಿಸಿದನು. ವಿಕ್ರಮಾದಿತ್ಯನು ಆಗ ತೀವ್ರವಾದ ಕ್ರಮಗಳನ್ನು ಕೈಗೊಂಡನು. ಸಿಂದ ಆಚುಗಿಯ ನೇತೃತ್ವದಲ್ಲಿ ಗೋವೆಯ ಮೇಲೆ ದಾಳಿ ನಡೆಸಿದನು. ಕದಂಬ ೨ನೇ ಜಯಕೇಶಿಯು ಶರಣಾಗತನಾಗಿ ತನ್ನ ಮಗಳನ್ನು ವಿಕ್ರಮಾದಿತ್ಯನಿಗೆ ಮದುವೆ ಮಾಡಿಕೊಟ್ಟು ಸಂಧಿಯನ್ನು ಸಾಧಿಸಿದನು. ಆಚುಗಿಯು ಉಪ್ಪಿನಕಟ್ಟೆಯನ್ನು ನಾಶ ಮಾಡಿದನು ಎಂಬ ಮಾತು ಪಟ್ಟದಕಲ್ಲಿನ ಶಾಸನದಲ್ಲಿ ಬರುತ್ತದೆ.[೧೩೩] ಈ ಸಾಹಸ ಗೋವೆಯ ಮೇಲಿನ ದಾಳಿಯ ಒಂದು ಭಾಗವಾಗಿದ್ದಿತೆಂದು ಹೇಳಬಹುದು. ದಿನಕರ ದೇಸಾಯಿಯವರು ಉಪ್ಪಿನಕಟ್ಟೆ ಕುಮಟಾ ತಾಲೂಕಿನ ಇಂದಿನ ಸಾನಿಕಟ್ಟೆ ಎಂದು ಗುರುತಿಸಿದ್ದಾರೆ.[೧೩೪] ಹೀಗೆ ಆಚುಗಿಯು ವಿಕ್ರಮಾದಿತ್ಯನ ವಿರೋಧಿ ಮಾಂಡಲಿಕರನ್ನು ಬಗ್ಗು ಬಡೆಯುವುದರಲ್ಲಿ ಯಶಸ್ವಿಯಾದನು. ಅದರಂತೆಯೇ ಪಾಂಡ್ಯನನ್ನು ಹಿಮ್ಮೆಟ್ಟಿಸಿದನು. ಈ ಸಂದರ್ಭದಲ್ಲಿ ಕಣ್ಣೆಗಾಲ, ಹೆಬಸೂರ, ಹೊಸವೀಡು ಎಂಬಲ್ಲಿ ಭೀಕರ ಕದನಗಳಾದವು. ಈ ಯುದ್ಧಗಳಲ್ಲಿ ಆಚುಗಿಯ ಮತ್ತು ಅವನ ಮಗ ಪೆರ್ಮಾಡಿಯ ಪಾತ್ರವು ಹಿರಿದಾಗಿದ್ದಿದಿತು.[೧೩೫] ಇತ್ತಕಡೆ ಶಿಲಾಹಾರರು ತಲೆ ಎತ್ತುತ್ತಿದ್ದರು. ಕ್ರಿ.ಶ. ೧೧೦೦ರ ಮಲಘಾಣ ಶಾಸನವು ವಿಕ್ರಮಾದಿತ್ಯನು ಭೀಮಾನದಿ ದಂಡೆಯ ಮೇಲೆ ಬೀಡು ಬಿಟ್ಟು ಬೋಜನ ಮೇಲೆ ದಾಳಿ ಮಾಡಿದನು ಎಂದು ಹೇಳುತ್ತದೆ. ಈ ಬೋಜನು, ಶಿಲಾಹಾರ ಬೋಜನೇ ಎಂಬುದು ಸ್ಪಷ್ಟವಿದೆ. ಈ ಯುದ್ಧದಲ್ಲಿ ಆಚುಗಿಯು ಭಾಗವಹಿಸಿದ್ದನೆಂದು ಶಾಸನಗಳಿಂದ ತಿಳಿದು ಬರುತ್ತದೆ.[೧೩೬] ಸಹಜವಾಗಿಯೇ ಸಿಂದ ಶಾಸನಗಳು ಆಚುಗಿಯನ್ನು ವೀರಯೋಧನೆಂದು, ಅನೇಕ ಮಾಂಡಲಿಕರನ್ನು ಸೋಲಿಸಿದನೆಂದು ಕೊಂಡಾಡುತ್ತವೆ. ನರೇಗಲ್ಲಿನ ಒಂದು ಶಾಸನವು[೧೩೭] ಹೊಯ್ಸಳ, ಪಾಂಡ್ಯ, ಕೊಂಕಣ ಇತ್ಯಾದಿ ಮಾಂಡಲಿಕರನ್ನು ವಿಕ್ರಮಾದಿತ್ಯನ ಅಪ್ಪಣೆಯಂತೆ

ಸೋಲಿಸಿದನೆಂದು ಹೇಳುವುದರ ಜೊತೆಗೆ ಲಕ್ಷ್ಮ ಎಂಬುವನನ್ನು ಯುದ್ಧದಲ್ಲಿ ಎದುರಿಸಿದನೆಂದು ಅಲ್ಲಕವಡಿಕೆಯ ಸಿಂಗನ ರಾಜ್ಯವನ್ನು ಸೂರೆಗೊಂಡನು ಎಂದು ಹೇಳುತ್ತದೆ. ಆದರೆ ಈ ಲಕ್ಷ್ಮ ಸಿಂಗನನ್ನು ಗುರುತಿಸಲಾಗಿಲ್ಲ.[೧೩೮]

ಆಚುಗಿಯ ಮಗ ಪೆರ್ಮನು ಅಷ್ಟೇ ಪ್ರಭಾವಶಾಲಿಯಾಗಿದ್ದು, ಪ್ರಸ್ತುತ ರಾಜಕೀಯದಲ್ಲಿ ಪ್ರಮುಖ ಪಾತ್ರ ವಹಿಸಿದ್ದನು. ನರೇಗಲ್ಲಿನ ಒಂದು ಶಾಸನವು ಅವನ ಸಾಧನೆಗಳನ್ನು ಹೀಗೆ ಬಣ್ಣಿಸುತ್ತದೆ. ಅವನು ಅನೇಕ ರಾಜರುಗಳನ್ನು ಮೆಟ್ಟಿ ಹಾಕಿದನು ಎಂದು ಸಾಮಾನ್ಯವಾಗಿ ವರ್ಣಿಸುವುದರ ಜೊತೆಗೆ ವಿಶೇಷವಾಗಿ ಅವನ ವಿರೋಧಿಗಳನ್ನು ಹೆಸರಿಸುತ್ತದೆ.[೧೩೯]

ಕುಲಶೇಖರಾಂಕನ ತಲೆಗೊಂಡನು
ಚಟ್ಟನನ್ನು ಮಣಿಸಿದನು, ಜಯಕೇಶಿ
ಹೆದರಿಸಿ ಓಡಿಸಿದನು, ಪ್ರಚಂಡನಾದ
ಹೊಯ್ಸಳ ರಾಜ್ಯ ಕಸಿದುಕೊಂಡನು
ಬಿಟ್ಟಿಗನಿದ್ದ ಘಟ್ಟದ ಪ್ರದೇಶಕ್ಕೆ ದಾಳಿಯಿಟ್ಟು
ದೋರಸಮುದ್ರ, ಬೇಲಪುರಗಳನ್ನು ವಶಪಡಿಸಿಕೊಂಡನು
ವಾಹಡಿಘಟ್ಟದ ವರೆಗೂ ಸಾಗಿ ಹೋದನು
ಬಿಟ್ಟಿಗನ ಬೆಂಬಲಿಗ ಅರಸರನ್ನು ಯುದ್ಧ
ಭೂಮಿಯಲ್ಲಿ ಮಣಿಸಿ ಬಲಾಢ್ಯವಾದ ಆನೆಯನ್ನು
ನಿಗ್ರಹಿಸಿದನು.

ವರ್ಣನೆ ಕಾವ್ಯಮಯವಾಗಿದ್ದರೂ ಐತಿಹಾಸಿಕ ಘಟನೆಗಳನ್ನು ಬಿಂಬಿಸುತ್ತದೆ. ಇವರಲ್ಲಿ ಕುಲಶೇಖರಾಂಕ ಮತ್ತು ಚಟ್ಟ ಎಂಬುವರು ಯಾರು ಎಂಬುದನ್ನು ಸ್ಪಷ್ಟವಾಗಿ ಹೇಳಲಾಗುವುದಿಲ್ಲ. ಸಮಕಾಲೀನ ಈ ಚರಿತ್ರೆಯಲ್ಲಿ ಕುಲಶೇಖರಾಂಕ ಎಂಬ ಹೆಸರು ದಕ್ಷಿಣ ಕನ್ನಡ ಜಿಲ್ಲೆಯ ಆಳುಪ ಮನೆತನದಲ್ಲಿ ಹೆಚ್ಚು ಪ್ರಚಲಿತವಿದ್ದಿತು. ಆಳುಪರು ಹೆಚ್ಚು ಕಡಿಮೆ ಸ್ವತಂತ್ರ ಅರಸರಂತೆ ಆಳಿಕೆ ನಡೆಸಿದರೂ ಚಾಲುಕ್ಯರ ಮತ್ತು ಹೊಯ್ಸಳರ ಮಾಂಡಲೀಕರಾಗಿದ್ದರು. ಈ ವಂಶದಲ್ಲಿ ಕುಲಶೇಖರ ಎಂಬ ಒಬ್ಬ ಅರಸನಿದ್ದು, ಅವನು ೧೨ನೇ ಶತಮಾನದ ಕೊನೆಯ ಭಾಗದಲ್ಲಿ ಅಧಿಕಾರದಲ್ಲಿದ್ದನು. ಕಾಲಾನುಕ್ರಮದ ದೃಷ್ಟಿಯಿಂದ ಅವನು ಆಚುಗಿಯ ಸಮಕಾಲೀನ ಆಗಿದ್ದರೂ, ಆಚುಗಿಗೆ ಆಳುಪರೊಡನೆ ಸಂಘರ್ಷ ಉಂಟಾಗಿತ್ತೇನೋ ಎಂಬ ಸಂಶಯ ಬರುತ್ತದೆ. ಆಳುಪರು ಹೊಯ್ಸಳರೊಡನೆ ಸಖ್ಯದಿಂದ ಇದ್ದರು ಎಂದು ಗಮನಿಸಿದರೆ ಇದು

ಆಶ್ಚರ್ಯವಲ್ಲ. ಖಚಿತವಾಗಿ ಏನನ್ನೂ ಹೇಳಲಾಗದು.[೧೪೦] ಇನ್ನು ಚಟ್ಟನೆಂಬುವನು ಯಾವ ಮನೆತನದವನು ಎಂದು ಗುರುತಿಸಲು ಯಾವ ಆಧಾರಗಳಿಲ್ಲ. ಆಚುಗಿಯು ಎದುರಿಸಿದ ಜಯಕೇಶಿಯು ಗೋವಾ ಕದಂಬ ಮನೆತನದ ೨ನೇ ಜಯಕೇಶಿ ಎಂಬುದು ಸ್ಪಷ್ಟ. ಪೆರ್ಮಾಡಿಯ ತಂದೆ ೨ನೇ ಆಚುಗಿಯು ಇವನನ್ನು ಸೋಲಿಸಿದನೆಂಬ ವಿಷಯವನ್ನು ನೋಡಿದ್ದೇವೆ. ಮೊದಲು ಸೋತಿದ್ದರೂ, ವಿಕ್ರಮಾದಿತ್ಯನ ಕೊನೆಯ ಭಾಗದಲ್ಲಿ ಮತ್ತೆ ತಲೆ ಎತ್ತಿದ್ದರಿಂದ ಪೆರ್ಮಾಡಿಗೆ ಮತ್ತೇ ಅವನನ್ನು ಸದೆ ಬಡೆಯಬೇಕಾದ ಪ್ರಸಂಗ ಬಂದಿರಬೇಕು. ಇನ್ನು ಪ್ರಚಂಡ ಹೊಯ್ಸಳನೆಂದರೆ, ಚಾಲುಕ್ಯರ ಉಗ್ರ ಎದುರಾಳಿಯಾಗಿದ್ದ ವಿಷ್ಣುವರ್ಧನನೇ ಎಂಬುದು ಸ್ಪಷ್ಟ. ಚಾಲುಕ್ಯ ಜಗದೇಕಮಲ್ಲನ ಕಾಲಕ್ಕೆ ಅವನು ಮತ್ತೇ ತನ್ನ ಆಕ್ರಮಕ ಚಟುವಟಿಕೆಗಳನ್ನು ತೀವ್ರಗೊಳಿಸಿದನು. ಆಗ ಪೆರ್ಮಾಡಿಯು ಅವನನ್ನು ನಿಗ್ರಹಿಸುವುದು ಅನಿವಾರ್ಯವಾಯಿತು. ಅದೊಂದು ಹಿರಿದಾದ ಸಾಧನೆ ಎಂದು ಶಾಸನದ ಹೇಳಿಕೆಯಿಂದ ಸೂಚಿತವಾಗುತ್ತದೆ. ಈ ಹೇಳಿಕೆಯಂತೆ ಪೆರ್ಮಾಡಿಯು ಬಿಟ್ಟಿಗನನ್ನು ಅಂದರೆ ವಿಷ್ಣುವರ್ಧನನ್ನು ಬೆನ್ನಟ್ಟಿ ಅವನ ರಾಜಧಾನಿಗಳಾದ ದೊರಸಮುದ್ರ ಮತ್ತು ಬೆಲವೂರು ಅಂದರೆ ಇಂದಿನ ಬೇಲೂರುಗಳನ್ನು ವಶಪಡಿಸಿಕೊಂಡನು. ಒಂದೇ ಶಾಸನದಲ್ಲಿ ಮೂರು ಸಲ ಈ ಘಟನೆಯ ಉಲ್ಲೇಖ ಇರುವುದರಿಂದ ಅದು ಎಷ್ಟು ಭೀಕರವಾಗಿತ್ತು ಎಂದು ತಿಳಿದು ಬರುತ್ತದೆ. ನಿಜವಾಗಿ ಈ ಸಾಧನೆಗಳು ಪೆರ್ಮಾಡಿಯ ತಂದೆ ೨ನೇ ಆಚುಗಿಗೂ ಅನ್ವಯಿಸುತ್ತವೆ. ಅವನ ಈ ಹೋರಾಟಗಳಲ್ಲಿ ಪೆರ್ಮಾಡಿಯು ಪಾಲ್ಗೊಂಡಿದ್ದ ಸಾಧ್ಯತೆಗಳು ಇಲ್ಲದಿಲ್ಲ. ತಾನೇ ಸ್ವತಂತ್ರವಾಗಿ ಜಗದೇಕಮಲ್ಲನ ಪರವಾಗಿ ಈ ದಾಳಿಗಳನ್ನು ಅವನು ನಡೆಸಿದ್ದು ನಿಜವೇ. ಅವನು ಜಗದೇಕ ಮಲ್ಲ ಪೆರ್ಮಾಡಿ ಎಂಬ ಬಿರುದು ಹೊಂದಿದ್ದನ್ನು ನಾವು ಮೇಲೆ ನೋಡಿದ್ದೇವೆ. ಹೊಯ್ಸಳ, ಚಾಲುಕ್ಯರ ತನ್ಮೂಲಕ ಸಿಂದರು ಎಷ್ಟು ಪ್ರಬಲ ವಿರೋಧಿಯಾಗಿದ್ದರೆಂದರೆ, ಪಟ್ಟದಕಲ್ಲಿನ ಅವನ ಶಾಸನವು.[೧೪೧] ವೆಂಗಿ, ಚೇರ, ಚೋಳ, ಮಲಯ, ತುಳು, ಪಲ್ಲವ, ಕೊಂಗಣೆ, ಬನವಾಸಿ, ಕದಂಬಳಿಗೆ, ಹೈವೆ ಎಂಬ ದೇಶಗಳನ್ನೆಲ್ಲ ಕೈವಶ ಮಾಡಿಕೊಂಡು ಆಳುತ್ತಿದ್ದನೆಂದು ವರ್ಣಿಸುತ್ತದೆ. ಅಂಥವನನ್ನು ಬೆನ್ನಟ್ಟಿ ಮದದ ಆನೆಗಳನ್ನು ವಶಪಡಿಸಿಕೊಂಡವನು ಪೆರ್ಮಾಡಿ ಎಂದು ಶಾಸನ ಬಣ್ಣಿಸುತ್ತದೆ.

ಪೆರ್ಮಾಡಿಯು ಹೊಯ್ಸಳ ಅರಸನನ್ನು ಸೋಲಿಸಿ, ಅವನ ಆನೆಗಳನ್ನು ಹಿಡಿದುಕೊಂಡನೆಂಬ ವಿಷಯವನ್ನು ಮೇಲೆ ನೋಡಿದ್ದೇವೆ. ಬೆಂಚಮಟ್ಟಿ (ಎ) ಶಾಸನ[೧೪೨] ಶಾಸನವು ಇದೇ ಸಾಧನೆಯನ್ನು ಪೆರ್ಮಾಡಿಯ ತಮ್ಮ ೨ನೇ ಚಾವುಂಡ ಮಾಡಿದನೆಂದು

ಹೇಳುತ್ತದೆ. ಶಾಸನ ಪೆರ್ಮಾಡಿಯ ಸಾಧನೆಯನ್ನು ಚಾವುಂಡನಿಗೆ ಆರೋಪಿಸಿರಬಹುದು ಎಂದು ಊಹಿಸಬಹುದಾದರೂ, ಬೆಂಚಮಟ್ಟಿ ಶಾಸನದ ಸಂಪಾದಕರಾದ ಶ್ರೀ ಪಂಚಮುಖಿ ಕೂಡಾ ಇದು ಪ್ರತ್ಯೇಕವಾಗಿ ಚಾವುಂಡನ ಸಾಧನೆಯೇ ಆಗಿರಬೇಕೆಂದು ಹೇಳುತ್ತಾರೆ. ಹೊಯ್ಸಳ, ಚಾಲುಕ್ಯರ, ನಡುವಿನ ಸಂಘರ್ಷವು ನಿರಂತರವಾಗಿದ್ದುದರಿಂದ ಚಾವುಂಡನಿಗೆ ಹೊಯ್ಸಳರನ್ನು ಎದುರಿಸುವ ಪ್ರಸಂಗ ಬಂದಿದ್ದರೆ ಆಶ್ಚರ್ಯವೇನಿಲ್ಲ. ಈಗ ಈ ಹೋರಾಟವು ಚಾಲುಕ್ಯ ೩ನೇ ತೈಲನ ಕಾಲದಲ್ಲಿ ಅಥವಾ ಅವನಿಂದ ಚಾಲುಕ್ಯ ಪಟ್ಟ ಕಸಿದುಕೊಂಡ ೨ನೇ ಬಿಜ್ಜಳನ ಕಾಲದಲ್ಲಿ ನಡೆದಿರಬಹುದು. ಚಾವುಂಡನು ಚಾಲುಕ್ಯ ೩ನೇ ತೈಲಪನ ನಿಷ್ಠಾವಂತ ಬಂಟನಾಗಿದ್ದರೂ ಪರಿಸ್ಥಿತಿಯ ಒತ್ತಡದಿಂದಾಗಿ ಬಿಜ್ಜಳನ ಆಧಿಪತ್ಯವನ್ನು ಒಪ್ಪಿಕೊಂಡಿದ್ದೂ ಅಲ್ಲದೇ ಅವನ ಮಗಳು ಸಿರಿಯಾದೇವಿಯನ್ನು ವಿವಾಹವಾದ ವಿಷಯ ಮೇಲೆ ಹೇಳಿದೆ.

ಚಾವುಂಡನ ಇನ್ನೊಂದು ಸಾಧನೆ ಎಂದರೆ ಕಾಮದೇವ ಎಂಬ ಇನ್ನೊಬ್ಬನನ್ನು ಬೆನ್ನಟ್ಟಿದನು. ಈ ಕಾಮದೇವನು ಉಚ್ಛಂಗಿ ಪಾಂಡ್ಯ ಮನೆತನದ ವಿಜಯ ಪಾಂಡ್ಯ ಎಂದು ಪಂಚಮುಖಿಯವರು ತೋರಿಸಿದ್ದಾರೆ.[೧೪೩]

ಚಾವುಂಡನ ನಂತರ ಸಿರಿಯಾದೇವಿಯಿಂದ ಹುಟ್ಟಿದ ಮಕ್ಕಳಾದ ವೀರಬಿಜ್ಜಣ, ವೀರವಿಕ್ರಮ ಇವರು ಅಧಿಕಾರಕ್ಕೆ ಬಂದರು. ಅವನ ಇನ್ನೊಬ್ಬ ಹೆಂಡತಿ ದೇಮಲದೇವಿಯ ಮಕ್ಕಳಾದ ೩ನೇ ಆಚುಗಿ ಮತ್ತು ೨ನೇ ಪೆರ್ಮಾಡಿಯ ಬಗ್ಗೆ ವಿವರಗಳಿರುವುದಿಲ್ಲ. ಅವನು ತನ್ನ ದಾಯಾದಿಗಳಾದ ವೀರಬಿಜ್ಜಳ ಮತ್ತು ವೀರವಿಕ್ರಮನೊಡನೆ ಕಾದಾಡಿ ೪ನೇ ಸೋಮೇಶ್ವರನ ಸಹಾಯದಿಂದ ತನ್ನ ಸಾಮಂತಿಕೆಯನ್ನು ಪಡೆದುಕೊಂಡನೆಂದು ದಿನಕರ ದೇಸಾಯಿ ಅಭಿಪ್ರಾಯಿಸುತ್ತಾರೆ.[೧೪೪] ಒಂದು ವಿಷಯವನ್ನು ಇಲ್ಲಿ ಗಮನಿಸಬೇಕು. ಚಾಲುಕ್ಯ ೪ನೇ ಸೋಮೇಶ್ವರನ ಒಂದು ಶಾಸನವು ಸಿಂದ ಮನೆತನದ ಮಹಾಮಂಡಳೇಶ್ವರ ಆಚಿದೇವನನ್ನು ಹೆಸರಿಸುತ್ತದೆ. ಈ ಆಚಿದೇವನು ೨ನೇ ಚಾವುಂಡನ ಮೊದಲನೆಯ ಹೆಂಡತಿಯ ಮಗನಾದ ೩ನೇ ಆಚಿದೇವ ಎಂದು ಹೇಳಿದೆ. ೩ನೇ ಆಚುಗಿಯು ಕೆಲಕಾಲ ಯುವರಾಜನಾಗಿ ಅಧಿಕಾರದಲ್ಲಿದ್ದನೆಂದು ಉಲ್ಲೇಖಿಸಿದ್ದೇವೆ.

ಆರಂಭದಲ್ಲಿ ಸೂಚಿಸಿದಂತೆ, ಇದು ಕರ್ನಾಟಕದಲ್ಲಿನ ವಿಪ್ಲವ ಕಾಲ. ಸೇವುಣ ೫ನೇ ಬಿಲ್ಲಮನು ಚಾಲುಕ್ಯ ೪ನೇ ಸೋಮೇಶ್ವರ, ಹೊಯ್ಸಳ ೨ನೇ ವೀರಬಲ್ಲಾಳ ಇವರ ನಿರಂತರ ಸಂಘರ್ಷದಿಂದಾಗಿ ಮಾಂಡಲಿಕರ ಅಥವಾ ಸಾಮಂತರ ಸ್ಥಿತಿಗಳಲ್ಲಿ ಏರುಪೇರು ಆದವು. ಒಂದು ಶಾಸನವಂತೂ ಬಲ್ಲಾಳನು ಸೊರಟೂರು, ಎರಂಬರಿಗೆ, ಕುರುಗೋಡು, ಗುತ್ತಿ, ಬೆಳ್ಳಟ್ಟಿಗೆ

ಮುಂತಾದ ಎಲ್ಲ ಆಯಕಟ್ಟಿನ ಸ್ಥಳಗಳನ್ನು ವಶಪಡಿಸಿಕೊಂಡನೆಂದು ಹೇಳಿದೆ.[೧೪೫] ಈ ರಾಜಕೀಯ ಗೊಂದಲದಲ್ಲಿ ಎರಂಬರಿಗೆಯ ಸಿಂದ ಮನೆತನವು ಅಸ್ತಂಗತವಾಯಿತು ಎಂದು ಸ್ಪಷ್ಟವಾಗಿದೆ.

### ೩ – ಕುರುಗೊಡಿನ ಸಿಂದರು

ಬಳ್ಳಾರಿ ಜಿಲ್ಲೆಯ ಕುರುಗೊಡು ಇನ್ನೊಂದು ಸಿಂದ ಮನೆತನದ ಮುಖ್ಯ ಸ್ಥಳವಾಗಿದ್ದಿತು. ಈ ಕುರುಗೊಡು ಬಲ್ಲಕುಂದೆ ಎಂಬ ಪ್ರಾಂತದ ರಾಜಧಾನಿಯೆಂದು ವರ್ಣಿಸಲ್ಪಟ್ಟಿದೆ. ಬಲ್ಲಕುಂದೆ ಪ್ರಾಂತವು ಈ ಸಿಂದ ಮನೆತನದ ಆಳಿಕೆಯಲ್ಲಿದ್ದ ಒಂದು ಪ್ರಾಂತವಾಗಿದ್ದಿತು.[೧೪೬] ಹೀಗಾಗಿ ಇತಿಹಾಸದಲ್ಲಿ ಕುರುಗೊಡಿನ ಸಿಂದರೆಂದೇ ಇವರು ಹೆಸರಾಗಿದ್ದಾರೆ.

ಬೇರೆ ಬೇರೆ ಸಿಂದ ಮನೆತನಗಳು, ಬೇರೆ ಬೇರೆ ಪ್ರದೇಶಗಳಲ್ಲಿ ಆಳುತ್ತಿದ್ದರೂ ಅವೆಲ್ಲವೂ ಮೂಲ ಒಂದೇ ವಂಶಕ್ಕೆ ಸೇರಿದ್ದವೆಂದು ಈ ಮೊದಲೆ ನೋಡಿದ್ದೇವೆ. ಮೂಲ ಸಿಂದರ ಉಗಮದ ಬಗ್ಗೆ ಕೆಲವು ಶಾಸನಗಳಲ್ಲಿ ವಿವರಗಳಿದ್ದು, ಅವುಗಳಲ್ಲಿ ಮೂರು ಶಾಸನಗಳು ಮುಖ್ಯವಾಗಿವೆ. ೧) ದಾವಣಗೇರೆ ತಾಲೂಕಿನ ಹರಿಹರ ಶಾಸನ[೧೪೭] ಭೈರನಮಟ್ಟಿ ಶಾಸನ[೧೪೮] ರಂಜೋಲ ಶಾಸನ.[೧೪೯] ಇವುಗಳಲ್ಲಿಯ ಕಥೆಗಳಲ್ಲಿ ವ್ಯತ್ಯಾಸಗಳಿದ್ದರೂ ಮೂರೂ ಶಾಸನಗಳು ನಿಡುದೋಳ ಸಿಂದನೇ ಮೂಲಪುರಷನೆಂದು ಹೇಳುತ್ತವೆ. ಈ ವಿವರಗಳೆಲ್ಲಾ ಈ ಮೊದಲೇ ಚರ್ಚಿಸಿದ್ದೇವೆ. ಕುರುಗೊಡಿನ ಸಿಂದರ ಶಾಸನಗಳಲ್ಲಿ ವಿವರವಾಗಿ ಈ ಕಥೆ ನಿರೂಪಿತವಾಗಿದ್ದರೂ ನಿಡುದೊಳ ಸಿಂದನ ಉಲ್ಲೇಖವೂ ಇದೆ.[೧೫೦] ಹೀಗಾಗಿ ನಿಡುದೋಳ ಸಿಂದನೇ ಈ ಮನೆತನದ ಮೂಲಪುರಷ ಎಂದು ಹಿರೇಮಠ ಚನ್ನಬಸವಯ್ಯ ಅವರು ವಾದಿಸುತ್ತಾರೆ. ಭೈರನಮಟ್ಟಿ ಶಾಸನದಲ್ಲಿ ಈ ನಿಡುದೋಳ ಸಿಂದನಿಗೆ ಮೂರು ಮಕ್ಕಳಿದ್ದ ಉಲ್ಲೇಖ ಬರುತ್ತದೆ. ಆದರೆ ಅದರಲ್ಲಿ ಈ ಮಕ್ಕಳ ಹೆಸರಿಲ್ಲ. ರಂಜೋಲ ಶಾಸನದಲ್ಲಿ ಇದೇ ಕಥೆಯಿದ್ದು, ನಾಲ್ಕು ಜನ ಮಕ್ಕಳ ಪ್ರಸ್ತಾಪವಿದೆ. ಅವರು ಪ್ರಭುಸೇವ್ಯ, ಸತ್ಯಸೇವ್ಯ, ಜಗತ್‌ಸೇವ್ಯ ಮತ್ತು ಬುದಸೇವ್ಯ ಇವರಲ್ಲಿ ಬುದಸೇವ್ಯನು ಬಳ್ಳರೆ ನಾಡನ್ನು ಆಳುತ್ತಿದ್ದನೆಂದು ಹೇಳಿದೆ. ಇದೇ ಆಧಾರದ ಮೇಲೆ ಹಿರೇಮಠ ಚನ್ನಬಸವಯ್ಯ ಅವರು ಬುದಸೇವ್ಯನೇ ಕುರುಗೊಡು ಸಿಂದ ಮನೆತನದ ಮೊದಲ ವ್ಯಕ್ತಿಯೆಂದು ನಿರ್ಧರಿಸುತ್ತಾರೆ. ಆದರೆ ನಿಡುದೋಳ ಸಿಂದನ ಐತಿಹಾಸಿಕತೆಯ ಬಗ್ಗೆ ನಾವು ಸಂಶಯ ವ್ಯಕ್ತಪಡಿಸಿದ್ದೇವೆ. ಮುಂದಿನ ತಲೆಮಾರಿನ ಅವನ ಮಕ್ಕಳ ಬಗ್ಗೆಯೂ ಇದೇ ಮಾತು ಅನ್ವಯಿಸುತ್ತದೆ. ಈ ಮೊದಲು ಹೇಳಿದಂತೆ ಅವರ ಆಡಳಿತ ಕಾಲವನ್ನು ನಿರ್ಧರಿಸವುದು ಶಕ್ಯವಿಲ್ಲ. ಹೀಗಾಗಿ ಬುಧಸೇವ್ಯನು ಕುರುಗೊಡು ಸಿಂದ ಮನೆತನದ ಆದ್ಯ ಪುರುಷನೆಂದು

ಹೇಳುವುದು ಸರಿಯಲ್ಲ ಎಂಬುದು ನಮ್ಮ ಅಭಿಮತ. ಹಿರೇಮಠ ಚನ್ನಬಸವಯ್ಯ ಅವರು ನಿಡುದೋಳ ಸಿಂದನಿಗೆ ಸುಮಾರು ಕ್ರಿ.ಶ. ೨೬೦, ಬುಧಸೇವ್ಯನಿಗೆ ಸುಮಾರು ಕ್ರಿ.ಶ. ೨೯೦ ಎಂದು ಕಾಲ ನಿರ್ಧರಿಸಿರುವುದು ಕಾಲ್ಪನಿಕವೆನಿಸುತ್ತದೆ.[೫೧] ಶಾಸನಗಳ ಆಧಾರದ ಮೇಲಿಂದ ಬುದಸೇವ್ಯನ ನಂತರ ಸಿಂದ ವಂಶವು ಕಣ್ಮರೆಯಾಗಿ ೧೦ನೇ ಶತಮಾನದಲ್ಲಿ ಮತ್ತೇ ಅಸ್ತಿತ್ವಕ್ಕೆ ಬಂದಿತೆಂದು ಹೇಳುವುದು ಐತಿಹಾಸಿಕವೆನಿಸುವುದಿಲ್ಲ.

ಕ್ರಿ.ಶ. ೯೪೭ರ ಕುಡಿತಿನಿ ಎಂಬಲ್ಲಿಯ ಒಂದು ಶಾಸನದಲ್ಲಿ[೫೨] *"ಭೋಗಾವತಿಪುರವರಾಧೀಶ್ವರ", "ಅಹಿಂದ್ರಮಕರಧ್ವಜ", "ಫಣೀಂದ್ರಕುಲಸಂಭವ", "ವ್ಯಾಘ್ರಮೃಗ-ಲಾಂಛನ"* ಎಂಬ ಬಿರುದುಗಳುಳ್ಳ ಅರಿಬಲ್ಲದಾಗ್ರ ಎಂಬ ಹೆಸರಿನ ವ್ಯಕ್ತಿಯ ಉಲ್ಲೇಖವಿದೆ. ಇಲ್ಲಿ ಸಿಂದ ವಂಶದ ಹೆಸರಿಲ್ಲದಿದ್ದರೂ ಈ ಬಿರುದುಗಳು ಸಿಂದ ವಂಶಕ್ಕೆ ಅನ್ವಯವಾಗುತ್ತವೆ ಎಂಬುದು ನಿಜ. ಇದೇ ಆಧಾರದ ಮೇಲೆ ಹಿರೇಮಠ ಚನ್ನಬಸವಯ್ಯ ಅವರು ಈ ಅರಿಬಲ್ಲದಾಗ್ರನೇ "ಕುರುಗೊಡು ಸಿಂದ ಶಾಖೆಯಲ್ಲಿ ಕಾಣಸಿಗುವ ಮೊದಲ ವ್ಯಕ್ತಿ" ಆಗಿದ್ದಾನೆ ಎಂದು ನಿರ್ಧರಿಸುತ್ತಾರೆ.[೫೩] ಅರಿಬಲ್ಲದಾಗ್ರ ಎಂಬ ಹೆಸರಿಗೆ "*ಅರಿಬಲ್ಲಕೆ ಸಿಂಹ ಸ್ವಪ್ನವಾದವನು*" ಎಂಬ ವ್ಯುತ್ಪತ್ತಿಯನ್ನು ಕೊಡುತ್ತಾರೆ. ಇದು ಹೆಸರೋ, ಬಿರುದು ಅಥವಾ ಕೊಟ್ಟ ಪಾಠ ಸರಿಯಾಗಿ ಇದೆಯೋ ಇಲ್ಲವೋ ಎಲ್ಲವೂ ಅಸ್ಪಷ್ಟ. ಆದ್ದರಿಂದ ಇವನು ಸಿಂದ ವಂಶಕ್ಕೆ ಸೇರಿದ ಒಬ್ಬ ವ್ಯಕ್ತಿ ಎಂದು ಊಹಿಸಬಹುದಾದರೂ ಅವನನ್ನು ಕುರುಗೊಡಿನ ಸಿಂದ ವಂಶಾವಳಿಗೆ ಸೇರಿಸಲಾಗದು. ಇವನು ರಾಷ್ಟ್ರಕೂಟ ३ನೇ ಕೃಷ್ಣನ ಕಾಲದಲ್ಲಿ ಇದ್ದನೆಂದು ಎಂದು ಕುಡಿತಿನಿ ಶಾಸನದಿಂದ ತಿಳಿದು ಬರುತ್ತದೆ.

ಈ ಮನೆತನದ ವ್ಯವಸ್ಥಿತ ವಂಶಾವಳಿಯನ್ನು ರಚಿಸುವುದು ಕಷ್ಟಕರ. ಏಕೆಂದರೆ, ಸಿಂದ ಮನೆತನಕ್ಕೆ ಸೇರಿದ ಬೇರೆ ಬೇರೆ ಹೆಸರುಗಳು ಸಿಗುತ್ತವೆ ಆದರೂ ಒಬ್ಬರಿಗೊಬ್ಬರ ಸಂಬಂಧ ಸೂಚಿಸುವ ಮಾಹಿತಿ ದೊರೆಯುವುದಿಲ್ಲ. ಅದೇ ರೀತಿಯಾಗಿ ಒಬ್ಬೊಬ್ಬರ ಆಡಳಿತ ಕಾಲಾವಧಿ ನಿರ್ಧರಿಸುವುದು ಕಷ್ಟ. ಏಕೆಂದರೆ, ಒಂದೇರಡು ಶಾಸನಗಳಲ್ಲಿ ಮಾತ್ರ ಇಂಥವರ ಹೆಸರುಗಳು ದೊರೆಯುತ್ತಿದ್ದು ಅವರು ಎಷ್ಟು ವರ್ಷಗಳ ಕಾಲ ಸತತವಾಗಿ ಅಧಿಕಾರದಲ್ಲಿದ್ದರು ಎಂದು ನಿರ್ಧರಿಸಲು ಬರುವುದಿಲ್ಲ. ಹೀಗಿದ್ದರೂ ಲಭ್ಯವಿದ್ದ ವಿವರಗಳನ್ನು ಕ್ರೂಢೀಕರಿಸಿ ಈ ಮನೆತನದ ಇತಿಹಾಸವನ್ನು ರಚಿಸಲು ಯತ್ನಿಸಲಾಗಿದೆ. ಈ ಪ್ರದೇಶದ ಶಾಸನಗಳಲ್ಲಿ ಉಕ್ತರಾದ ಸಾಮಂತರ ಬಗ್ಗೆ ದೊರೆಯುವ ಮಾಹಿತಿಯನ್ನು ಇಲ್ಲಿ ಸಂಗ್ರಹಿಸಿಕೊಡಲಾಗಿದೆ.

ಈ ಪ್ರದೇಶದಲ್ಲಿ ನಮಗೆ ಸಿಗುವ ಸಿಂದ ಸಾಮಂತ ಮನೆತನದ ಮೊದಲ ಹೆಸರೆಂದರೆ ಉದಯಾದಿತ್ಯ ಸಿಂದರಸ. ಈ ಸಿಂದರಸ ಎಂಬ ಉಪಾದಿ ಮತ್ತು ಭೋಗಾವತಿಪುರವರಾಧೀಶ್ವರ ಎಂಬ ಬಿರುದು ಇವರೆಡರ ಮೇಲಿಂದ ಇವನು ಸಿಂದ ಮನೆತನಕ್ಕೆ ಸೇರಿದವನೆಂದು ಹೇಳಬಹದಷ್ಟೇ. ಇವನು ಚಾಲುಕ್ಯ ತ್ರೈಲೋಕಮಲ್ಲ ಅಹವವಲ್ಲ, ಅಂದರೆ ೧ನೇ ಸೋಮೇಶ್ವರನ ಕಾಲದಲ್ಲಿ ಒಂದು ದತ್ತಿಯನ್ನು ಬಿಟ್ಟ ಉಲ್ಲೇಖ ಕ್ರಿ.ಶ. ೧೦೪೫ರ ಶಾಸನದಲ್ಲಿ ಇದೆ.[೧೫೪] ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಈ ಪ್ರದೇಶವು ಅವರ ಕಾಲಕ್ಕೆ ಚಾಲುಕ್ಯರ ಮಾಂಡಲಿಕರಾದ ನೊಳಂಬ ಪಲ್ಲವರ ವಶದಲ್ಲಿದ್ದಿತು. ಉದಿಯಾದಿತ್ಯನು ಮಹಾಸಾಮಂತನೆಂದು ಕರೆಯಲ್ಪಟ್ಟಿದ್ದು, ಪಂಚಮಹಾ ಶಬ್ದಗಳ ಗೌರವವನ್ನು ಹೊಂದಿದ್ದನು. ಮಾಂಡಲಿಕರಾದ ನೊಳಂಬ ಪಲ್ಲವರ ಅಧೀನ ಅಧಿಕಾರಿಯಾಗಿದ್ದನು.[೧೫೫]

ಕ್ರಿ.ಶ. ೧೦೫೨–೫೩ರ ತಳಕಲ್ಲಿನ ಒಂದು ಶಾಸನವು.[೧೫೬] ಬರ್ಮದೇವರಸ ಎಂಬ ಒಬ್ಬ ಸಿಂದ ಮನೆತನದವನನ್ನು ಹೆಸರಿಸುತ್ತದೆ. ಅವನ ಬಿರುದುಗಳಲ್ಲಿ *ಭೋಗಾವತಿಪುರವರಾಧೀಶ್ವರ, ಫಣೀಂದ್ರಕುಳಭೂಷಣ, ನಾಗಧ್ವಜ, ಸಿಂದಕುಳಕಮಲಭಾಸ್ಕರ* ಇದನ್ನು ಸ್ಪಷ್ಟಪಡಿಸುತ್ತವೆ. ಇವನು ಚಾಲುಕ್ಯ ಮಾಂಡಲಿಕನಾದ ನೊಳಂಬ, ಪಲ್ಲವ, ಪೆರ್ಮಾನಡಿ ಕೆಳಗೆ ಒಬ್ಬ ಅಧಿಕಾರಿಯಾಗಿ ತೋಣಂಕಲಿ (ತಳಕಲ್ಲು) ಮತ್ತು ಇನ್ನೂ ಕೆಲವು ಗ್ರಾಮಗಳನ್ನು "ಆಳುತ್ತಿದ್ದನೆಂದು" ಈ ಶಾಸನದಲ್ಲಿ ಹೇಳಿದೆ. ಅಂದರೆ ಸಿಂದ ಮನೆತನಕ್ಕೆ ಸೇರಿದ ಇವನು ಒಬ್ಬ ಚಿಕ್ಕ ಅಧಿಕಾರಿಯಾಗಿದ್ದನು. ಆದರೆ ಮೇಲಿನ ಉದಿಯಾದಿತ್ಯನಿಗೂ, ಇವನಿಗೂ ಯಾವ ಸಂಬಂಧವಿದ್ದಿತು ಎಂಬುದು ಸ್ಪಷ್ಟವಿಲ್ಲ. ಇವನು ಉದಿಯಾದಿತ್ಯನ ವಾರಸುದಾರನೆಂದು ದೇಸಾಯಿ ದಿನಕರ ಊಹಿಸುತ್ತಾರೆ, ಆದರೆ ಇದಕ್ಕೆ ಯಾವ ಆಧಾರವು ಇಲ್ಲ.[೧೫೭]

ನಮಗೆ ದೊರೆಯುವ ಮುಂದಿನ ಹೆಸರು ಮಹಾಸಾಮಂತ ಚೊಕರಸ (ಬಹುಶಃ ಚೊಕ್ಕರಸ). ಇವನ ಬಿರುದಾವಳಿಗಳು ಎದ್ದು ಕಾಣುವಂತಿವೆ. ಅವುಗಳಲ್ಲಿ *ಭೋಗಾವತಿಪುರವರೇಶ್ವರ, ಸಿಂದಕುಳಾನ್ವಯ, ಮಹಾಸಾಮಂತ* ಎಂಬವು ಗಮನಾರ್ಹ-ವಾದವುಗಳು. ಚಾಲುಕ್ಯ ೬ನೇ ವಿಕ್ರಮಾದಿತ್ಯನ ರಾಣಿಯಾದ ಪಿರಿಯಕೇತಲದೇವಿಯ ಅಧಿಕಾರಿಯಾಗಿದ್ದನೆಂದು ತೋರುತ್ತದೆ. ಕೇತಲದೇವಿಯು ಬಹುಶಃ ತಾನೇ ಕಟ್ಟಿಸಿದ "ಕೇತಲೇಶ್ವರ" ಎಂಬ ದೇವಾಲಯದಲ್ಲಿ ಹಾಡು, ನೃತ್ಯ ಮುಂತಾದ ಸೇವೆಗಳನ್ನು ಸಲ್ಲಿಸುವ ಸೇವಕರಿಗೆ ದಾನ ಮಾಡಿದ ವಿಷಯವು ಈ ಶಾಸನದಲ್ಲಿದೆ. ಶಾಸನದ ಕಾಲ ಕ್ರಿ.ಶ. ೧೦೯೨[೧೫೮] ಚೊಕ್ಕರಸನು ಸಹ ಆ ಪ್ರದೇಶದ ಸುಂಕದಿಂದ ಬರುವ ಆದಾಯವನ್ನು, ಇದೇ ದೇವಾಲಯಕ್ಕೆ

ಕೊಟ್ಟನೆಂದು ಇದೇ ಶಾಸನದಿಂದ ಸೂಚಿತವಾಗುತ್ತದೆ. ಕ್ರಿ.ಶ. ೧೧೦೨ರ ಶಿರಗುಪ್ಪಿಯ ಒಂದು ಶಾಸನದಲ್ಲಿಯೂ ಚೊಕ್ಕರಾಯ ಎಂಬ ಒಂದು ಹೆಸರು ಬರುತ್ತದೆ.[೧೫೯] ಇವನು ಸೋಮೇಶ್ವರನ ಮಾಂಡಲಿಕನಾಗಿದ್ದ ನೊಳಂಬಪಲ್ಲವ ಮನೆತನದ ತ್ರಿಭುವನಪಾಂಡ್ಯನೆಂಬವನು ಅಧಿಕಾರಿಯಾಗಿದ್ದನೆಂದು ಕಾಣುತ್ತದೆ. ಇವನು ಸಿಂದ ಮನೆತನಕ್ಕೆ ಸೇರಿದವನೆನ್ನುವ ಯಾವ ಸೂಚನೆಯು ಶಾಸನದಲ್ಲಿ ಇಲ್ಲ. ಬಲ್ಲಕುಂದೆ ಪ್ರಾಂತದ ಒಂದು ಗ್ರಾಮದ ದೇವಾಲಯಕ್ಕೆ ದಾನ ಕೊಟ್ಟಿರಬಹುದಾದ ಉಲ್ಲೇಖ ಶಾಸನದಲ್ಲಿದೆ. ಬಲ್ಲಕುಂದೆಗೆ ಸಂಬಂಧವಿದ್ದ ಮಾತ್ರಕ್ಕೆ ಮೇಲೆ ಕ್ರಿ.ಶ. ೧೧೦೨ ರಲ್ಲಿ ಬರುವ ಸಿಂದ ಚೊಕ್ಕರಸನು ಇವನೇ ಎಂದು ಹೇಳಲಿಕ್ಕಾಗದು. ಇದೇ ಶಾಸನದಲ್ಲಿ ಮನ್ನೆಯಬೀವರಸ ಎಂಬ ಹೆಸರು ಬರುತ್ತದೆ.[೧೬೦] ಈ ಬಿವರಸನು ಚೊಕ್ಕರಸನ ಮಗನಿರಬಹುದೆಂದು, ಇಬ್ಬರೂ ಸಿಂದ ವಂಶಕ್ಕೆ ಸೇರಿದವರೆಂದು ಹೀರೆಮಠ ಚನ್ನಬಸವಯ್ಯ ತರ್ಕಿಸುತ್ತಾರೆ.[೧೬೧] ಆದರೆ ಈ ತರ್ಕಕ್ಕೆ ಯಾವುದೇ ಆಧಾರವಿಲ್ಲ. ಶಾಸನವು ಒಡೆದು ಹೋಗಿದ್ದರಿಂದ ವಿಷಯಗಳು ಸ್ಪಷ್ಟವಾಗಿ ತಿಳಿಯುವುದಿಲ್ಲ.

ಈ ಮೇಲಿನ ನಾಲ್ವರು, ಚಾಲುಕ್ಯ ಸಾಮ್ರಾಜ್ಯದಲ್ಲಿ ಬಳ್ಳಾರಿ ಪ್ರದೇಶದಲ್ಲಿ ನೊಳಂಬ ಪಲ್ಲವರ ಮಾಂಡಲಿಕರ ಕೆಳಗೆ ಚಿಕ್ಕಪುಟ್ಟ ಅಧಿಕಾರಗಳನ್ನು ಹೊಂದಿದ್ದರು. ನಮ್ಮ ಅಭಿಪ್ರಾಯದಲ್ಲಿ ಈ ನಾಲ್ಕು ಜನರಿಗೆ ಸಂಬಂಧವನ್ನು ಕಲ್ಪಿಸುವುದು ಸಾಧ್ಯವಾಗುವುದಿಲ್ಲ.

ಅದೋನಿ ತಾಲೂಕಿನ ಪೆದ್ದತುಂಬುಲಂ ಎಂಬಲ್ಲಿಯ ಕ್ರಿ.ಶ. ೧೧೩೨ ರ ಶಾಸನದಲ್ಲಿ ಬಾಚರಸನು ಸಿಂದವಾಡಿ ನಾಡನ್ನು ಆಳುತ್ತಿದ್ದನೆಂದು ಹೇಳಿದೆ.[೧೬೨] ಇವನು ಅಹಿಕುಲದಲ್ಲಿ ಅಂದರೆ ಫಣೀಂದ್ರ ವಂಶದಲ್ಲಿ ಹುಟ್ಟಿದವನೆಂದು ಹೇಳಿದ್ದಲ್ಲದೇ *"ಸಿಂದರ ಬಾಚಿಭೂಪ"* ಎಂದು ವರ್ಣಿಸಲ್ಪಟ್ಟಿದ್ದಾನೆ. ಅದೂ ಅಲ್ಲದೇ *ಭೋಗಾವತಿಪುರವರಾಧೀಶ್ವರ, ಸಿಂದಕುಳಕಮಲಮಾರ್ತಂಡ* ಎಂಬ ಬಿರುದುಗಳನ್ನು ಹೊಂದಿದ್ದಾನೆ. ಇವನು ಸಿಂದ ವಂಶಜನೆಂಬುವುದರಲ್ಲಿ ಸಂದೇಹವಿಲ್ಲ. ಇನ್ನು ಒಂದು ವಿಶೇಷವೆಂದರೆ, ಈ ಶಾಸನವು ವಂಶಾವಳಿಯನ್ನು ಈ ರೀತಿ ಕೊಡುತ್ತದೆ.



ಈ ವಂಶಾವಳಿಯಲ್ಲಿ ತೋರಿಸಿದಂತೆ ಬಾಚಿಭೂಪನ ತಂದೆಯಾದ ಚೊಕ್ಕಿಭೂಪನು ಮೇಲೆ ಹೇಳಿದ ಚೊಕ್ಕರಸ ಅಥವಾ ಚೋಕರಸನೇ ಆಗಿರಬಹುದೆಂದು ಬಿ.ಆರ್. ಗೋಪಾಲ ಅಭಿಪ್ರಾಯಿಸುತ್ತಾರೆ.[೧೬೩] ಇವನು ಚಾಲುಕ್ಯ ಭೂಲೋಕಮಲ್ಲ ೩ನೇ ಸೋಮೇಶ್ವರನ ಆಳಿಕೆಯಲ್ಲಿ ಅವನ ಮಗ ಯುವರಾಜ ತೈಲಪನ ಅಧೀನನಾಗಿ ಸಿಂದವಾಡಿಯನ್ನು ಆಳುತ್ತಿದ್ದನೆಂದು ಹೇಳಿದೆ. ಇಲ್ಲಿ ಹೆಸರಿಸಲ್ಪಟ್ಟ ಬಾಚಿಭೂಪನು ಮೇಲೆ ಹೇಳಲಾದ ಅಥವಾ ಮುಂದೆ ಬರುವ ಸಿಂದ ವಂಶದವರೊಂದಿಗೆ ಯಾವ ಸಂಬಂಧವನ್ನು ಹೊಂದಿದ್ದನೆಂದು ತಿಳಿಯುವುದಿಲ್ಲ.

ಕ್ರಿ.ಶ. ೧೧೪೭ರ ಕೊಳೂರಿನ ಒಂದು ಶಾಸನವು ಬಲ್ಲಕುಂದೆ ನಾಡಿನ ಅಧಿಪತಿಗಳಾಗಿ ಇಬ್ಬರು ಸಿಂದ ವಂಶಜರನ್ನು ವರ್ಣಿಸುತ್ತದೆ. ಅವರು ಇಮ್ಮಡಿ ಭೀಮ ಮತ್ತು ಅವನ ತಮ್ಮ ರಾಚಮಲ್ಲ. ಈ ಇಬ್ಬರೂ ಜೋಡಿಯಾಗಿ ರಾಜ್ಯಭಾರ ಮಾಡುತ್ತಿದ್ದರೆಂದು ಶಾಸನದಲ್ಲಿ ಹೇಳಿದೆ.[೧೬೪] ಇವರನ್ನು ಸಿಂದಕುಲತಿಲಕ ಎಂದು ಕರೆಯಲಾಗಿದೆ. ಅಲ್ಲದೆ ಫಣಿವಂಶದಲ್ಲಿ ಹುಟ್ಟಿದವರೆಂದು ಹೇಳಲಾಗಿದೆ. ಇವರಲ್ಲಿ ಒಬ್ಬನು ಇಮ್ಮಡಿ ಭೀಮನೆಂದು ಕರೆಯಲ್ಪಟ್ಟಿದ್ದು ಇವನಿಗಿಂತ ಮೊದಲು ೧ನೇ ಭೀಮನೆಂಬವನೊಬ್ಬವನು ಇದ್ದಿರಬೇಕೆಂದು ದೇಸಾಯಿ ದಿನಕರ ಊಹಿಸಿದ್ದರು.[೧೬೫] ಅವರ ಈ ಊಹೆ ಕೊಂಚಗೇರಿಯ ೨ ಶಾಸನಗಳಿಂದ ನಿಜವಾಗಿದೆ ಎಂದು ಹಿರೇಮಠ ಚನ್ನಬಸವಯ್ಯ ಈಗಾಗಲೇ ಹೇಳಿದ್ದಾರೆ.[೧೬೬] ಕೊಂಚಗೇರೆಯ ಕ್ರಿ.ಶ. ೧೧೪೨ನೆಯ ವರ್ಷದ ಒಂದು ಶಾಸನದಲ್ಲಿ.[೧೬೭] ಈ ಸಾಮಂತರ ಮೂರು ತಲೆಮಾರುಗಳನ್ನು ಈ ರೀತಿ ಹೆಸರಿಸುತ್ತದೆ.




(ಇಲ್ಲಿ ಗುರುತಿಸದೆ ಬಿಟ್ಟ ೨ ಹೆಸರುಗಳನ್ನು, ಹಿರೇಮಠ ಚನ್ನಬಸವಯ್ಯ ಅವರು ದೊವರ (ದೇವರಾಜ) ಮತ್ತು ದೇವ ಎಂದು ಓದಿದ್ದಾರೆ).

ಇಲ್ಲಿ ತೋರಿಸಿರುವ ಭೀಮ ಮತ್ತು ಅವನ ತಮ್ಮ ರಾಚಮಲ್ಲರು ಕ್ರಿ.ಶ. ೧೧೪೭ರ ಕೋಳೂರು ಶಾಸನದಲ್ಲಿಯ ಭೀಮ ಮತ್ತು ಅವನ ತಮ್ಮ ರಾಚಮಲ್ಲರು ಇಬ್ಬರು ಒಂದೇ

ಎಂದು ಗುರುತಿಸಬಹುದು. ಇವರಿಬ್ಬರ ತಂದೆ ಸವದೇವ, ಅವನ ತಂದೆ ಭೀಮ, ಅಂದರೆ ಸವದೇವನ ತಂದೆ ಭೀಮನನ್ನು ೧ನೇ ಭೀಮ ಎಂದು ಕರೆಯಬಹುದು. ಸವದೇವನ ಮಗ ಭೀಮನನ್ನು, ೨ನೇ ಭೀಮನೆಂದು ಕರೆಯಬಹುದು. ಕ್ರಿ.ಶ. ೧೧೨೦ನೇ ಕೊಂಚಗೇರೆಯ ಶಾಸನದಲ್ಲಿ ಎರಡು ತಲೆಮಾರುಗಳನ್ನು ಹೀಗೆ ತೋರಿಸಿದೆ.

ಭೀಮ = ಮಾಕಣಾಂಬಿಕೆ
|
ಸೋವಿದೇವ

ಈ ಸೋವಿದೇವ ಮತ್ತು ಮೇಲೆ ಉಲ್ಲೇಖಿಸಿದ ಸವದೇವನು ಇಬ್ಬರೂ ಒಂದೇ ಎಂದು ಹೇಳಬಹುದು. ೨ನೇ ಭೀಮ ಮತ್ತು ಅವನ ತಮ್ಮ ರಾಚಮಲ್ಲರಿಗೆ ಕ್ರಿ.ಶ. ೧೧೪೨ ಹಾಗೂ ಕ್ರಿ.ಶ. ೧೧೪೭ ಎಂಬ ಎರಡು ತೇದಿಗಳಿವೆ. ಕ್ರಿ.ಶ. ೧೧೪೧ರ ಸಿಂದಗೆರೆ ಶಾಸನದ *ಸಿಂದಗೋವಿಂದ ಮಹಾಮಂಡಳೇಶ್ವರ* ರಾಚಮಲ್ಲನೂ ಇದೇ ರಾಚಮಲ್ಲನೆಂದು ಹೇಳಬಹುದು.[೧೬೮] ಇವನ ಹೆಂಡತಿಯ ಹೆಸರು ಮಾಕಲದೇವಿ ಎಂದು ಉಲ್ಲೇಖಿಸಲಾಗಿದ್ದು, ಕೊಂಚಗೇರಿ ಶಾಸನದಿಂದ ತಿಳಿದು ಬರುತ್ತದೆ.[೧೬೯] ಸೋವಿದೇವನ ಕಾಲ ಕ್ರಿ.ಶ. ೧೧೨೦ ಎಂದು ಶಾಸನದಿಂದ ತಿಳಿದು ಬರುತ್ತದೆ. ಅವನ ತಂದೆ ಭೀಮ ಅಂದರೆ ೧ನೇ ಭೀಮನು ಕ್ರಿ.ಶ. ೧೧೦೦ ರಲ್ಲಿ ಇದ್ದಿರಬಹುದು. ಇವೆಲ್ಲವನ್ನು ಕ್ರೂಢೀಕರಿಸಿ ವಂಶಾವಳಿಯನ್ನು ಹೀಗೆ ತೋರಿಸಬಹುದು.




೨ನೇ ಭೀಮ ಮತ್ತು ೧ನೇ ರಾಚಮಲ್ಲರು ಜೊತೆಯಾಗಿಯೇ ರಾಜ್ಯಭಾರ ಮಾಡುತ್ತಿದ್ದರು. ಭೀಮನ ಮರಣದ ನಂತರ ರಾಚಮಲ್ಲನು ಆಳಿಕೆಯನ್ನು ಮುಂದುವರೆಸಿದನು. ೧ನೇ ರಾಚಮಲ್ಲನ ಆಳಿಕೆಯು ಕ್ರಿ.ಶ. ೧೧೩೯, ಕ್ರಿ.ಶ. ೧೧೭೩ ವರೆಗಿನಷ್ಟು ಧೀರ್ಘವಾಗಿತ್ತೆಂದು ಹಿರೇಮಠ ಚನ್ನಬಸವಯ್ಯ ಅಭಿಪ್ರಾಯಪಡುತ್ತಾರೆ.[೧೭೦] ಇದಕ್ಕೆ ಆಧಾರವಾಗಿ ಕುರುಗೋಡಿನ

೨ನೇ ರಾಚಮಲ್ಲನ ಶಾಸನವನ್ನು ಉಲ್ಲೇಖಿಸುತ್ತಾರೆ.[೧೭೧] ಅದರಲ್ಲಿ ರಾಚಮಲ್ಲನಿಗೆ ಬೇಚಿರಾಜನೆಂಬ ದಂಡನಾಯಕನಿದ್ದು, ಅವನು ಸ್ವಯಂಭೂದೇವರ ದೇವಾಲಯವನ್ನು ಕಟ್ಟಿಸಿದಾಗ ಅದಕ್ಕೆ ಪಿರಿಯರಾಚಮಲ್ಲದೇವ ಅಂದರೆ ೧ನೇ ರಾಚಮಲ್ಲನು ಕ್ರಿ.ಶ. ೧೧೭೩ರಲ್ಲಿ ಪೂಜಾ ನಿಮಿತ್ಯವಾಗಿ ದತ್ತಿಯನ್ನು ಕೊಟ್ಟನೆಂದು ಹೇಳಿದೆ. ಅಂದರೆ ಆಗ ೨ನೇ ರಾಚಮಲ್ಲನ ಆಳಿಕೆಯು ನಡೆಯುತ್ತಿತ್ತೆಂಬುದು ಶಾಸನದಲ್ಲಿ ಸ್ಪಷ್ಟವಾಗಿ ಹೇಳಲ್ಪಟ್ಟಿದೆ. ಹಿರೇಮಠ ಚನ್ನಬಸವಯ್ಯನವರು[೧೭೨] ಅವನ ಅಜ್ಜನಾದ ೧ನೇ ರಾಚಮಲ್ಲನು ಕ್ರಿ.ಶ. ೧೧೭೭ ರವರೆಗೂ ಬದುಕಿದ್ದು ರಾಜ್ಯಭಾರ ಮಾಡುತ್ತಿದ್ದನೆಂದು ಹೇಳಬಹುದಾದರೆ. ಜೊತೆಗೆ ರಾಚಮಲ್ಲನನ್ನು ಹೆಸರಿಸುವ ಕ್ರಿ.ಶ. ೧೧೭೬ರ ಎರಡು ಶಾಸನಗಳನ್ನು ಅವರು ಆಧಾರವಾಗಿ ಕೊಡುತ್ತಾರೆ.[೧೭೩] ಆದರೆ ಇದು ಅಸಂಗತವೆನಿಸುತ್ತದೆ. ಅಲ್ಲದೆ ಕ್ರಿ.ಶ. ೧೧೪೮ರ ಓರುವಾಯಿ ಶಾಸನದಲ್ಲಿ ಇಮ್ಮಡಿ ಅಂದರೆ ೨ನೇ ರಾಚಮಲ್ಲನ ಸ್ಪಷ್ಟ ಉಲ್ಲೇಖವಿದೆ.[೧೭೪] ಈ ಹಿನ್ನಲೆಯಲ್ಲಿ ೧ನೇ ರಾಚಮಲ್ಲನ ಆಳಿಕೆಯು ಕ್ರಿ.ಶ. ೧೧೪೮ ರೊಳಗಾಗಿಯೇ ಮುಗಿದಿರಬಹುದೆಂದು ದೇಸಾಯಿ ದಿನಕರ ಅಭಿಪ್ರಾಯ ಸಾಧುವೆನಿಸುತ್ತದೆ.[೧೭೫] ಮೇಲೆ ನೋಡಿದಂತೆ ೨ನೇ ರಾಚಮಲ್ಲನ ಶಾಸನದಲ್ಲಿ ೧ನೇ ರಾಚಮಲ್ಲನು ಕ್ರಿ.ಶ. ೧೧೭೩ ರಲ್ಲಿ ದತ್ತಿ ಕೊಟ್ಟನೆಂಬ ವಿಷಯವನ್ನು ವಿವರಿಸುವುದು ಕಠಿಣವಾದರೂ ಅದರಲ್ಲಿ ಏನೂ ತಪ್ಪಿರಬೇಕೆಂದು ಭಾಸವಾಗುತ್ತದೆ. ಕುರುಗೋಡಿನ ೨ನೇ ರಾಚಮಲ್ಲನ ಶಾಸನವು ಈ ವಂಶಾವಳಿಯನ್ನು ಇನ್ನು ಎರಡು ತಲೆಮಾರಿನವರೆಗೆ ಮುಂದುವರೆಸುತ್ತದೆ. ಅದರಲ್ಲಿಯ ಹೇಳಿಕೆ ಇಂತಿದೆ; ೧ನೇ ರಾಚಮಲ್ಲನ ಹೆಂಡತಿ ಸೋವಲದೇವಿಗೆ ಇಱುಂಗೊಳ ನೆಂಬುವನು ಹುಟ್ಟಿದನು. ಆ ಇಱುಂಗೊಳನ ಹೆಂಡತಿ ಬಲದೇವಿ ಇವಳಿಗೆ ೨ನೇ ರಾಚಮಲ್ಲ ಮತ್ತು ಸೋಮಭೂಪ ಎಂಬುವರು ಹುಟ್ಟಿದರು.[೧೭೬] ೧ನೇ ರಾಚಮಲ್ಲನಿಗೆ ಮಾಕಲದೇವಿ ಇನ್ನೊಬ್ಬ ಹೆಂಡತಿ ಇದ್ದಳೆಂದು ಕೊಂಚಗೆರೆ ಶಾಸನದಲ್ಲಿ ಹೇಳಿದ್ದನ್ನು.[೧೭೭]

೧ನೇ ರಾಚಮಲ್ಲನ ಮಗನಾದ ಇಱುಂಗೊಳನ ಬಗ್ಗೆ ಈ ಮೊದಲೇ ಮೇಲೆ ನೋಡಿದ್ದೇವೆ. ಅವನ ಹೆಸರಿನ ಶಾಸನ ಓರವಾಯಿ ಶಾಸನ ಒಂದೇ. ಇನ್ನೊಂದು ಶಾಸನದಿಂದ ಕ್ರಿ.ಶ. ೧೧೯೫ ರಲ್ಲಿ ೨ನೇ ರಾಚಮಲ್ಲನ ಮಗನಾದ ಕಲಿದೇವನು ಆಳುತ್ತಿದ್ದನೆಂದು ತಿಳಿದು ಬರುತ್ತದೆ.[೧೭೮] ಅಂದರೆ ಸುಮಾರು ಕ್ರಿ.ಶ. ೧೧೯೦ ರ ಹೊತ್ತಿಗೆ. ೨ನೇ ರಾಚಮಲ್ಲನ ಕೊನೆ ಹಾಗೂ ಕಲಿದೇವರಸನ ಆಳಿಕೆ ಆರಂಭವಾಯಿತೆಂದು ನಿಶ್ಚಿತವಾಗುತ್ತದೆ. ಕುರುಗೋಡು ಸಿಂದ ಮನೆತನದಲ್ಲಿ ಕಲಿದೇವರಸನೇ ಕೊನೆಯ ಸಾಮಂತ. ಅಷ್ಟು ಹೊತ್ತಿಗಾಗಲೇ ಚಾಲುಕ್ಯ

ಸಾಮ್ರಾಜ್ಯವು ಸೇವುಣ, ಹೊಯ್ಸಳರ ನಡುವೆ ಹಂಚಿ ಹೋಗಿದ್ದರಿಂದ ತಲೆ ತಲಾಂತರಗಳಿಂದ ಬಂದ ಎಷ್ಟೋ ಸಾಮಂತ ಮನೆತನಗಳು ಅಸ್ತಂಗತವಾದವು. ಮೇಲೆ ನೋಡಿದಂತೆ ಬೆಳಗುತ್ತಿ ಮತ್ತು ಯಲಬುರ್ಗಿ ಸಿಂದ ಮನೆತನಗಳ ಕೊನೆ ಸಹ ಈ ರಾಜಕೀಯ ಬದಲಾವಣೆಯೇ ಇದಕ್ಕೆ ಕಾರಣವಾಯಿತು.

ಈವರೆಗಿನ ಚರ್ಚೆಯ ಆಧಾರದ ಮೇಲೆ ಕುರುಗೊಡು ಸಿಂದ ಮನೆತನದ ವಂಶಾವಳಿಯಲ್ಲಿ ಮತ್ತು ದೊರೆತ ಆಧಾರಗಳ ಮೇಲಿಂದ ಕಾಲಾನುಕ್ರಮವನ್ನು ಈ ರೀತಿಯಾಗಿ ತೋರಿಸಬಹುದು.




## ರಾಜಕೀಯ ಚರಿತ್ರೆ

ಈ ಪ್ರದೇಶದಲ್ಲಿ ಅರಿಬಲ್ಲದಾಗ್ರ, ಉದಯಾದಿತ್ಯ, ಚೋಕರಸ ಇವರು ಮುಖ್ಯ ಕುರುಗೋಡು ಸಿಂದ ವಂಶಕ್ಕೆ ಸೇರಿರಲಿಕ್ಕಿಲ್ಲವೆಂದು ಈ ಮೊದಲೇ ಸೂಚಿಸಿದ್ದೇವೆ. ನಮ್ಮ

ಅಭಿಪ್ರಾಯದಲ್ಲಿ ೧ನೇ ಭೀಮನಿಂದಲೇ ಕುರುಗೋಡು ವಂಶದ ಇತಿಹಾಸ ಆರಂಭವಾಗುತ್ತದೆ. ಮೇಲಾಗಿ ಅರಿಬಲ್ಲದಾಗ್ರ ಇತ್ಯಾದಿಗಳವರ ಕಾರ್ಯಚಟುವಟಿಕೆಗಳ ಬಗ್ಗೆ ಯಾವ ಮಾಹಿತಿಯೂ ಸಿಗುವುದಿಲ್ಲ. ೧ನೇ ಭೀಮನ ಒಂದು ಶಾಸನ ದೊರೆತಿದ್ದರೂ ಅದರಲ್ಲಿ ಹೆಚ್ಚಿನ ವಿವರಗಳಿಲ್ಲ. ಅವರ ಮಗ ಸೋವಿದೇವನ ಬಗ್ಗೆ ಹೇಳಬೇಕಾದ ಒಂದೇ ಮಾತೆಂದರೆ ಅವನಿಗೆ 'ಮಹಾಮಂಡಲೇಶ್ವರ' ಎಂಬ ಬಿರುದು ಇದ್ದುದು, ಬಹುಶಃ ಅವನ ನೊಳಂಬಪಲ್ಲವ ಅಧೀನತ್ವವನ್ನು ಕಳಚಿಕೊಂಡು ನೇರವಾಗಿ ಚಾಲುಕ್ಯ ಅರಸರ ಮಾಂಡಲಿಕ ಎಂದು ಎನಿಸಿದನು. ಇಮ್ಮಡಿ ಭೀಮನ ಬಗ್ಗೆ ಗಮನಾರ್ಹವಾದ ವಿಷಯವೆಂದರೆ, ಅವನು ತನ್ನ ತಮ್ಮ ೧ನೇ ರಾಚಮಲ್ಲನ ಜೊತೆಗೆಯೇ ರಾಜ್ಯವಾಳುತ್ತಿದ್ದನು. ಈ ಮಾತನ್ನು ಕೋಳೂರು ಶಾಸನವು ಸ್ಪಷ್ಟವಾಗಿ ಹೇಳುತ್ತದೆ. ಅವನ ತಮ್ಮ ರಾಚಮಲ್ಲನು ಭೀಮನ ನಂತರ ಸ್ವತಂತ್ರವಾಗಿ ಆಳಲಾರಂಭಿಸಿ ಹೆಚ್ಚು ಪ್ರಸಿದ್ಧಿಗೆ ಬಂದನು. ಅವನಿಗೆ ಕೊಡಲ್ಪಟ್ಟ ಬಿರುದುಗಳು ಹೆಚ್ಚು ಸಾಂಪ್ರದಾಯಿಕವಿದ್ದೂ ಅವನಿಗೆ ಧರ್ಮದ ಕಡೆಗೆ ಹೆಚ್ಚು ಒಲವು ಇದ್ದುದು ಕಂಡು ಬರುತ್ತದೆ. ಶಾಸನಗಳಲ್ಲಿ ಇವನ ಸದ್ಗುಣಗಳನ್ನು, ಧರ್ಮ ಶ್ರದ್ಧೆಯನ್ನು ಬಹಳವಾಗಿ ಹೊಗಳಲಾಗಿದೆ. ಅವನ ಮಗ ಇಱುಂಗೊಳನ ಬಗ್ಗೆ ಯಾವ ಮಾಹಿತಿಯು ಇಲ್ಲ ಎಂದು ಮೇಲೆ ಹೇಳಿದ್ದೆವೆ. ಓರವಾಯಿ ಶಾಸನ ಅವನು ನಳ, ನಹು, ಪೃಥು, ಮಂದಾರ, ಮುಂತಾದ ಪೌರಾಣಿಕ ಅರಸರನ್ನು ಮೀರಿಸಿದ್ದನೆಂದು ಹೇಳುತ್ತದೆ. ಇವನ ಮಗ ೨ನೇ ರಾಚಮಲ್ಲನ ಶಾಸನಗಳ ದೃಷ್ಟಿಯಿಂದ ಹೆಚ್ಚು ಪ್ರಸಿದ್ಧಿಗೆ ಬಂದಿದ್ದನೆಂದು ಹೇಳಬಹುದು. ಇವನ ಮಗ ಕಲಿದೇವನ ವಿಷಯಕ್ಕೂ ಅಷ್ಟೇ. ಹೀಗಾಗಿ ರಾಜಕೀಯ ಚರಿತ್ರೆಯ ದೃಷ್ಟಿಯಿಂದ ಇವರನ್ನು ಕುರಿತು ಹೆಚ್ಚಿನ ಚರ್ಚೆಗೆ ಆಸ್ಪದವಿಲ್ಲ. ಉದಾಹರಣೆಗೆ ಬೆಳಗುತ್ತಿ ಸಿಂದ ಮನೆತನದ ಈಶ್ವರದೇವನಂತೆ ಇವರು ಆಳರಸರ ರಕ್ಷಣೆಗಾಗಿ ಅಥವಾ ಬೆಂಬಲಿಗರಾಗಿ ಹೋರಾಡುವ ಅವಕಾಶಗಳನ್ನು ಪಡೆಯಲಿಲ್ಲ.

ಇದಕ್ಕೆ ಮುಖ್ಯ ಕಾರಣವೆಂದರೆ, ಬೆಳಗುತ್ತಿ ಸಿಂದ ಆಳುತ್ತಿದ್ದ ಮತ್ತು ಬೆಳಗುತ್ತಿ, ನಾಗರಖಂಡ, ಎಡವಟ್ಟೆ ಇತ್ಯಾದಿ ಬನವಾಸಿ ನಾಡಿಗೆ ಹೊಂದಿಕೊಂಡ ಪ್ರದೇಶಗಳು, ಕಿಸುಕಾಡು ಇತ್ಯಾದಿ, ತರ್ದವಾಡಿ ನಾಡಿಗೆ ಹೊಂದಿಕೊಂಡ ಪ್ರದೇಶಗಳು, ಯಲಬುರ್ಗಿ ಸಿಂದರು ಆಳುತ್ತಿದ್ದ ಪ್ರದೇಶಗಳು ಚಾಲುಕ್ಯ ಸಾಮ್ರಾಜ್ಯದ ಹೃದಯ ಪ್ರದೇಶಗಳಾಗಿದ್ದವು. ಚಿಕ್ಕ ಪುಟ್ಟ ಅಧಿಕಾರಿಗಳ, ಮಾಂಡಲಿಕ ದಂಗೆಗಳಲ್ಲದೆ ಹೊಯ್ಸಳ ಮತ್ತು ಸೇವುಣ ಮಾಂಡಲಿಕರ ದಾಳಿಗಳು ಮೇಲಿಂದ ಮೇಲೆ ಆಗುತ್ತಿದ್ದು, ಅವುಗಳಲ್ಲಿ ಭಾಗವಹಿಸುವುದು ಅನಿವಾರ್ಯವಾಗಿದ್ದಿತು. ಇಂಥ ಘಟನೆಗಳು ಮೇಲಿಂದ ಮೇಲೆ ನಡೆಯುತ್ತಿದ್ದವು. ಹೀಗಾಗಿ ಅವರು ಯಾವಾಗಲೂ ಸಿದ್ಧರಾಗಿಯೇ

ಇರಬೇಕಾಗಿದ್ದಿತು ಅಂತಹ ಪ್ರಸಂಗವು ಕುರುಗೊಡಿನ ಅರಸರಿಗೆ ಬಂದದ್ದು ಕಡಿಮೆ. ಕರ್ನಾಟಕದ ಪೂರ್ವ ಭಾಗವು ಕೇಂದ್ರ ವಲಯದಿಂದ ಆಚೆಗೆ ಇದ್ದುದರಿಂದ ಪ್ರತ್ಯಕ್ಷ ದಾಳಿಗಳನ್ನು ಎದುರಿಸಿರುವ ಪ್ರಸಂಗಗಳು ಕಡಿಮೆ. ಹೀಗಾಗಿ ಇವರ ಶಾಸನಗಳಲ್ಲಿ ಇಂಥ ಘಟನೆಗಳ ಉಲ್ಲೇಖವಿರಲಿಕ್ಕಿಲ್ಲ. ಇವರು ತಮ್ಮ ಪ್ರದೇಶದಲ್ಲಿ ಸಾಹಿತ್ಯ, ಕಲೆ, ಧರ್ಮ ಮುಂತಾದವುಗಳನ್ನು ಪ್ರೋತ್ಸಾಹಿಸುತ್ತ ಸುವ್ಯವಸ್ಥಿತ ಆಡಳಿತ ನಡೆಸುತ್ತಿದ್ದರು. ಇದೇ ಅವರ ಹೆಗ್ಗಳಿಕೆ.

ಕಳಚುರಿ ಬಿಜ್ಜಳನು ಚಾಲುಕ್ಯರ ವಿರುದ್ಧ ದಂಗೆ ಎದ್ದು ಚಾಲುಕ್ಯ ಪಟ್ಟವನ್ನು ತಾನೇ ಆಕ್ರಮಿಸಿದಾಗ ರಾಚಮಲ್ಲನಿಗೆ ಕಳಚುರಿಗಳ ಅಧಿಪತ್ಯವನ್ನು ಒಪ್ಪಿಕೊಳ್ಳುವುದು ಅನಿವಾರ್ಯವಾಯಿತು. ಕ್ರಿ.ಶ. ೧೧೭೬ರ ಕುರುಗೊಡಿನ ಒಂದು ಶಾಸನವು ರಾಚಮಲ್ಲನನ್ನು ಕಳಚುರಿ ಅರಸನಾದ ರಾಯಮುರಾರಿ ಸೋವಿದೇವನ ಮಾಂಡಲಿಕನೆಂದು ಬಿಂಬಿಸುತ್ತದೆ.[೧೮೯] ಇದೇ ಊರಿನ ಕ್ರಿ.ಶ. ೧೧೭೭ರ ಇನ್ನೊಂದು ಶಾಸನವು ಅವನು ಇದೇ ಮನೆತನದ ಶಂಖವರ್ಮ ಅಥವಾ ಸಂಕಮನ ಅಧೀನನಾಗಿ ಕುರುಗೊಡನ್ನು ಆಳುತ್ತಿದ್ದನೆಂದು ಹೇಳಿದೆ.[೧೯೦] ೪ನೇ ಸೋಮೇಶ್ವರನು ಚಾಲುಕ್ಯ ಸತ್ತೆಯನ್ನು ಪುನಃ ಸ್ಥಾಪಿಸಿದಾಗ ಅವರ ಅಧೀನತ್ವವನ್ನು ಒಪ್ಪಿಕೊಂಡನು.[೧೯೧] ಇದೇ ಸಮಯದಲ್ಲಿ ಚಾಲುಕ್ಯ ಸೋಮೇಶ್ವರ, ಸೇವುಣ ಬಿಲ್ಲಮ, ಹೊಯ್ಸಳ ಬಲ್ಲಾಳ ಇವರ ನಡುವಿನ ತ್ರಿಕೋನ ಕಾದಾಟದಲ್ಲಿ ಬಳ್ಳಾರಿ ಪ್ರದೇಶವು ಹೊಯ್ಸಳರ ವಶವಾಯಿತೆಂದು ಹೇಳಲು ಈ ಜಿಲ್ಲೆಯಲ್ಲಿ ದೊರೆತ ಅನೇಕ ೨ನೇ ಬಲ್ಲಾಳನ ಶಾಸನಗಳು ಸಾಕ್ಷಿಯಾಗಿವೆ.

ಇತರ ಸಿಂದ ಮನೆತನಗಳಂತೆ ಕುರುಗೋಡಿನ ಸಿಂದರು, ಚಾಲುಕ್ಯ ಸಮಕಾಲೀನ ಮತ್ತು ಮಾಂಡಲಿಕರೆ. ಚಾಲುಕ್ಯ ಸಾಮ್ರಾಜ್ಯದಲ್ಲಿ ನಡೆದ ಏರುಪೇರುಗಳು ಅವರ ಮೇಲೂ ಪರಿಣಾಮಗಳನ್ನು ಬೀರಿದವು. ಆದರೂ ಈ ಸಾಮಂತರ ಆಡಳಿತದಲ್ಲಿ ಅಂತಹ ಪರಿಣಾಮಕಾರಿ ಘಟನೆಗಳು ನಡೆಯಲಿಲ್ಲ.

## ೪ – ಅಟ್ಟಳೆನಾಡಿನ ಸಿಂದರು

ಬೀದರ ಜಿಲ್ಲೆಯ ರಂಜೇರು ಎಂಬಲ್ಲಿ ದೊರೆತ ಹಲವು ಶಾಸನಗಳು ಅಟ್ಟಳೆ ನಾಡನ್ನು ಆಳುತ್ತಿದ್ದ ಸಿಂದ ಮನೆತನದ ಬಗ್ಗೆ ಅನೇಕ ವಿವರ ಒದಗಿಸುತ್ತವೆ. ಆದ್ದರಿಂದ ಇವರನ್ನು ಕೆಲವು ಲೇಖಕರು ರಂಜೇರು ಸಿಂದರೆಂದು ಗುರುತಿಸಿದ್ದರೂ, ನಾವು ಅವರನ್ನು ಅಟ್ಟಳೆನಾಡಿನ ಸಿಂದರೆಂದು ಹೆಸರಿಸಿದ್ದೇವೆ. ರಂಜೇರಿನಲ್ಲಿ ದೊರೆತ ಶಾಸನವು ಸಿಂದ ವಂಶದ ಮೂಲವನ್ನು

ಹೇಗೆ ವಿವರಿಸುತ್ತದೆ ಎಂಬುದನ್ನು ಈ ಮೊದಲೇ ನೋಡಿದ್ದೇವೆ. ಅದರ ಪ್ರಕಾರ ನಿಡುದೊಳ ಸಿಂದನಿಗೂ ಕದಂಬ ಮಯೂರವರ್ಮನ ಮಗಳಾದ ಲಕ್ಷ್ಮೀಮತಿಗೂ ವಿವಾಹ ಏರ್ಪಟ್ಟು, ಅವರಿಗೆ ಪ್ರಭುಸೇವ್ಯ, ಸತ್ಯಸೇವ್ಯ, ಜಗತ್‌ಸೇವ್ಯ, ಬುಧಸೇವ್ಯ ಎಂಬ ಮಕ್ಕಳು ಹುಟ್ಟಿದರು. ಅದರಲ್ಲಿ ಜಗತ್‌ಸೇವ್ಯನು ಅಟ್ಟಳೆ ನಾಡಿನ ಅಧಿಪತಿಯಾದನು. ಅಟ್ಟಳೆ ನಾಡು ಈಗಿನ ಬೀದರ ಜಿಲ್ಲೆಯ ಕೆಲವು ಪ್ರದೇಶಗಳನ್ನು ಒಳಗೊಂಡಿದ್ದಿತು. ಈ ಶಾಸನವು ದೊರೆತ ರಂಜೋಳ ಗ್ರಾಮವು ಬೀದರ ತಾಲೂಕಿನಲ್ಲಿಯೇ ಇದೆ.[೧೮೨] ಈ ಕಥೆಯ ಪ್ರಕಾರ ರಂಜೇರು ಸಿಂದ ಮನೆತನದ ಸ್ಥಾಪಕನು ಜಗತ್‌ಸೇವ್ಯನು. ಆದರೆ ಈಗಾಗಲೇ ಚರ್ಚಿಸಿದಂತೆ ನಿಡುದೋಳ ಸಿಂದನ ಅಥವಾ ಅವನ ಮಕ್ಕಳ ಐತಿಹಾಸಿಕತೆಯನ್ನು ನಿರ್ಧರಿಸುವುದಕ್ಕೆ ಆಗುವುದಿಲ್ಲ. ಬಹುಶಃ ಅದು ಐತಿಹ್ಯವೆಂದೇ ನಾವು ಪರಿಗಣಿಸಿದ್ದೇವೆ. ಜಗತ್‌ಸೇವ್ಯನಲ್ಲದೇ ಅವನ ವಂಶದಲ್ಲಿ ಕುನ್ನುಲ ಮತ್ತು ಬೊಪ್ಪುಲ ಎಂಬುವರು ಬಂದರು. ಬೊಪ್ಪುಲನ ನಂತರ ದುಗ್ಗತಿ, ಹರಕತಿ ಎಂಬವರು ಆಳಿದರೆಂದು ಶಾಸನವು ಹೇಳುತ್ತದೆ. ಬಿ.ಆರ್ ಗೋಪಾಲ ಅಭಿಪ್ರಾಯದಂತೆ ಇವರ್‍ಯಾರು ಐತಿಹಾಸಿಕ ವ್ಯಕ್ತಿಗಳಲ್ಲ. ಶಾಸನವು ಒಡೆದು ಹೋಗಿದ್ದರಿಂದ ಅನೇಕ ಮಹತ್ವದ ವಿಷಯಗಳು ಕಾಣೆಯಾಗಿವೆ. ಲಭ್ಯವಿದ್ದ ಭಾಗದಿಂದ ಕೆಲವು ವಿಷಯಗಳನ್ನು ಸಂಗ್ರಹಿಸಬಹುದಾಗಿದೆ.

ಶಾಸನವು ಹೇಳಿದಂತೆ, ಅಟ್ಟಳೆ ನಾಡು, ಕುಂತಳ ವಿಷಯದ ಒಂದು ಭಾಗವಾಗಿದ್ದಿತು. ಆ ಅಟ್ಟಳೆ ನಾಡಿಗೆ ಭೂಷಣವಾದ ಊರು ಅಂದರೆ ರಾಜಧಾನಿ ರಂಜೇರು, ಅದು ಸಿಂದಾನ್ವಯರ ನೆಲೆ. ಆದ್ದರಿಂದಲೇ ಇವರನ್ನು ರಂಜೇರು ಸಿಂದರು ಎಂದು ಕರೆಯುವದು ಯತಾರ್ಥವೇ ಆಗಿದೆ. ಈ ಶಾಸನದ ಮುಖ್ಯ ವ್ಯಕ್ತಿ ಹಜ್ಜನು. ಅವನ ಚರಿತ್ರೆಯನ್ನು ಕೊಡುವುದೇ ಈ ಶಾಸನದ ಮುಖ್ಯ ಉದ್ದೇಶ. ಆದರೆ ಆ ಮಹತ್ವದ ವಿಷಯಗಳನ್ನೊಳಗೊಂಡ ಭಾಗವು ಒಡೆದು ಹೋಗಿದ್ದರಿಂದ, ಮಹತ್ವದ ವಿಷಯ ಲಭ್ಯವಿಲ್ಲದಂತಾಗಿದೆ. ಈಗ ಸಿಕ್ಕಿರುವ ಪಾಠದಲ್ಲಿ ನಿಡುದೋಳ ಸಿಂದನ ಮತ್ತು ಅವನ ಮಕ್ಕಳ ವಿಷಯಗಳು ಇರುವದಲ್ಲದೇ ನಂತರದ ಕಾಲದಲ್ಲಿ ಬಂದ ಕುನ್ನುಲ, ಬೊಪ್ಪುಲರ ಉಲ್ಲೇಖವೂ ಇದೆ. ಮುಂದೆ ದುಗ್ಗತಿ, ಹರಕತಿ ಬಂದರು, ಅವನ ನಂತರ ವಂಶದಲ್ಲಿ ಅಲ್ಲಮ ಮತ್ತು ಅವನ ಮಗ ಬದ್ದೆಗ ಇವರು ಬಂದರು. ಬದ್ದೆಗನಿಗೆ ಗೊಣ್ಣ ಮತ್ತು ಗೊಂಕ ಎಂಬಿಬ್ಬರು ಮಕ್ಕಳಿದ್ದರು. ಅವರು ಚಾಲುಕ್ಯ ಸಿಂಹಾಸನಕ್ಕೆ ಬೆಂಬಲಿಗರಾಗಿ ನಿಂತು ಆ ರಾಜ್ಯವನ್ನು ಸ್ಥಿರಪಡಿಸಿದರು ಎಂಬ ಮಹತ್ವದ ಅಂಶ ಉಕ್ತವಾಗಿದೆ. ಲಭ್ಯವಿದ್ದ ಭಾಗದ ಕೊನೆಯ ಸಾಲುಗಳಲ್ಲಿ "*ಹಜ್ಜನೃಪೇಂದ್ರನ* ವಿಚಿತ್ರ ಚರಿತ್ರವನ್ನು" ಈ ಶಾಸನದಲ್ಲಿ

ಆರಂಭವಾಗುತ್ತದೆ. ಮುಂದಿನ ಭಾಗ ಒಡೆದು ಹೋಗಿದೆ. ಒಡೆದ ಭಾಗ ಸಿಗದೇ ಇದ್ದುದು ದುರ್ದೈವವೇ ಸರಿ.

ಮೇಲೆ ಹೇಳಿದ ನಾಲ್ವರಲ್ಲಿ ಅಣ್ಣತಮ್ಮಂದಿರಾದ ಗೊಣ್ಣ, ಗೊಂಕ ಇವರು "ಚಮೂನಾಥರು" ಅಂದರೆ ಸೇನಾಧಿಪತಿಗಳೆಂದು ವರ್ಣಿಸಲ್ಪಟ್ಟಿದ್ದಾರೆ. ಅರಸನ ಅಪ್ಪಣೆಯ ಮೇರೆಗೆ ಭೀಕರವಾದ ವೈರಿ ಸೈನ್ಯಗಳನ್ನು ನಾಶಮಾಡಿ ಚಾಲುಕ್ಯ ಸಿಂಹಾಸನವನ್ನು ಶಾಶ್ವತವಾಗಿ ನೆಲೆಗೊಳ್ಳುವಂತೆ ಮಾಡಿದರು ಎಂದು ಮುಂದೆ ವರ್ಣಿಸಲಾಗಿದೆ. ಇದರ ಮೇಲಿಂದ ಇವರು ಒಬ್ಬ ಕಲ್ಯಾಣ ಚಾಲುಕ್ಯ ಅರಸನ ದಂಡನಾಯಕರು ಆಗಿದ್ದರು ಎಂಬುದು ಸ್ಪಷ್ಟವಾಗುತ್ತದೆ. ಆದರೆ ಶಾಸನ ಒಡೆದಿದ್ದರಿಂದ ಚಾಲುಕ್ಯ ಅರಸ ಯಾರು ಎಂಬುದನ್ನು ಖಚಿತವಾಗಿ ಗುರುತಿಸಲು ಸಾಧ್ಯವಿಲ್ಲದಾಗಿದೆ. ಅವನು ೬ನೇ ವಿಕ್ರಮಾದಿತ್ಯನೇ ಎಂದು ಊಹಿಸಬಹುದು. ಇದೇ ಶಾಸನದಲ್ಲಿ ಉಲ್ಲೇಖಿಸಲ್ಪಟ್ಟ ಹಜ್ಜನು ಸಿಂದ ವಂಶಕ್ಕೆ ಸೇರಿದ್ದು, ಗೊಣ್ಣ ಅಥವಾ ಗೊಂಕನ ಮಗನಾಗಿದ್ದಿರಬಹುದು. ಅವನು ೬ನೇ ವಿಕ್ರಮಾದಿತ್ಯನ ಸಮಕಾಲೀನಾಗಿದ್ದಿರಬಹುದೆಂದು ಶಾಸನದಿಂದ ಸ್ಪಷ್ಟವಾಗುತ್ತದೆ ಏಕೆಂದರೆ ಶಾಸನವು ವಿಕ್ರಮಾದಿತ್ಯನದೇ ಆಗಿದೆ.

ಕ್ರಿ.ಶ. ೧೧೦೪ ರ ಇಂಚೂರ ಎಂಬಲ್ಲಿಯ ಶಾಸನದಲ್ಲಿ ಅಟ್ಟಳೆಯ ಗೊಂಕರಸನ ಉಲ್ಲೇಖವಿದ್ದು, ಇವನು ಮೇಲೆ ಉಲ್ಲೇಖಿಸಿದ ಗೊಂಕನೇ ಎಂದು ಹೇಳಬಹುದು.[೧೮೩] ಚಾಲುಕ್ಯ ಭೂಲೋಕಮಲ್ಲನ ಹಲ್ಲಹಳ್ಳಿ ಎಂಬಲ್ಲಿಯ ಶಾಸನದಲ್ಲಿ ಭೋಗಾವತಿಪುರವರೇಶ್ವರ ಎಂಬ ಬಿರುದುಳ್ಳ ಹಜ್ಜ ಭೂಪಾಳಕನ ಉಲ್ಲೇಖವಿದ್ದು ಅವನೂ ರಂಜೋಲ ಶಾಸನದ ಹಜ್ಜನೂ ಒಬ್ಬನೇ ಎಂದು ಹೇಳಬಹುದು. ಶಾಸನ ಒಡೆದಿದ್ದರಿಂದ ವಿವರಗಳಿಲ್ಲ.[೧೮೪] ಕ್ರಿ.ಶ. ೧೧೦೦ ನೇ ವರ್ಷದ ೬ನೇ ವಿಕ್ರಮಾದಿತ್ಯನ ಇನ್ನೊಂದು ಶಾಸನದಲ್ಲಿಯೂ ಇದೇ ಹಜ್ಜನ ಉಲ್ಲೇಖವಿದೆ. ಇವನು ವಿಕ್ರಮಾದಿತ್ಯನ ಕಾಲದಲ್ಲಿ ಅವನ ಸಾಮಂತನಾಗಿದ್ದುಕೊಂಡು ಆ ಸ್ಥಾನದಲ್ಲಿ ಮುಂದಿನ ಅರಸ ಭೂಲೋಕಮಲ್ಲ ೩ನೇ ಸೋಮೇಶ್ವರನ ಕಾಲದಲ್ಲಿಯೂ ಇದ್ದನೆಂದು ಸ್ಪಷ್ಟವಾಗುತ್ತದೆ.[೧೮೫] ಈ ಹಜ್ಜನ ಕೀರ್ತಿಯು ಮೂರೂ ಲೋಕಗಳಲ್ಲಿ ಹಬ್ಬಿದ್ದಿತು ಎಂಬ ವರ್ಣನೆಯು ಅವನು ವಿಕ್ರಮಾದಿತ್ಯನ ಮತ್ತು ಭೂಲೋಕಮಲ್ಲನ ಕಾಲದಲ್ಲಿ ಪ್ರಭಾವಶಾಲಿಯಾಗಿದ್ದನೆಂದು ಸೂಚಿತವಾಗುತ್ತದೆ. ಇವನು ನಾಗಲೋಕದವನು ಎಂಬುದು ಅರ್ಥಪೂರ್ಣವಾಗಿದೆ. ಇದೇ ಶಾಸನದಲ್ಲಿ ಅವನ ಹೆಂಡತಿಯ ಹೆಸರು ಹಮ್ಮಲದೇವಿ ಮತ್ತು ಮಗನು ಪೆರ್ಮಾಡಿ ಎಂದು ಹೇಳಿದೆ. ಕ್ರಿ.ಶ. ೧೧೩೨ ರ ಭೂಲೋಕಮಲ್ಲನ ಇನ್ನೊಂದು ಶಾಸನದಲ್ಲಿಯೂ ಭೋಗಾವತಿಪುರವರಶ್ವರ ಪೆರ್ಮಾಡಿದೇವನ ಉಲ್ಲೇಖವಿದ್ದು ಅವನು, ಮೇಲೆ ಹೇಳಿದ

ಪೆರ್ಮಾಡಿಯೂ ಒಬ್ಬನೇ ಎಂದು ಸಿದ್ಧವಾಗುತ್ತದೆ.[೧೮೬] ಕ್ರಿ.ಶ. ೧೧೧೭ ರ ೬ನೇ ವಿಕ್ರಮಾದಿತ್ಯನ ಒಂದು ಶಾಸನದಲ್ಲಿ ಹೆಮ್ಮಾಡಿ ಅರಸ ಎಂಬವನ ಉಲ್ಲೇಖವಿದ್ದು, ಇವನೂ ಸಹ ಮೇಲೆ ಹೇಳಿದ ಪೆರ್ಮಾಡಿಯೇ ಎಂದು ಬಿ.ಆರ್. ಗೋಪಾಲ ಊಹಿಸಿದ್ದಾರೆ.[೧೮೭] ಆದರೆ ಈ ಹೆಮ್ಮಾಡಿ ಅರಸನು ಸಿಂದ ವಂಶಕ್ಕೆ ಸೇರಿದವನು ಎಂಬ ಬಗ್ಗೆ ಯಾವ ಸೂಚನೆಯು ಇಲ್ಲ. ಪೆರ್ಮಾಡಿಯ ಹೆಂಡತಿ ಮೈಳಲದೇವಿ ಮತ್ತು ಅವರ ಮಗ ಭೈರವ ಎಂದು ರಂಜೋಲದ ಇನ್ನೊಂದು ಶಾಸನದಿಂದ ತಿಳಿದು ಬರುತ್ತದೆ.[೧೮೮] ಈ ಶಾಸನದಲ್ಲಿ ಅವನ ಹೆಸರಾಗಲಿ, ಕಾಲನಿರ್ದೇಶನವಾಗಲಿ ಇಲ್ಲ.

ಕ್ರಿ.ಶ. ೧೧೬೯ ರ ಇನ್ನೊಂದು ರಂಜೋಲ ಶಾಸನದಲ್ಲಿ ಮುಂದಿನ ತಲೆಮಾರಿನ ಹೆಸರುಗಳು ಹೀಗೆ ಬರುತ್ತವೆ.[೧೮೯]




ಮೂಲ ಶಾಸನ ಲಭ್ಯವಾಗದೇ ಇದ್ದುದರಿಂದ ಇದರ ಪಾಠವನ್ನು ಪರಿಶೀಲಿಸಲಾಗಿಲ್ಲ. ಆದ್ದರಿಂದ ಬಿ.ಆರ್. ಗೋಪಾಲ ರವರ ಪಾಠವನ್ನು ಆಧಾರವಾಗಿಟ್ಟುಕೊಂಡಿದ್ದೇವೆ. ವಿಶೇಷವೆಂದರೆ ಬರ್ಮದೇವನು ಕಳಚುರಿ ಸೋವಿದೇವನ ಮಾಂಡಲಿಕನಾಗಿದ್ದನು. ಚಾಲುಕ್ಯ ೩ನೇ ತೈಲನು ಬಿಜ್ಜಳನಿಂದ ಉಚ್ಚಾಟಿಸಲ್ಪಟ್ಟ ನಂತರ ಕಳಚುರಿಗಳ ಆಧಿಪತ್ಯವನ್ನು ಒಪ್ಪಿಕೊಳ್ಳುವುದು ಸಿಂದ ಸಾಮಂತರಿಗೆ ಅನಿವಾರ್ಯವಾಗಿರಬೇಕು.

ಈ ಹೆಸರುಗಳನ್ನು ಮೇಲೆ ತೋರಿಸಿದ ವಂಶಾವಳಿಯೊಂದಿಗೆ ಸಮೀಕರಿಸುವುದು ದುಸ್ತರ ಕ್ರಿ.ಶ. ೧೨೦೯ ರ ರಂಜೋಲದ ಇನ್ನೊಂದು ಶಾಸನವು ಮಹಾಮಂಡಳೇಶ್ವರ ಆದ್ಯರಸ ಎಂಬವನನ್ನು ಹೆಸರಿಸುತ್ತದೆ. ಅವನು ಸಿಂದ ಕುಲಕ್ಕೆ ಮತ್ತು ಹಜ್ಜನ ಮನೆತನಕ್ಕೆ ಸೇರಿದವನು. ಅವನು ಹಜ್ಜೇಶ್ವರ ದೇವರ ಪುನಃ ಪ್ರತಿಷ್ಠಾಪನೆ ಮಾಡಿದನು ಎಂಬುದರ ಮೂಲಕ ಇದು ಸೂಚಿತವಾಗುತ್ತದೆ.[೧೯೧] ಅವನು ಸೇವುಣ ಸಿಂಘಣದೇವನ ಕಾಲದಲ್ಲಿ, ಸಿಂಘಣನ ದಂಡನಾಯಕನಾದ ಬಲ್ಲಹದೇವನೆಂಬವನ ಅಧೀನನಾಗಿ ಅವನ ಅಪ್ಪಣೆ ಮೇರೆಗೆ ಕ್ರಿ.ಶ.

೧೨೮೯ರಲ್ಲಿ ಈ ಕಾರ್ಯ ಮಾಡಿದನೆಂದು ಈ ಶಾಸನದಲ್ಲಿ ಹೇಳಿದೆ. ಬಿ.ಆರ್. ಗೋಪಾಲರವರು ಇವನನ್ನು ಮೇಲೆ ವಂಶಾವಳಿಯಲ್ಲಿ ತೋರಿಸಿದ ಬರ್ಮದೇವನ ಮಗನೆಂದು ಸೂಚಿಸುತ್ತಾರೆ.

ಬೀದರ ಕೋಟೆಯ ತಖ್ತಮಹಲಿನ ಗೋಡೆಯಲ್ಲಿ ಕಟ್ಟಲಾದ ಒಂದು ಶಾಸನದ ತುಂಡಿನಲ್ಲಿ ಈ ಮನೆತನದ ಸಾಮಂತರ ಹೆಸರುಗಳು ಈ ರೀತಿಯಾಗಿ ಬರುತ್ತವೆ.




ಇಲ್ಲಿಯ ಈ ಹಿರಿಯ ಭೈರವದೇವನು ಕಾಕತೀಯರ ಬೆಂಬಲಿಗನಾಗಿದ್ದನೆಂದು ಶಾಸನದಿಂದ ತಿಳಿದು ಬರುತ್ತದೆ.[೯೨] ಈ ಶಾಸನದಲ್ಲಿ "ಸೇವುಣರಂಗೆಲಿದು.... ರುದ್ರದೇವರಾಯರಿಗೆ ನಿಶ್ಚಿಂತವಂ ಮಾಡಿದ" ಎಂದು ಹೇಳಿದೆ. ಅಂದರೆ ಇವನು ಕಾಕತೀಯ ರುದ್ರಮದೇವಿಯ ಬೆಂಬಲಿಗನಾಗಿ ಸೇವುಣರ ವಿರುದ್ಧ ಹೋರಾಡಿದನೆಂದು ಸೂಚಿತವಾಗುತ್ತದೆ. ಸೇವುಣ ಮಹಾದೇವ ಮತ್ತು ಕಾಕತೀಯ ರುದ್ರಮದೇವಿ ಇವರ ನಡುವಿನ ಕಾದಾಟಗಳು ಇತಿಹಾಸಕ್ಕೆ ತಿಳಿದ ವಿಷಯಗಳಾಗಿವೆ.[೯೩] ಹಿರಿಯ ಭೈರವನ ಕಾಲವನ್ನು ೧೨ನೇ ಶತಮಾನದ ಉತ್ತರ ಭಾಗವೆಂದು ನಿರ್ಧರಿಸಬಹುದು.

ಈ ಶಾಸನದಲ್ಲಿ ಇನ್ನು ಒಂದು ಮಹತ್ವದ ಅಂಶವಿದೆ. ಇದೇ ಮನೆತನದ ಒಬ್ಬನು ಒಂದು ಯುದ್ಧದಲ್ಲಿ ವೀರರನ್ನು ಸೋಲಿಸಿ ಬಹುಶಃ ಅದರಲ್ಲಿ ಗೆದ್ದ ವಸ್ತುಗಳನ್ನು ಚಾಲುಕ್ಯರಿಗಿತ್ತು, "*ಚಾಲುಕ್ಯರಾಯ ಪ್ರತಿಷ್ಠಾಪನಾಚರ್ಯ*" ಬಿರುದನ್ನು ಪಡೆದನೆಂದು ಹೇಳಿದೆ. ಅಂದರೆ ಅವನು ಕಳಚುರಿಗಳ ವಿರುದ್ಧ ಹೋರಾಡಿ ತನ್ನ ರಾಜ್ಯವನ್ನು ಪಡೆದ, ೪ನೇ ಸೋಮೇಶ್ವರನಿಗೆ ಈತ ಬೆಂಬಲವಾಗಿ ನಿಂತು ಈ ವಿಜಯವನ್ನು ಸಾಧಿಸಿ ಚಾಲುಕ್ಯ ರಾಜ್ಯವನ್ನು ಪುನಃ ಪ್ರತಿಷ್ಠಾಪಿಸಿದನಲ್ಲದೇ ಪ್ರಮುಖ ಪಾತ್ರ ವಹಿಸಿದ್ದನೆಂದು ತರ್ಕಿಸಬಹುದು.[೯೪] ಶಾಸನವು ಬಹಳಷ್ಟು ಒಡೆದು ಹೋಗಿದ್ದರಿಂದ ವಿಷಯ ಸ್ಪಷ್ಟವಾಗಿಲ್ಲದಿದ್ದರೂ, ಈ ವೀರನ ಹೆಸರು ಭೈರವನೇ ಎಂದು, ಅವನು ಮೇಲೆ ಉಲ್ಲೇಖಿಸಿದ ನೂರ್ಮಡಿಗಂಡ ಭೈರವ ಎಂದು ಹೇಳಬಹುದು.

ಸದ್ಯಕ್ಕೆ ತಿಳಿದುಬರುವಂತೆ ಇವನೇ ಅಟ್ಟಳೆನಾಡಿನ ಸಿಂದ ಮನೆತನಕ್ಕೆ ಸೇರಿದ ಕೊನೆಯ ಸಾಮಂತನು. ಈವರೆಗೆ ತಿಳಿದಂತೆ ಈ ಮನೆತನದ ಚರಿತ್ರೆ ಅರಿಯಲು ಶಾಸನಗಳೇ ಏಕೈಕ ಸಾಧನಗಳು. ದುರ್ದೈವದಿಂದ ದೊರೆತ ಬಹಳ ಶಾಸನಗಳು ಸವೆದು, ಅಳಿಸಿ ಅಥವಾ ಒಡೆದು ಹೋಗಿದ್ದರಿಂದ ಸ್ಪಷ್ಟ ಚಿತ್ರಣ ದೊರೆಯುವುದು ಕಠಿಣ. ಆಯಾ ಸಾಮಂತರ ಆಡಳಿತದ ಕಾಲಾವಧಿಯನ್ನು ನಿರ್ಧರಿಸುವುದು ಕಠಿಣವೇ. ಮೇಲೆ ನೋಡಿದಂತೆ ಹೆಸರುಗಳು ಅನೇಕವಿದ್ದರೂ ಅವುಗಳನ್ನು ಒಂದಕ್ಕೊಂದು ಸಂಬಂಧಿಸಿದಂತೆ ಅವರವರ ನಡುವಿನ ಸಂಬಂಧವನ್ನು ನಿರ್ದೇಶಿಸಿವುದು ಕಠಿಣವೇ. ದೊರೆತ ಸಾಮಗ್ರಿಗಳನ್ನು ಕೂಲಕಂಷವಾಗಿ ಪರಿಶೀಲಿಸಿ ಶಕ್ಯವಿದ್ದಷ್ಟು ಖಚಿತವಾದ ಮಾಹಿತಿಯನ್ನು ದೊರೆತಲೆಲ್ಲ ಅವರವರ ಕಾಲವನ್ನು ಸೂಚಿಸಿ ನಿರೂಪಿಸಲಾಗಿದೆ.



**ರಾಜಕೀಯ ಇತಿಹಾಸ**

ಅಟ್ಟಳೆನಾಡಿನ ಸಿಂದರ ಕಾರ್ಯಕ್ಷೇತ್ರವು ಬೀದರ ತಾಲೂಕಿನ ದಕ್ಷಿಣ ಭಾಗ, ಹುಮನಾಬಾದ ತಾಲೂಕಿನ ಉತ್ತರ ಭಾಗ, ಭಾಲ್ಕಿ ತಾಲೂಕಿನ ಕೆಲ ಪ್ರದೇಶಗಳು, ಇವುಗಳನ್ನೊಳಗೊಂಡು ಆಂಧ್ರಪ್ರದೇಶದ ಮೇಡಕ್ ಜಿಲ್ಲೆಯ ಜಹೀರಾಬಾದ್ ತಾಲೂಕಿನವರೆಗೆ ಹಬ್ಬಿತ್ತೆಂದು ಹೇಳಬಹುದು.[೧೯೫] ಕೆಲವು ವಿದ್ವಾಂಸರು ನಿಡುದೋಳ ಸಿಂದನ ಕಥೆಯನ್ನಾಧರಿಸಿ ಮನೆತನದ ಇತಿಹಾಸದ ಪ್ರಾಚೀನತೆಯನ್ನು ಕ್ರಿ.ಶ. ೮ನೇ ಶತಮಾನದವರೆಗೆ ಒಯ್ಯುತ್ತಾರೆ. ಆದರೆ ಈ ಕಥೆಯ ಐತಿಹಾಸಿಕತೆಯು ಪ್ರಶ್ನಾರ್ಹವಾಗಿದ್ದು ನಮ್ಮ ಅಭಿಪ್ರಾಯದಲ್ಲಿ ಕಲ್ಯಾಣ ಚಾಲುಕ್ಯರ ಸಾಮ್ರಾಜ್ಯದ ಸ್ಥಾಪನೆಯೊಂದಿಗೆ ಈ ಮನೆತನದ ಚರಿತ್ರೆಯೂ ಆರಂಭವಾಯಿತು. ವಂಶಾವಳಿಯ ಪ್ರಕಾರ ಅಲ್ಲಮ ಮತ್ತು ಅವನ ಮಗ ಬದ್ದೆಗ ಇವರು ಮನೆತನದ ಮೊದಲಿಗರು. ಇವರ ಬಗ್ಗೆ ಯಾವ ಮಾಹಿತಿಯು ದೊರೆಯುವುದಿಲ್ಲ. ನಂತರ ಬಂದವರು ಬದ್ದೆಗನ ಮಕ್ಕಳು ಗೊಣ್ಣ ಮತ್ತು ಗೊಂಕ. ರಂಜೋಲ ಶಾಸನದಲ್ಲಿ ಇವರು ಚಮೂನಾಥರು[೧೯೬] ಅಂದರೆ ಸೇನಾಧಿಪತಿಗಳು ಎಂದು ಕರೆಯಲ್ಪಟ್ಟಿದ್ದಾರೆ. ಅರಸನ ಅಪ್ಪಣೆ ಮಾಡಲು ವೈರಿ ಸೈನ್ಯಗಳನ್ನು ಕೊಂದು ಚಾಲುಕ್ಯ ಸಿಂಹಾಸನವು ಸೂರ್ಯ ಚಂದ್ರರು ಇರುವವರೆಗೆ ಉಳಿಯುವಂತೆ ಮಾಡಿದರೆಂದು ಶಾಸನದಲ್ಲಿ ಹೇಳಿದೆ. ಇದೇ ಸಂದರ್ಭದಲ್ಲಿ ಚೋಳ ಅರಸನ ಉಲ್ಲೇಖವಿರುವುದರಿಂದ ಈ ಸಹೋದರರು ಚೋಳ, ಚಾಲುಕ್ಯ ಕದನಗಳಲ್ಲಿ ಮುಂಚೂಣಿಯಲ್ಲಿದ್ದರೆಂದು ಅರ್ಥವಾಗುತ್ತದೆ. ಎಲ್ಲರಿಗೂ ತಿಳಿದಂತೆ ೧ನೇ ಸೋಮೇಶ್ವರನ ಕಾಲದಿಂದಲೂ ವಿಕ್ರಮಾದಿತ್ಯನ ಕೊನೆಯವರೆಗೆ ಚೋಳ ಚಾಲುಕ್ಯರ ನಡುವಿನ ಕದನಗಳು ನಿರಂತರವಾಗಿಯೇ ನಡೆದಿದ್ದವು. ಇಂಥ ಯುದ್ಧಗಳಲ್ಲಿ ಈ ಸಿಂದ ಸಾಮಂತರು ಸಕ್ರಿಯವಾಗಿ ಭಾಗವಹಿಸಿದ್ದರು ಎಂದಿಷ್ಟು ಮಾತ್ರ ಹೇಳಲು ಸಾಧ್ಯವಿದೆ.

ಮುಂದಿನವನಾದ ಹಜ್ಜ ಅಥವಾ ಹಜ್ಜರಸನು ೬ನೇ ವಿಕ್ರಮಾದಿತ್ಯನ ಕಾಲದಲ್ಲಿ ಪ್ರಭಾವಶಾಲಿಯಾಗಿದ್ದನೆಂದು ತಿಳಿದು ಬರುತ್ತದೆ. ಈ ಮನೆತನದ ಬರ್ಮದೇವನು ಹಜ್ಜೇಶ್ವರ ಎಂಬ ದೇವಾಲಯ ನಿರ್ಮಿಸಿದ್ದ.[೧೯೭] ಇಲ್ಲಿ ಗಮನಿಸಬೇಕಾದ ಒಂದು ಅಂಶವೆಂದರೆ, ರಂಜೋಲದಿಂದ ಕೇವಲ ೫ ಮೈಲುಗಳ ಅಂತರದ ಮೇಲೆ ಹಜ್ಜರಗಿ ಎಂಬ ಗ್ರಾಮವಿದೆ. ಇವುಗಳಿಂದ ಹಜ್ಜರಸನು ಈ ಮನೆತನದಲ್ಲಿ ಪ್ರಸಿದ್ಧ ವ್ಯಕ್ತಿಯೆಂದು ಊಹಿಸಬಹುದಾಗಿದೆ. ಹಜ್ಜನ ಮಗನಾದ ವೀರಪೆರ್ಮಾಡಿಯು ಹಜ್ಜನ ನಂತರ ವಿಕ್ರಮಾದಿತ್ಯನ ಕಾಲದಲ್ಲಿಯೇ ಅಧಿಕಾರಕ್ಕೆ ಬಂದು ಭೂಲೋಕಮಲ್ಲನ ಕಾಲದಲ್ಲಿಯೂ ಮುಂದುವರೆದನು.[೧೯೮] ಅವನು ೩ನೇ ತೈಲಪನ ನೆಚ್ಚಿನ ಬಂಟನಾಗಿದ್ದನೆಂದು ಒಂದು ಶಾಸನದಿಂದ ತಿಳಿದು ಬರುತ್ತದೆ. ತೈಲಪನ ಕಾಲದಲ್ಲಿ

ಬಿಜ್ಜಳನ ಆಕ್ರಮಣದಿಂದಾಗಿ ಚಾಲುಕ್ಯ ಸಾಮ್ರಾಜ್ಯ ತಾತ್ಕಾಲಿಕವಾಗಿಯಾದರೂ ತನ್ನ ಅಸ್ತಿತ್ವವನ್ನು ಕಳೆದುಕೊಂಡಿತು ಎಂಬುದನ್ನು ಈಗಾಗಲೇ ನೋಡಿದ್ದೇವೆ. ಇದರ ಪರಿಣಾಮವು ಈ ಹಿಂದೆ ನೋಡಿದ ಸಿಂದ ಮನೆತನಗಳ ಮೇಲೆ ಆದಂತೆ, ಅಟ್ಟಳೆನಾಡಿನ ಸಿಂದ ಮನೆತನದ ಮೇಲೆಯೂ ಆಯಿತು. ಪೆರ್ಮಾಡಿಯ ಮಗ ಬರ್ಮದೇವನು ಕಳಚುರಿ ಸೋವಿದೇವನ ಅಧೀನನಾಗಿದ್ದನೆಂದು ಹೇಳುವುದು ಶಾಸನದಿಂದ ತಿಳಿದು ಬರುತ್ತದೆ. ಶಾಸನದ ಕಾಲ ಕ್ರಿ.ಶ. ೧೧೮೬.[೧೯೯] ಈ ಕಾಲದಲ್ಲಿ ಚಾಲುಕ್ಯ ಸಾಮ್ರಾಜ್ಯಗಳಲ್ಲಿ ಆಗುತ್ತಿದ್ದ ಬದಲಾವಣೆಗಳನ್ನು ಈಗಾಗಲೇ ನೋಡಿದ್ದೇವೆ. ಕಳಚುರಿಗಳ ಆಳಿಕೆ ಕೇವಲ ೨೦ ವರ್ಷಗಳದ್ದಾಗಿದೆ. ಚಾಲುಕ್ಯ ೪ನೇ ಸೋಮೇಶ್ವರನು ಚಾಲುಕ್ಯ ಸತ್ತೆಯನ್ನು ಮತ್ತೆ ಸ್ಥಾಪಿಸಿದನು. ಈ ಕಾಲದಲ್ಲಿ ಅಟ್ಟಳೆನಾಡು ಸಿಂದ ಮನೆತನದ ಸಾಮಂತರ ಪಾತ್ರ ಪ್ರಮುಖವಾಗಿದ್ದಿತು ಎಂದು ಹೇಳಲು ಕಾರಣಗಳಿವೆ. ಬೀದರನಲ್ಲಿ ದೊರೆತ ಒಂದು ತ್ರುಟಿತ ಶಾಸನವು ಈ ಬಗ್ಗೆ ಸ್ಪಷ್ಟ ಸೂಚನೆಯನ್ನು ನೀಡುತ್ತದೆ. ಭೈರವ ಎಂಬ ಹೆಸರಿನ ವೀರನೊಬ್ಬನು ಘೋರವಾದ ಯುದ್ಧದಲ್ಲಿ ಗೆದ್ದ. ವಸ್ತು ವಾಹನಾದಿಗಳನ್ನು ಚಾಲುಕ್ಯ ಅರಸನಿಗೆ ಒಪ್ಪಿಸಿ '*ಚಾಲುಕ್ಯರಾಯ ಪ್ರತಿಷ್ಠಾಪನಾಚಾರ್ಯ*' ಎಂಬ ಬಿರುದು ಪಡೆದನೆಂದು ಈ ಶಾಸನದ ಸಾರಂಶ. ದುರ್ದೈವದಿಂದ ಶಾಸನದ ಬಹು ಭಾಗ ಒಡೆದು ಹೋಗಿದ್ದು, ಐತಿಹಾಸಿಕ ಮಹತ್ವದ ಮಾಹಿತಿಗಳು ಕಳೆದು ಹೋಗಿವೆ.[೨೦೦]

ಅಟ್ಟಳೆನಾಡಿನ ಸಿಂದರು ಚಾಲುಕ್ಯರ ನಿಷ್ಠಾವಂತ ಸಾಮಂತರು. ಅವರ ಆಳಿಕೆ ಆರಂಭವಾಗುವುದು ಚಾಲುಕ್ಯರ ಆಶ್ರಯದಲ್ಲಿ. ಈ ಮನೆತನದ ಗೊಣ್ಣ, ಗೊಂಕ ಎಂಬವರು ಚಾಲುಕ್ಯರ ಸೇನಾಪತಿಗಳಾಗಿ ಅಂದಿನ ರಾಜಕೀಯದಲ್ಲಿ ಪ್ರಮುಖ ಪಾತ್ರ ವಹಿಸಿದ್ದರೆಂದು ಮೇಲೆ ಹೇಳಿದ್ದೇವೆ. ಆದರೆ ಅವರು ಎಷ್ಟು ಬೆಂಬಲಿಗರಾಗಿ ನಿಂತರೂ ಕಾಲಗತಿ ಬದಲಾಗಲಿಲ್ಲ. ಸೇವುಣ ಮತ್ತು ಹೊಯ್ಸಳರ ಒತ್ತಡದಿಂದಾಗಿ ಚಾಲುಕ್ಯ ಸಾಮ್ರಾಜ್ಯವು ಅಳಿಯಿತು. ಈ ಸಾಮ್ರಾಜ್ಯದ ಉತ್ತರ ಭಾಗದಲ್ಲಿ ಅಂದರೆ ರಂಜೇರು ಪ್ರದೇಶವಾದ ಅಟ್ಟಳೆ ನಾಡಿನಲ್ಲಿ ಸೇವುಣರ ಸತ್ತೆ ಸ್ಥಾಪಿತವಾಯಿತು. ಇದೀಗ ನೋಡಿದಂತೆ ಆದ್ಯರಸನು ಸೇವುಣರ ಆಧಿಪತ್ಯವನ್ನು ಒಪ್ಪಿಕೊಂಡನು. ಆದರೆ ಈ ಸಾಮಂತರಿಗೆ ಅವು ಅಷ್ಟು ರುಚಿಸಿರಲಿಲ್ಲ ಎಂದು ತೋರುತ್ತದೆ. ಇದೇ ಹೊತ್ತಿಗೆ ಈ ಪ್ರದೇಶವು ಇನ್ನೊಂದು ಮಹತ್ವದ ರಾಜಕೀಯ ಬೆಳವಣಿಗೆ ಕಂಡಿತು. ಅದೇನೆಂದರೆ, ಮೊದಲಿನ ಚಾಲುಕ್ಯ ಸಾಮ್ರಾಜ್ಯದ ಪೂರ್ವ ಭಾಗದಲ್ಲಿ ಮೊಟ್ಟ ಮೊದಲ ಆಂಧ್ರ ರಾಜ್ಯವೆಂದು ಖ್ಯಾತವೆತ್ತ ಸ್ವತಂತ್ರ ಕಾಕತೀಯ ರಾಜ್ಯದ ಉದಯ. ಕಾಕತೀಯರು ಮೊದಲು ಕನ್ನಡ ಪ್ರದೇಶದವರೇ. ಈಗಿನ ಬೆಳಗಾಂವಿ ಸಮೀಪವಿರುವ ಕಾಕತಿ ಎಂಬ ಗ್ರಾಮ ಅವರ ಮೂಲಸ್ಥಳ.[೨೦೧] ಅವರೂ

ಚಾಲುಕ್ಯ ಮಾಂಡಲಿಕರಾಗಿಯೇ ಸಾಮ್ರಾಜ್ಯದ ಪೂರ್ವ ಭಾಗದಲ್ಲಿ ಅಧಿಕಾರದಲ್ಲಿದ್ದರು. ಹೊಯ್ಸಳ, ಸೇವುಣ ಮತ್ತು ಚಾಲುಕ್ಯರ ತ್ರಿಕೋನ ಹೋರಾಟದಲ್ಲಿ ಅವರಿಗೂ ಲಾಭ ದೊರೆಯಿತು. ಇವರು ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತಿರುವಾಗ ನಾವೇಕೆ ಸುಮ್ಮನಿರಬೇಕೆಂದು ಅವರು ಯೋಚಿಸಿರಬೇಕು. ಪರಿಸ್ಥಿತಿಯೂ ಅನುಕೂಲಕರವಿದ್ದಿತು. ಸೇವುಣರು, ಹೊಯ್ಸಳರು ತಮ್ಮ ಅಧಿಕಾರ ಭದ್ರಗೊಳಿಸುವ ಯತ್ನದಲ್ಲಿ ಈ ಪ್ರದೇಶದ ಕಡೆಗೆ ಲಕ್ಷ್ಯಗೊಡಲು ಆಗಲಿಲ್ಲ. ಇದರಿಂದ ಕಾಕತೀಯರೂ ಸುಲಭವಾಗಿ ಸ್ವಾತಂತ್ರ್ಯವನ್ನು ಘೋಷಿಸಿ ಸಾಮ್ರಾಜ್ಯ ಸ್ಥಾಪಿಸಿಕೊಂಡರು. ಓರಂಗಲ್ಲು ಅಥವಾ ಇಂದಿನ ವಾರಂಗಲ್ಲ ಅವರ ರಾಜಧಾನಿಯಾಯಿತು. ಆಂಧ್ರಪ್ರದೇಶದ ಬಹುಭಾಗದಲ್ಲಿ ಅವರ ಸಾಮ್ರಾಜ್ಯ ಹಬ್ಬಿತು. ಈ ಕಾಲದಲ್ಲಿ ಸೇವುಣರ ಸಮಕಾಲಿನನಾಗಿ ಗಣಪತಿಯು ಕಾಕತೀಯ ಅರಸನಾಗಿದ್ದನು. ಈ ಕಾಲದಲ್ಲಿ ಇತಿಹಾಸದಲ್ಲಿ ಅಪೂರ್ವವಾದ ಘಟನೆ ನಡೆಯಿತು. ಗಣಪತಿಗೆ ಗಂಡು ಮಕ್ಕಳಿರಲಿಲ್ಲ. ಅವನ ಒಬ್ಬಳೇ ಒಬ್ಬ ಮಗಳು ರುದ್ರಮದೇವಿಯನ್ನು ಗಂಡು ಮಗನಂತೆ ಬೆಳೆಸಿದನು. ಗಣಪತಿಯ ನಂತರ ಅವಳೇ ಪಟ್ಟಕ್ಕೆ ಬಂದಳು. ಚೋದ್ಯವೆಂದರೆ, ಸಾಮಾನ್ಯವಾಗಿ ಆಕೆ ರುದ್ರದೇವಿ ಅಷ್ಟೇ ಅಲ್ಲದೇ ಶಾಸನಗಳಲ್ಲಿ ಆಕೆಯನ್ನು "ರುದ್ರದೇವ" ಎಂದು ಗಂಡು ಹೆಸರಿನಿಂದಲೇ ಕರೆಯಲಾಗಿದೆ. ಆಕೆಯು ಅನೇಕ ಯುದ್ಧಗಳನ್ನು ಮಾಡಿ ಕಾಕತೀಯ ರಾಜ್ಯವನ್ನು ವಿಸ್ತಾರಗೊಳಿಸಿದ ಬಗ್ಗೆ ಹಲವಾರು ಸಾಕ್ಷಿಗಳಿವೆ. ಪಶ್ಚಿಮದ ಕಡೆಯ ಸೇವುಣರಿಗಂತೂ ಆಕೆ ಸಿಂಹಸ್ವಪ್ನವಾಗಿದ್ದಳು. ಸಿಂಘಣನ ಮೊಮ್ಮಗ ಮಹಾದೇವನು ಅವಳ ಸಮಕಾಲೀನನಾಗಿದ್ದನು. ಅವಳು ತನ್ನ ರಾಜ್ಯ ವಿಸ್ತರಣೆಯ ಕಾರ್ಯದಲ್ಲಿ ಸೇವುಣ ರಾಜ್ಯದ ಮೇಲೆ ಹಲವಾರು ಸಲ ದಾಳಿ ಮಾಡಿದಳು.[೨೦೨] ಇತ್ತ ಚಾಲುಕ್ಯ ನಿಷ್ಠರಾಗಿದ್ದ ಅಟ್ಟಳೆನಾಡಿನ ಸಿಂದರು ಸೇವುಣ ಆಳಿಕೆಯಿಂದ ಸಂತುಷ್ಟರಾಗಿರಲಿಲ್ಲ. ಪರಿಸ್ಥಿತಿಯ ಒತ್ತಾಯಕ್ಕೆ ಮಣಿದು ಅವರ ಆಧಿಪತ್ಯವನ್ನು ಒಪ್ಪಿಕೊಂಡಂತೆ ತೋರುತ್ತದೆ. ಈಗ ಪರಿಸ್ಥಿತಿಯನ್ನು ಗಮನಿಸಿ ಅವರು ತಮ್ಮ ನಿಷ್ಠೆಯನ್ನು ಕಾಕತೀಯರಿಗೆ ಬದಲಿಸಿದರು. ಕಾಕತೀಯರ ಪರವಾಗಿ ಸೇವುಣರ ವಿರುದ್ಧ ಅನೇಕ ಯುದ್ಧಗಳಲ್ಲಿ ಭಾಗವಹಿಸಿ ರುದ್ರಮದೇವಿಯ ವಿಜಯಕ್ಕೆ ಕಾರಣರಾದರು. ಈ ವಿಷಯವನ್ನು ತಿಳಿಸುವ ಕೆಲವು ಶಾಸನಗಳು ಸಿಂದರ ಸ್ಥಾನವಾದ ಬೀದರ ಜಿಲ್ಲೆಯಲ್ಲಿ ದೊರೆತಿವೆ. ಈ ಶಾಸನಗಳು ಕನ್ನಡದಲ್ಲಿ ಇದ್ದುದು. ಒಂದು ಸ್ವಾರಸ್ಯಕರ ಅಂಶ. ದುರ್ದೈವದಿಂದ ಬಹಳಷ್ಟು ಶಾಸನಗಳು ಕಾಣೆಯಾಗಿದ್ದು, ಇದ್ದ ಕೆಲವುಗಳು ಸಹ ತ್ರುಟಿತವಾಗಿವೆ. ಆದರೂ ಅವು ನಡೆದ ವಿಷಯಗಳನ್ನು ಬಿಂಬಿಸುತ್ತವೆ.

ಸೇವುಣ ಕಾಕತೀಯರ ನಡುವಿನ ಹೋರಾಟಗಳ ಬಗ್ಗೆ ಕೆಲವು ರೋಚಕ ಸಂಗತಿಗಳು ದಾಖಲಾಗಿವೆ. ಚತುರ್ವರ್ಗ ಚಿಂತಾಮಣಿ ಎಂಬ ಗ್ರಂಥ ಕರ್ತೃವು ಹೇಮಾದ್ರಿ, ಈ ಸೇವುಣ ಮಹಾದೇವನ ಮಂತ್ರಿ. ಒಂದೆರಡು ರೋಚಕ ಮಾತುಗಳನ್ನು ಹೇಳುತ್ತಾನೆ. ಅವೇನೆಂದರೆ, ಮಹಾದೇವನು "*ತಿಲ್ಲಿಂಗ*" ಅಂದರೆ ತೆಲಗು ಅರಸನ ಮೇಲೆ ದಾಳಿ ಮಾಡಿ ಧನಕನಕ ವಸ್ತುವಾಹನಗಳನ್ನು ವಶಪಡಿಸಿಕೊಂಡರೂ ಅರಸನ ಮೇಲೆ ಕೈಎತ್ತಲಿಲ್ಲವಂತೆ. ಏಕೆಂದರೆ, ಅವನು ಸ್ತ್ರೀಯರನ್ನು ಕೊಲ್ಲಲು ಅಪೇಕ್ಷಿಸುತ್ತಿರಲಿಲ್ಲವಂತೆ. ಈ ಕಾರಣಕ್ಕಾಗಿಯೇ ಮಹಾದೇವನ ಕೂಪದಿಂದ ಉಳಿದುಕೊಳ್ಳುವುದಕ್ಕಾಗಿಯೇ ಆಂಧ್ರರು ಸ್ತ್ರೀಯನ್ನು ಪಟ್ಟದ ಮೇಲೆ ಕುಳ್ಳಿಸಿದ್ದರಂತೆ.[೨೦೩] ಕಥೆ ಏನೇ ಇದ್ದರೂ ಕಾದಾಟಗಳು ಮಾತ್ರ ನಿರಂತರವಾಗಿದ್ದವು ಮತ್ತು ರುದ್ರಮದೇವಿಯ ಕೈ ಮೇಲಾಯಿತು ಎಂದು ಹೇಳಲು ಆಧಾರಗಳಿವೆ. ಹಿರಿಯ ಭೈರವದೇವನು ಸೇವುಣರನ್ನು ಸೋಲಿಸಿ ರುದ್ರದೇವರಾಯನನ್ನು ಅಂದರೆ ರುದ್ರದೇವಿಯನ್ನು ನಿಶ್ಚಿಂತಗೊಳಿಸಿದ ಎಂದು ಶಾಸನದಲ್ಲಿ ಬರುವ ಮಾತನ್ನು ಮೇಲೆ ಉಲ್ಲೇಖಿಸಿದ್ದೇವೆ. ಈ ಕಥೆಯನ್ನು ವಿವರವಾಗಿ ಹೇಳುವ ಸುಧೀರ್ಘ ಶಾಸನವೊಂದು ಈಗ ಭಗ್ನಾವಸ್ಥೆಯಲ್ಲಿ ಬೀದರಿನ ವಸ್ತು ಸಂಗ್ರಹಾಲಯದಲ್ಲಿದೆ.[೨೦೪] ವಿವಿಧ ವೃತ್ತಗಳಲ್ಲಿ ಸಾಹಿತ್ಯಿಕವಾಗಿ ವರ್ಣನಾತ್ಮಕವಾಗಿ ಬರೆಯಲ್ಪಟ್ಟ ಈ ಶಾಸನವು ಬಹಳಷ್ಟು ಒಡೆದು ಹೋಗಿದ್ದರೂ, ಸ್ವಲ್ಪವಾದರೂ ಮಹತ್ವದ ಮಾಹಿತಿಯನ್ನು ಒದಗಿಸುತ್ತದೆ.

ಶೇಷ ಕುಲದಲ್ಲಿ ಅಂದರೆ ಫಣಿ ವಂಶದಲ್ಲಿ ಹುಟ್ಟಿದ ಈ ಭೈರವನು ರುದ್ರಮದೇವಿಯ ರಾಜ್ಯದ ಭಾರವನ್ನು ಹೊತ್ತಿದ್ದನು. ವಿಷ್ಣುವಿಗೆ ಗರುಡನು, ರಾಮನಿಗೆ ಹನುಮನು ಇದ್ದಂತೆ ಇದ್ದ. ಸಿಂದಾನ್ವಯರ ಈ ಭೈರವನು ಸೇವುಣ ಸೈನ್ಯವನ್ನು ಸಂಪೂರ್ಣವಾಗಿ ಸೋಲಿಸಿದನು. ಇತರ ಬಲಿಷ್ಠ ರಾಜರನ್ನು ಸೋಲಿಸಿ ಅಪಾರ ಸಂಪತನ್ನು ರುದ್ರಮದೇವಿಗೆ ತಂದು ಒಪ್ಪಿಸಿದನು. ರುದ್ರಮದೇವಿಯ ಶೌರ್ಯ, ಸಂಪತ್ತಿಗೆ "ಈತನೇ ಮುಖ್ಯಂ" ಎಂದು ಶಾಸನದಲ್ಲಿ ವರ್ಣಿಸಲ್ಪಟ್ಟಿದೆ. ಶಾಸನವು ಈ ವೀರಭೈರವನ ರಾಜಧಾನಿಯನ್ನು ರಾಜ್ಯದ ಅಟ್ಟಳೆ ದೇಶವೆಂದು ವರ್ಣಿಸತೊಡಗುತ್ತದೆ. ಆದರೆ ಅಲ್ಲಿಗೆ ಶಾಸನ ತುಂಡಾಗಿದೆ. ಈ ಭೈರವನು ಮೇಲೆ ಉಲ್ಲೇಖಿಸಲಾದ ನೂರ್ಮಡಿಗಂಡನ ವಂಶಾವಳಿಯಲ್ಲಿ ಕೊನೆಗೆ ಬರುವವ. ಹಿರಿಯ ಭೈರವದೇವ.[೨೦೫] ಇಲ್ಲಿ ಅತೀಶೋಕ್ತಿಗೆ ಎಡೆಯಿದ್ದರೂ, ಐತಿಹಾಸಿಕವನ್ನು ವಿಷಯ ಮರೆಮಾಚಿಲ್ಲ. ಈ ಎಲ್ಲ ವರ್ಣನೆಯಿಂದ ಸ್ಪಷ್ಟವಾಗುವ ಸಂಗತಿ ಎಂದರೆ, ಅಟ್ಟಳೆನಾಡಿನ ಸಿಂದರು ಕಾಕತೀಯರ ಅಧೀನತೆಯನ್ನು ಒಪ್ಪಿ ಆ ರಾಜ್ಯದ ವಿಸ್ತಾರ, ಏಳ್ಗೆಗೆ ಶ್ರಮಿಸಿದರು ಎಂದು ಸ್ಪಷ್ಟವಾಗುತ್ತದೆ.

ಇನ್ನೊಂದು ವಿಷಯವೆಂದರೆ ಶಾಸನದಲ್ಲಿ ಭೈರವನ ಸಹೋದರನ ಉಲ್ಲೇಖವಿದೆ. ಅವನು ಸಹೋದರರೊಂದಿಗೆ ಕೂಡಿಕೊಂಡು ಸುಖದಿಂದ ರಾಜ್ಯವಾಳುತ್ತಿದ್ದನೆಂದು ಶಾಸನ ಹೇಳುತ್ತದೆ. ಆದರೆ ಸದ್ಯಕ್ಕೆ ದೊರೆಯುವ ಪಾಠದಲ್ಲಿ ಸಹೋದರರ ಹೆಸರಿಲ್ಲ. ನಮ್ಮ ಸಾಧನ ಸಾಮಗ್ರಿಗಳ ಪ್ರಕಾರ ಈ ಹಿರಿಯ ಭೈರವದೇವನು ಕೊನೆಯ ಅಟ್ಟಳೆನಾಡಿನ ಸಾಮಂತನು.

**೫ – ಬಾಗಡಗೆಯ ಸಿಂದರು**

ಬಾಗಡಗೆಯ ಸಿಂದರದ್ದು ಒಂದು ಚಿಕ್ಕ ಮನೆತನ. ಬಾಗಡಗೆ–೭೦ ಎಂಬುದು ಅವರ ಆಡಳಿತ ಪ್ರದೇಶ. ೭೦ ಗ್ರಾಮಗಳ ಈ ಬಾಗಡಗೆಯು ಇಂದಿನ ಬಾಗಲಕೋಟೆ ಜಿಲ್ಲಾ ಸ್ಥಳವೆಂದು ಹಿಂದೆಯೇ ಜೆ. ಎಫ್. ಫ್ಲೀಟರು ನಿರ್ಧರಿಸಿದ್ದಾರೆ. ಇದನ್ನು ರಾಜಧಾನಿ ಬಾಗಡಗೆ ಕೋಟೆ ಎಂದು ಶಾಸನದಲ್ಲಿ ಹೇಳಿದೆ.[೨೦೬] ಈ ಸಿಂದರ ಬಗ್ಗೆ ಒಂದೇ ಒಂದು ಶಾಸನ ಲಭ್ಯವಿದ್ದು ಅದರಲ್ಲಿಯ ವಿವರಗಳ ಪ್ರಕಾರ ಕೇವಲ ನಾಲ್ಕು ತಲೆಮಾರಿಗೆ ಇವರ ಆಳಿಕೆ ಮುಕ್ತಾಯವಾಗುತ್ತದೆ. ಈ ಶಾಸನದ ವೈಶಿಷ್ಟ್ಯವೆಂದರೆ ನಾವು ಹಿಂದೆ ನೋಡಿದಂತೆ ನಿಡುದೋಳ ಸಿಂದನ ಕಥೆಯನ್ನು ಹೇಳುತ್ತದೆ. ಇದು ಹೆಚ್ಚಾಗಿ ರಂಜೋಲ ಶಾಸನದ ಕಥೆಯನ್ನೇ ಹೇಳಿದರೂ, ಒಂದು ಪ್ರಮುಖ ವ್ಯತ್ಯಾಸವಿದೆ. ಈ ಶಾಸನದಲ್ಲಿ ನಿಡುದೋಳ ಸಿಂದನು ಕದಂಬ ಅರಸನ ಮಗಳನ್ನು ಮದುವೆಯಾಗಿ ಮೂರು ಮಕ್ಕಳನ್ನು ಪಡೆದನೆಂದು ಹೇಳಿದೆ. ರಂಜೋಲ ಶಾಸನವು ಈ ಕದಂಬ ಕನ್ಯೆಯ ಹೆಸರು ಲಕ್ಷ್ಮಿಮತಿ ಎಂದು ಹೇಳಿ ಅವಳಿಗೆ ನಾಲ್ವರು ಮಕ್ಕಳೆಂದು ಹೇಳಿದೆ. ಈ ನಾಲ್ವರು ಬೇರೆ ಬೇರೆ ಮನೆತನಗಳನ್ನು ಸ್ಥಾಪಿಸಿದರು. ಅವರಲ್ಲಿ ಪ್ರಭುಸೇವ್ಯನೆಂಬುವನು ಬಾಗಡಗೆ ನಾಡಿನ ಅಧಿಪತಿಯಾದನು. ನಾವು ಈ ಹಿಂದೆ ನೋಡಿದಂತೆ ನಿಡುದೊಳ ಸಿಂದನಾಗಲಿ ಅವನ ಮಕ್ಕಳಾಗಲಿ, ಐತಿಹಾಸಿಕ ವ್ಯಕ್ತಿಗಳೆಂದು ಪರಿಗಣಿಸಲು ಬರುವುದಿಲ್ಲ. ಬಹು ಹಿಂದೆಯೇ ಭೈರನಮಟ್ಟಿ ಶಾಸನವನ್ನು ಪ್ರಕಟಿಸಿದ ಫ್ಲೀಟರವರು ಮತ್ತು ಈ ವಂಶವನ್ನು ಕೂಲಂಕಷವಾಗಿ ಅಭ್ಯಸಿಸಿದ ಬಿ.ಆರ್. ಗೋಪಾಲ ಅವರು ಇದೇ ಅಭಿಪ್ರಾಯ ಹೊಂದಿದ್ದಾರೆ. ಹಿರೇಮಠ ಚನ್ನಬಸವಯ್ಯ ಮಾತ್ರ ಈ ಇಡೀ ಕಥೆಗೆ ಐತಿಹಾಸಿಕತೆಯನ್ನು ಆರೋಪಿಸಿ ಇವರೇ ಸಿಂದ ವಂಶದ ವಿವಿಧ ಸಿಂದ ಮನೆತನಗಳ ಆರಂಭಿಕರೆಂದು ಅಭಿಪ್ರಾಯ ಪಡುತ್ತಾರೆ.[೨೦೭] ಹೀಗೆ ಪರಿಗಣಿಸುವಲ್ಲಿ ಎಂಥ ತೊಡಕುಗಳಿವೆ ಎಂಬುದನ್ನು ವಿವರಿಸಿದ್ದೇವೆ. ಭೈರನಮಟ್ಟಿ ಶಾಸನದಿಂದ ತಿಳಿದು ಬರುವಂತೆ ಬಾಗಡಗೆಯ ಸಿಂದರ ಇತಿಹಾಸವು ಕಲ್ಯಾಣ ಚಾಲುಕ್ಯರ ಇತಿಹಾಸದಿಂದ ಆರಂಭವಾಗುತ್ತದೆ. ಈ ಶಾಸನವು ನಿಡುದೊಳ ಸಿಂದ, ಅವನ

ಮೂವರು ಮಕ್ಕಳು, ತದನಂತರ ಆಳಿದರೆಂದು ಹೇಳಲಾಗುವ ಮೂವತ್ತೊಂದು ಜನರು. ನಂತರ ಸಿಂದನೆಂಬ ಕುಮಾರನು ಹುಟ್ಟಿದನೆಂದು ಹೇಳಿದೆ. ಅವನ ನಂತರ ಕಮ್ಮರನೆಂಬುವನು ಬಂದನು. ಈ ಕಮ್ಮರನಿಗೆ ಪುಲಿಕಾಲನೆಂಬ ಮಗ ಹುಟ್ಟಿದನು. ಪುಲಿಕಾಲ ಮತ್ತು ಅವನ ಹೆಂಡತಿ ರೇವಕಬ್ಬರಸಿಗೆ ನಾಗಾದಿತ್ಯನೆಂಬ ಮಗನು ಹುಟ್ಟಿದನು. ನಾಗಾದಿತ್ಯ ಮತ್ತು ಅವನ ಹೆಂಡತಿ ಪೊಲಯಬ್ಬರಸಿಗೆ, ಪೊಲಸಿಂದ ಎಂಬ ಮಗನು ಹುಟ್ಟಿದನು. ಅವನ ಹೆಂಡತಿ ಖಾಂಡವ ಮಂಡಳೇಶ್ವರನ ಮಗಳಾದ ಬಿಜ್ಜಲದೇವಿಗೆ ಸೇವ್ಯನೆಂಬ ಮಗ ಹುಟ್ಟಿದ.

ಭೈರನಮಟ್ಟಿ ಶಾಸನವನ್ನು ಪ್ರಕಟಿಸಿದ ಫ್ಲೀಟರವರು ಹೇಳುವಂತೆ ಮೊದಲ ಐತಿಹಾಸಿಕ ಪುರುಷ ಪುಲಿಕಾಲ. ಶಾಸನವು ಹೇಳುವಂತೆ ೨ನೇ ತೈಲನ ಸಮಕಾಲೀನನು. ನಮಗೆಲ್ಲ ತಿಳಿದಂತೆ, ಈ ತೈಲ ಅಥವಾ ತೈಲಪನು ರಾಷ್ಟ್ರಕೂಟರಿಂದ ಸಾಮ್ರಾಜ್ಯವನ್ನು ಮರಳಿ ಪಡೆದು ಚಾಲುಕ್ಯ ಸತ್ತೆಯನ್ನು ಮತ್ತೆ ಪ್ರತಿಷ್ಠಾಪಿಸಿದವನು. ಪುಲಿಕಾಲನ ತಂದೆ ಕಮ್ಮರ ಅಥವಾ ಕಮ್ಮಯ್ಯರಸನ ಬಗ್ಗೆ ಯಾವ ಮಾಹಿತಿಯೂ ಇಲ್ಲ. ಶಾಸನದಿಂದ ಸಿಂದಕುಮಾರ ಎಂಬ ಒಬ್ಬನ ಉಲ್ಲೇಖವಿದ್ದು, ಅವನೇ ಬಾಗಡಗೆಯ ಸಿಂದ ಮನೆತನದ ಮೊದಲ ವ್ಯಕ್ತಿಯೆಂದು ಹಿರೇಮಠ ಚನ್ನಬಸವಯ್ಯ ಹೇಳುತ್ತಾರೆ. ಕ್ರಿ.ಶ. ೯೩೩ನೇ ವರ್ಷದ ಮಹಾಕೂಟ ಶಾಸನದಲ್ಲಿ.[೨೦೮] ಸಿಂದ ಎಂಬ ಹೆಸರಿನ ಉಲ್ಲೇಖವಿದ್ದು, ಇವರು ಇಬ್ಬರು ಒಂದೇ, ಮತ್ತು ಅವನ ಕಾಲ ಕ್ರಿ.ಶ. ೯೩೩ ರಿಂದ ೯೬೫ ಎಂದು ಹೇಳಿದೆ. ಹೀಗೆ ಗುರುತಿಸುವುದಕ್ಕೆ ಶಬ್ದ ಸಾಮ್ಯ ಒಂದೇ ಆಧಾರ. ಶಾಸನದಲ್ಲಿ ಹೇಳಿದಂತೆ ಪುಲಿಕಾಲನ ಕಾಲ ಕ್ರಿ.ಶ. ೯೯೦-೯೧. ಪುಲಿಕಾಲನ ಮಗ ನಾಗಾದಿತ್ಯನು "ಮಹಾಮಂಡಳೇಶ್ವರ" ಎಂದು ಕರೆಯಲ್ಪಟ್ಟಿದ್ದು ಒಂದು ವಿಶೇಷ. ಇವನು ಜಗದೇಕಮಲ್ಲ ಜಯಸಿಂಹನ ಸಮಕಾಲೀನನೆಂದು ಶಾಸನದಿಂದ ತಿಳಿದು ಬರುತ್ತದೆ. ಕ್ರಿ.ಶ. ೧೦೩೩ರಲ್ಲಿ ತೇಜೋಕಾಶಿ ಪಂಡಿತ ಎಂಬವರಿಗೆ ದಾನ ಮಾಡಿದ ವಿಷಯವು ಭೈರನಮಟ್ಟಿ ಶಾಸನದಲ್ಲಿದೆ. ಈ ತೇಜೋರಾಶಿ ಪಂಡಿತರು ಸಿಂದೇಶ್ವರ ದೇವರ ದೇವಸ್ಥಾನದ ಸ್ಥಾಪನಾಚಾರ್ಯರು. ಇಲ್ಲಿ ಸಿಂದೇಶ್ವರ ಎಂಬ ಹೆಸರು ಗಮನಾರ್ಹವಾಗಿದೆ. ಇದಕ್ಕೂ ಮೊದಲೇ ಇದೇ ನಾಗಾದಿತ್ಯನು ಇದೇ ದೇವಾಲಯಕ್ಕೆ "ಪರತ್ರಯ ಸಿಂಹ ಭಟಾರ" ಎಂಬ ಯತಿಗಳಿಗೆ ದಾನ ಮಾಡಿದನೆಂದು ಶಾಸನದಿಂದ ತಿಳಿದು ಬರುತ್ತದೆ. ಕ್ರಿ.ಶ. ೧೦೩೦-೧೦೩೪ರ ಹಳ್ಳೂರು ಶಾಸನದಲ್ಲಿ.[೨೦೯] ಮಹಾಸಾಮಂತ ನಾಗತಿಯರಸ ಎಂಬ ಉಲ್ಲೇಖವಿದ್ದು ಇವನೂ, ನಾಗಾದಿತ್ಯನೂ ಒಂದೇ ಎಂದು ಹಿರೇಮಠ ಚನ್ನಬಸವಯ್ಯ ಅಭಿಪ್ರಾಯಪಡುತ್ತಾರೆ.[೨೧೦] ಹೀಗೆ ಗುರುತಿಸುವುದಕ್ಕೆ ಶಬ್ದ ಸಾಮ್ಯ ಬಿಟ್ಟರೆ ಬೇರೆ ಸೂಚನೆ ಇಲ್ಲ.

ನಾಗಾದಿತ್ಯನ ಮಗ ಪುಲಸಿಂದ. ಇವನು ಖಾಂಡವಮಂಡಳೇಶ್ವರನ ಮಗಳಾದ ಬಿಜ್ಜಲದೇವಿಯನ್ನು ಮದುವೆಯಾದ ಅಂಶ ಶಾಸನದಿಂದ ತಿಳಿದು ಬರುತ್ತದೆ. ಈ ಖಾಂಡವ ಮಂಡಳೇಶ್ವರನನ್ನು ಗುರುತಿಸುವುದು ಕಠಿಣ. ಖಾಂಡವಮಂಡಲವು ಪುರಾಣ ಕಾಲದಿಂದಲೂ ಪ್ರಸಿದ್ಧ ಪ್ರದೇಶ. ವಿಂಧ್ಯ ಪರ್ವತಾವಳಿಯ ಒಂದು ಭಾಗವಾಗಿದ್ದಿತು. ಅದರ ಆಧುನಿಕ ಕುರುಹುಗಳು ಎಂದರೆ ಇಂದಿನ ಮಧ್ಯಪ್ರದೇಶದಲ್ಲಿರುವ ಖಾಂಡವಾ ಎಂದು ಹೇಳಬಹುದು. ಈ ಪ್ರದೇಶಕ್ಕೆ ಸಿಂದರಿಗೆ ಸಂಬಂಧ ಹೇಗೆ ಏರ್ಪಟ್ಟಿತೋ ತಿಳಿಯದು. ಪೊಲಸಿಂದನ ಮಗ ಸೇವ್ಯ ಇವನ ಬಗ್ಗೆಯೂ ಶಾಸನದಲ್ಲಿ ಯಾವ ಮಾಹಿತಿಗಳು ಇಲ್ಲ. ಇವರ ವಂಶಾವಳಿಯನ್ನು ಈ ರೀತಿಯಾಗಿ ತೋರಿಸಬಹುದು.

ಕಮ್ಮರಸ (ಸಗರಬ್ಬರಸಿ, ಹೆಂಡತಿ)
|
ಪುಲಿಕಾಲ (ರೇವಕಬ್ಬರಸಿ, ಹೆಂಡತಿ)
(ಕ್ರಿ.ಶ. ೯೯೦)
|
ಮಹಾಸಾಮಂತ ನಾಗಾದಿತ್ಯ (ಪೊಲಯಬ್ಬರಸಿ, ಹೆಂಡತಿ)
(ಕ್ರಿ.ಶ. ೧೦೩೩)
|
ಪೊಲಸಿಂದ (ಬಿಜ್ಜಲದೇವಿ, ಹೆಂಡತಿ)
|
ಮಹಾಸಾಮಂತ ಸೇವ್ಯರಸ

ಇವರಿಗೆ ಸಂಬಂಧಿಸಿದ ಶಾಸನಗಳ ಅಭಾವದಿಂದ ಹೆಚ್ಚಿನ ಮಾಹಿತಿ ಸಿಗುವುದಿಲ್ಲ. ಇವರಿಗೆ ಸಂಬಂಧಿಸಿದಂತೆ ಯಾವ ವಿಶೇಷ ರಾಜಕೀಯ ಘಟನೆಗಳು ನಡೆದಂತಿಲ್ಲ. ಚಾಲುಕ್ಯರ ಆರಂಭ ಕಾಲದಲ್ಲಿ ಪ್ರಾರಂಭವಾದ ಇವರ ಆಳಿಕೆ ಚಾಲುಕ್ಯರ ಉಚ್ಛ್ರಾಯ ಕಾಲದಲ್ಲಿ ಅಂದರೆ ೬ನೇ ವಿಕ್ರಮಾದಿತ್ಯನ ಕಾಲದ ಹೊತ್ತಿಗಾಗಲೇ ಇವರ ಆಳಿಕೆ ಮುಗಿದಂತೆ ತೋರುತ್ತದೆ. ಸೇವ್ಯನ ನಂತರ ಮನೆತನಕ್ಕೆ ವಾರಸುದಾರರು ಇಲ್ಲದೇ ಅದು ಕೊನೆಗೊಂಡಿರಬಹುದು.

ಭೈರನಮಟ್ಟಿ ಶಾಸನವು ಇದರಲ್ಲಿ ಕೆಲವರಿಗೆ ದೊಡ್ಡ ದೊಡ್ಡ ಬಿರುದಗಳನ್ನೇನೋ ಕೊಟ್ಟಿದೆ. ಕೇವಲ ಅವುಗಳ ಆಧಾರದಿಂದಲೇ ಇವರು ಪ್ರಭಾವಿ ಸಾಮಂತರಾಗಿದ್ದರೆಂದು ಹೇಳುವುದಾಗಲಿ, ಇವರ ಬಗ್ಗೆ ಊಹಾಮೂಹಾಗಳನ್ನು ಮಾಡುವುದಾಗಲಿ ಸಮಂಜಸವಾಗಲಾರದು.

## ೬ – ಪಳಿಯಂಡದ ಸಿಂದರು

ರಂಜೋಲ ಶಾಸನದಲ್ಲಿ ಹೇಳಿದಂತೆ, ನಿಡುದೋಳ ಸಿಂದನ ಇನ್ನೊಬ್ಬ ಮಗನಾದ ಸತ್ಯಸೇವ್ಯನು ಪಳಿಯಂಡ ಮಂಡಲದ ಸ್ಥಾಪಕನು. ಇದು ಐತಿಹ್ಯವಷ್ಟೇ. ಈ ಮನೆತನದ ಮೂರು ತಲೆಮಾರಿನ ಹೆಸರುಗಳು ತಿಡಗುಂದಿ ಎಂಬಲ್ಲಿ ದೊರೆತ ೬ನೇ ವಿಕ್ರಮಾದಿತ್ಯನ ತಾಮ್ರ ಶಾಸನದಲ್ಲಿ ದೊರೆಯುತ್ತವೆ.[೨೧೧] ಈ ಶಾಸನದ ಕಾಲ ಕ್ರಿ.ಶ. ೧೧೮೨. ಈ ಶಾಸನದಲ್ಲಿ ಹೇಳಿದಂತೆ ಸಿಂದ ವಂಶದಲ್ಲಿ ಘುಟ್ಟಿದ ಮುಂಜನೆಂಬುವನು ಪ್ರತ್ಯಂಡಕ ಚತುಸಹಸ್ರ ಅಂದರೆ ಪ್ರತ್ಯಂಡಕ–೪೦೦೦ ದೇಶದ ಅಧಿಪತಿಯಾಗಿದ್ದನು. ಇವನಿಗೆ ಸಿಂದ ವಂಶದ ಎಲ್ಲ ಬಿರುದುಗಳು ಅನ್ವಯಿಸಲ್ಪಟ್ಟಿವೆ. ಇವನು ೬ನೇ ವಿಕ್ರಮಾದಿತ್ಯನ ಮಾಂಡಲಿಕನಾಗಿ ಈ ಪ್ರದೇಶವನ್ನು ಆಳುತ್ತಿದ್ದನೆಂದು ಸ್ಪಷ್ಟವಾಗಿದೆ. ಶಾಸನದಲ್ಲಿ ಹೇಳುವಂತೆ ಈ ವಂಶದಲ್ಲಿ ಮೊದಲಿಗನು ಭೀಮ. ಅವನ ಹಿರಿಯ ಮಗ ಸಿಂದರಾಜನು. ಕಿರಿಯ ಮಗ ಅಥವಾ ಮಕ್ಕಳು ಯಾರಿದ್ದಾರೆಂದು ಶಾಸನ ಹೇಳುವುದಿಲ್ಲ. ಸಿಂದರಾಜನ ಮಗನೇ ಭೀಮ. ಮುಂಜನು ವಿಕ್ರಮಾದಿತ್ಯನ ಸಮಕಾಲೀನಾಗಿದ್ದರಿಂದ ಅವನ ತಂದೆ ಹಾಗೂ ಅಜ್ಜ ವಿಕ್ರಮಾದಿತ್ಯನ ಹಿಂದಿನವರಾದ ಅನುಕ್ರಮವಾಗಿ ೨ನೇ ಸೋಮೇಶ್ವರ ಹಾಗೂ ೧ನೇ ಸೋಮೇಶ್ವರರ ಮಾಂಡಲಿಕರಾಗಿದ್ದಿರಬಹುದು. ಇಲ್ಲಿ ಅವರವರ ಕಾಲ ನಿರ್ಧರಿಸುವುದು ಅನವಶ್ಯಕ.

ಇವರು ಚಾಲುಕ್ಯರ ನಿಷ್ಠಾವಂತ ಮಾಂಡಲಿಕರಾಗಿದ್ದರೆಂಬುದನ್ನು ಬಿಟ್ಟರೆ ಬೇರೆ ಯಾವ ಮಾಹಿತಿಯು ಶಾಸನದಲ್ಲಿ ಇಲ್ಲ. ಅವರು ಧರಿಸಿದ ಬಿರುದುಗಳು ವರ್ಣನಾತ್ಮಕವಾಗಿವೆಯೇ ಹೊರತು ಅವುಗಳಿಂದ ಯಾವ ಮಾಹಿತಿ ಸಿಗುವುದಿಲ್ಲ. ಭೀಮನಿಗೆ ರಣರಂಗದಲ್ಲಿ ನಿರ್ಭೀತನಾದವನು ಎಂದು ಬಿರುದು ಇದ್ದರೆ ಅವನ ಮಗ ಸಿಂದರಾಜನು ರಣರಂಗದಲ್ಲಿ ವಿಜಯವನ್ನು ಸಂಪಾದಿಸಿದವ ಎಂದು ವರ್ಣಿಸಲ್ಪಟ್ಟಿದ್ದಾನೆ. ಮುಂಜನಿಗೆ *ಭೋಗಾವತಿಪುರಪರಮೇಶ್ವರ, ಫಣೀಂದ್ರವಂಶೋದ್ಭವ, ನಾಗಕುಲತಿಲಕ, ಸಿಂದಕುಲತಿಲಕ–ಮಾರ್ತಂಡ* ಎಂಬ ಸಾಂಪ್ರದಾಯಿಕ ಬಿರುದುಗಳಿವೆ. *"ಗುಣಕವಡವಾನಲ"* ಅಂದರೆ ಗುಣಕನೆಂಬ ವೈರಿಗೆ ಅಗ್ನಿಪ್ರಾಯವಾದವನು, ಆದರೆ ಈ ಗುಣಕನು ಯಾರು ಎಂಬುದು ತಿಳಿಯದು. ಈ ಮನೆತನ ಮೂರೇ ತಲೆಮಾರುಗಳಿಗೆ ಮುಗಿದು ಹೋಯಿತೆಂದು ಹೇಳಲಾಗುವುದಿಲ್ಲ. ಇವರಿಗೆ ಸಂಬಂಧಿಸಿದ ಬೇರೆ ಶಾಸನಗಳು ದೊರೆತಿಲ್ಲವೆಂದಷ್ಟೇ ಹೇಳಬೇಕು.

ಶಾಸನದ ಸ್ವರೂಪವು ಭಿನ್ನವಾಗಿದೆ. ಸಾಮಾನ್ಯವಾಗಿ ಕೊಡುವಂತಹ ದಾನದತ್ತಿಗಳ ವಿಷಯಗಳು ಇದರಲ್ಲಿ ಇಲ್ಲ. ಇದು ಒಂದು ಕ್ರಯದಾನ ಪತ್ರ. ಮುಂಜನು ವಾಯ್ವಾಡ ಮತ್ತು ಹನ್ನೆರಡು ಗ್ರಾಮಗಳನ್ನು ಖರೀದಿ ಮಾಡಿ, ಕನ್ನಸಾಮಂತ ಎಂಬವನಿಗೆ ದಾನ ಮಾಡಿದ ವಿಷಯ ಇದರಲ್ಲಿದೆ. ಇಲ್ಲಿ ಈ ಗ್ರಾಮಗಳ ನಡುವಿನ ಟಿಕ್ಕಲಿಕಾ ಗ್ರಾಮ ಬಿಟ್ಟು ಎಂದು ಹೇಳಿದೆ. ಇದರ ಕಾರಣ ಮಾತ್ರ ಗೊತ್ತಾಗುವುದಿಲ್ಲ. ಇಲ್ಲಿ ಹೆಸರಿಸಲಾದ ವಾಯ್ವಾಡ ಮತ್ತು ಟಿಕ್ಕಲಿಕಾ ಗ್ರಾಮಗಳನ್ನು ವಿಜಾಪುರ ಜಿಲ್ಲೆಯ ಇಂಡಿ ತಾಲೂಕಿನ ವಾದೆ ಮತ್ತು ಟಾಕಲಿ ಗ್ರಾಮಗಳೆಂದು ಗುರುತಿಸಬಹುದು. ಕನ್ನಸಾಮಂತನು ಸ್ಥಾನಮಾನದಲ್ಲಿ ಮುಂಜನ ಸರಿಸಮಾನನಾಗಿದ್ದಿರಬೇಕು ಎಂದು ಕಾಣುತ್ತದೆ. ತ್ರಿಭುವನಮಲ್ಲಪಾದಾರಾಧಕ ಎಂದು ಕರೆಯಲ್ಪಟ್ಟಿದ್ದಾನೆ. ಲಾಟ ದೇಶದ ಸ್ತ್ರೀಯನ್ನು ಮದುವೆಯಾದಂತೆ ಕಾಣುತ್ತದೆ. ಇವನ ಇನ್ನೊಂದು ಬಿರುದು ಇವನನ್ನು *ರೇವಣದೇವನ ಅಂಕಕಾರ*, ಅಂದರೆ ರೇವಣದೇವನ ಬಂಟ ಎಂದು ಕರೆಯುತ್ತದೆ. ಈ ರೇವಣದೇವ ಯಾರು ಎಂದು ಗೊತ್ತಾಗುವುದಿಲ್ಲ.

ಈ ಮೇಲಿನ ಸಮೀಕ್ಷೆಯನ್ನು ಈ ರೀತಿ ಸಂಗ್ರಹಿಸಿ ಹೇಳಬಹುದು. ಫಣಿಕುಲ ಅಥವಾ ನಾಗವಂಶದಿಂದ ಬಂದವರೆಂದು ಹೇಳುವ ಸಿಂದ ವಂಶ ಕ್ರಿಶ. ೧೦-೧೧ನೇ ಶತಮಾನದಿಂದ ಪ್ರವರ್ಧಮಾನಕ್ಕೆ ಬಂದಿತು. ಅಂದಿನ ಸಾಂಪ್ರದಾಯದಂತೆ ರಾಜವಂಶಗಳನ್ನು ಪೌರಾಣಿಕ ವ್ಯಕ್ತಿಗಳೊಡನೆ ಜೋಡಿಸಿ ವೈಭವೀಕರಿಸುವ ಸಾಂಪ್ರದಾಯದಂತೆ ಈ ಸಿಂದರ ಸುತ್ತಲೂ ನಿಡುದೋಳ ಸಿಂದನ ಕಥೆ ಹೆಣೆಯಲ್ಪಟ್ಟಿದೆ. ಸಾಕ್ಷತ್ ಶಿವಪಾರ್ವತಿಯರಿಂದಲೇ ಉಗಮವಾದ ವಂಶದ ಹಿರಿಮೆಯನ್ನು ಬೇರೆ ಹೇಳಬೇಕಾಗಿಲ್ಲ. ಇದರ ಜೊತೆಗೆ ಪವಾಡವು ನಿರ್ಮಿತವಾಗುತ್ತವೆ. ಸಿಂದ ವಂಶ ಇದಕ್ಕೆ ಹೊರತಾಗಿಲ್ಲ. ಐತಿಹಾಸಿಕವಾಗಿ ಹೇಳಬೇಕೆಂದರೆ, ಕರಹಾಟಪುರ ಅಥವಾ ಇಂದಿನ ಮಹಾರಾಷ್ಟ್ರದ ಕರ್ಹಾಡ ಪ್ರದೇಶದ ಮೂಲದವರಾದ ಇವರು ದೊರೆತ ಅವಕಾಶಗಳಿಗೆ ಅನುಗುಣವಾಗಿ ಚಾಲುಕ್ಯರ ಮಾಂಡಲಿಕರಾಗಿ ಬೇರೆ ಬೇರೆ ಪ್ರದೇಶಗಳಲ್ಲಿ ನೆಲೆ ನಿಂತು ತಮ್ಮ ತಮ್ಮ ಯೋಗ್ಯತೆ ಪ್ರಕಾರ ರಾಜಕೀಯ ಪ್ರಭಾವವನ್ನು, ಅಧಿಕಾರ ವ್ಯಾಪ್ತಿಯನ್ನು ಗಳಿಸಿಕೊಂಡರು. ಇದರಲ್ಲಿ ಆಶ್ಚರ್ಯವೆನಿಲ್ಲ ಏಕೆಂದರೆ, ಇಂದು ಕರ್ನಾಟಕ, ಮಹಾರಾಷ್ಟ್ರ ಮತ್ತು ಆಂಧ್ರ ಇತ್ಯಾದಿಯಾಗಿ ಬೇರೆ ಬೇರೆಯಾಗಿ ಗುರುತಿಸಿಕೊಂಡರೂ, ಮಹಾರಾಷ್ಟ್ರದಿಂದ ವಲಸೆ ಬಂದವರು, ಆಂಧ್ರ ಮೂಲದವರು ಇತ್ಯಾದಿ ಹೇಳಲಾಗುತ್ತಿದೆ. ಆದರೆ ಇತಿಹಾಸ ಕಾಲದಲ್ಲಿ ಈ ಪ್ರಮೇಯ ಇರಲಿಲ್ಲ. ಬಾದಾಮಿ ಚಾಲುಕ್ಯ ಮನೆತನದ ೨ನೇ ಪುಲಕೇಶಿಯು ನರ್ಮದೆಯಿಂದ ಕಾವೇರಿವರೆಗಿನ ಪ್ರದೇಶಗಳನ್ನು ಒಳಗೊಂಡ ಅಖಂಡ ವಿಶಾಲ ಸಾಮ್ರಾಜ್ಯ ಕಟ್ಟಿದ್ದಾಗಲೇ ಈ

ಎಲ್ಲ ಪ್ರದೇಶವು ಒಂದೇ ಆಳಿಕೆಗೆ ಸೇರಿದ ಪ್ರದೇಶವೆಂದೆನಿಸಿತು. ಸಿಂದರು ಕರಹಾಟದಿಂದ ಬಂದವರೆಂದರೆ ಅವರು ವಲಸೆ ಬಂದವರೆಂದಲ್ಲ. ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಪದ ನಿಮಿತ್ತವಾಗಿ ತೆರಳಿದ್ದಾರೆ ಅಷ್ಟೇ. ನಿಡುದೋಳ ಸಿಂದನ ನಾಲ್ವರ ಮಕ್ಕಳು ನಾಲ್ಕು ಬೇರೆ ಬೇರೆ ಪ್ರದೇಶಗಳಲ್ಲಿ ರಾಜ್ಯ ಕಟ್ಟಿದರು ಎಂಬ ಕಥೆಯಲ್ಲಿ ಈ ತತ್ವದ ಛಾಯೆಯನ್ನು ನಾವು ಕಾಣುತ್ತೇವೆ. ಬೇರೆ ಬೇರೆ ಮನೆತನಗಳ ಸಿಂದ ಸಾಮಂತರು ತಾವು ಎದುರಿದ ಪರಿಸ್ಥಿತಿ, ದೊರೆತ ಅವಕಾಶಗಳು ಇವುಗಳ ಮೇಲಿಂದ ಅಂದಿನ ರಾಜಕೀಯ ಪರಿಸ್ಥಿತಿಯಲ್ಲಿ ತಮ್ಮ ತಮ್ಮ ಪಾತ್ರ ನಿರ್ವಹಿಸಿದರು. ಇಲ್ಲಿ ವಿವರಿಸಿದ ಆರು ಮನೆತನಗಳಲ್ಲಿ ಬೆಳಗುತ್ತಿ ಮತ್ತು ಯಲಬುರ್ಗಿ ಸಿಂದರು ಹೆಚ್ಚು ಪ್ರಭಾವಶಾಲಿಗಳು ಎಂದು ಎನಿಸಿದರೆ ಅದಕ್ಕೆ ಇದೇ ಕಾರಣ.

ಇದುವರೆಗೆ ದೊರೆತ ಸಾಧನ ಸಾಮಗ್ರಿಗಳ ಅನುಗುಣವಾಗಿ ಇಲ್ಲಿ ಕೊಡಲಾದ ಚಿತ್ರದ ಸ್ಪಷ್ಟತೆಯಲ್ಲಿ ಹೆಚ್ಚು ಕಡಿಮೆ ಎನಿಸುವುದು ಸಹಜ. ಒಟ್ಟಿನಲ್ಲಿ ಈ ಮನೆತನಗಳು ರಾಜ್ಯದ ವಿವಿಧ ಭಾಗಗಳಲ್ಲಿ ಹಬ್ಬಿ ಅಲ್ಲಲ್ಲಿಯ ರಾಜಕೀಯ, ಧಾರ್ಮಿಕ, ಸಾಂಸ್ಕೃತಿಕ ಬೆಳವಣಿಗೆಗಳಿಗೆ ಕಾರಣರಾಗಿದ್ದಾರೆ. ಇತರ ವಿಷಯಗಳನ್ನು ಮುಂದಿನ ಅಧ್ಯಾಯಗಳಲ್ಲಿ ವಿವರಿಸಲಾಗುವುದು.

## ಉಲ್ಲೇಖಗಳು ಮತ್ತು ಟಿಪ್ಪಣಿಗಳು

1 ಎಪಿಗ್ರಾಫಿಯಾ ಕರ್ನಾಟಿಕಾ, (ಎ.ಕ) ಸಂ. ೧೧, ಎಚ್.ಕೆ.(ಹೊಳಲ್ಕರೆ) ೨೩

೨ ದಿನಕರ ದೇಸಾಯಿ, ಮಹಾಮಂಡಳೇಶ್ವರಾಸ್ ಅಂಡರ್ ದಿ ಚಾಲುಕ್ಯಸ ಆಫ್ ಕಲ್ಯಾಣ, ಪು. ೯

೩ ಬಿ.ಆರ್.ಗೋಪಾಲ, ಮೈನರ್ ಡಯಾನಾಸ್ಟೀಜ ಆಫ್ ಸೌಥ್ ಇಂಡಿಯಾ, ಕರ್ನಾಟಕ, ಸಂ.೧, ಪು. ೯೫

೪ ಎ.ಕ. ಸಂ ೧೧, ಡಿ.ಜಿ. (ದಾವಣಗೆರೆ) ೪೩

೫ ಬಿ.ಆರ್. ಗೋಪಾಲ, ಪೂರ್ವೋಲ್ಲಿಖಿತ, ಸಂ. ೧, ಪು. ೯೯

೬ ಕರ್ನಾಟಕ ಇನ್ಸಸ್ಕ್ರಿಪ್ಷನ್ಸ (ಕ.ಇ), ಸಂ. ೬, ನಂ. ೪, ಪು. ೫

೭ ಚನ್ನಬಸವಯ್ಯ ಹಿರೇಮಠ, ಕುರುಗೋಡಿನ ಸಿಂದರು, ಒಂದು ಅಧ್ಯಯನ, ಪು. ೪

೮ ಸೌಥ ಇಂಡಿಯನ್ ಇನಸ್ಕ್ರೀಪನ್ಸ್ (ಎಸ್.ಐ.ಐ), ಸಂ. ೧೭, ಶಾ.ಸಂ. ೪೯ಬಿ

೯ ದಿನಕರ ದೇಸಾಯಿ ಪೂರ್ವೋಲ್ಲಿಖಿತ, ಪು.೧೧

೧೦ ಎ.ಕ, ಸಂ.೧೧, ಡಿ.ಜಿ. ೪೩

೧೧ ಬಿ.ಆರ್. ಗೋಪಾಲ, ಪೂರ್ವೋಲ್ಲಿಖಿತ, ಸಂ. ೧, ಪು. ೯೫

೧೨ ಎಸ್.ಐ.ಐ, ಸಂ. ೧೧, ಭಾಗ ೧, ನಂ. ೪೭

೧೩ ಅದೇ, ಸಂ. ೧೧, ಭಾಗ ೧, ನಂ. ೬೫

೧೪ ಅದೇ, ಸಂ ೧೧, ಭಾಗ ೧, ನಂ. ೬೫

೧೫ ದಿನಕರ ದೇಸಾಯಿ, ಪೂರ್ವೋಲ್ಲಿಖಿತ, ಪು. ೧೪

೧೬ ಎ.ಕ, ಸಂ. ೭, ಎಸ್.ಕೆ. (ಶಿಕಾರಿಪುರ) ೬೯

೧೭ ಬಿ.ಆರ್. ಗೋಪಾಲ, ಪೂರ್ವೋಲ್ಲಿಖಿತ, ಸಂ. ೧, ಪು. ೯೬

೧೮ ಎ.ಕ., ಸಂ. ೧೧, ಡಿ.ಜಿ. ೪೩

೧೯ ಅದೇ, ಸಂ. ೭, ಎಚ್.ಎಲ್. (ಹೊನ್ನಾಳಿ) ೫೦

೨೦ ಅದೇ ಸಂ ೭, ಎಚ್.ಎಲ್. ೪೫

೨೧ ಕ.ಇ. ಸಂ ೪, ಶಾ.ಸಂ. ೩೮

೨೨ ಬಿ.ಆರ್. ಗೋಪಾಲ, ಪೂರ್ವೋಲ್ಲಿಖಿತ, ಸಂ. ೧ ಪು. ೯೮

೨೩ ದಿನಕರ ದೇಸಾಯಿ, ಪೂರ್ವೋಲ್ಲಿಖಿತ, ಪು. ೨೬

೨೪ ಎ.ಕ, ಸಂ ೧೧, ಡಿ.ಜಿ. ೪೩

೨೫ ದಿನಕರ ದೇಸಾಯಿ, ಪೂರ್ವೋಲ್ಲಿಖಿತ, ಪು ೧೮, ೧೯

೨೬ ಎ.ಕ. ಸಂ ೧೧, ಡಿ.ಜಿ. ೪೩

೨೭ ಅದೇ, ಸಂ ೭, ಎಚ್.ಎಲ್ ೫೦

೨೮ ಅದೇ, ಸಂ ೭, ಎಚ್.ಎಲ್ ೨೦

೨೯ ಬಿ.ಆರ್. ಗೋಪಾಲ, ಪೂರ್ವೋಲ್ಲಿಖಿತ, ಸಂ. ೧, ಪು. ೯೭

೩೦ ಬಿ.ಆರ್. ಗೋಪಾಲ, ಅದೇ, ಸಂ. ೧, ಪು. ೯೭

೩೧ ಸಮರಿಜ್ ಆಫ್ ಇನ್ಸಸ್ಕ್ರಿಪ್ಷನ್ಸ್, ಇಂಟ್ರಡ್ಕಶನ್, ಪು.೬

೩೨ ಎ.ಕ, ಸಂ ೧೧, ಡಿ.ಜಿ. ೪೩

೩೩ ಅದೇ, ಸಂ ೭, ಎಸ್.ಕೆ. ೩೧೬

೩೪ ಕ.ಇ, ಸಂ. ೪, ಶಾ. ಸಂ. ೧೪

೩೫ ಅದೇ, ಸಂ. ೪ ಶಾ.ಸಂ. ೩೯

೩೬ ಎ.ಕ, ಸಂ. ೭, ಎಚ್.ಎಲ್. ೪೫

೩೭ ಕ.ಇ. ಸಂ. ೬, ಶಾ.ಸಂ. ೨೫

೩೮ ಎ.ಕ, ಸಂ. ೭, ಎಚ್.ಎಲ್. ೪೫

೩೯ ಅದೇ, ಸಂ. ೧೧, ಡಿ.ಜಿ. ೪೩

೪೦ ಅದೇ, ಸಂ. ೭, ಎಚ್.ಎಲ್. ೪೨

೪೧ ಕ.ಇ, ಸಂ. ೪, ಶಾ.ಸಂ. ೧೩

೪೨ ಈ ಶಾಸನದಲ್ಲಿ ಈಶ್ವರದೇವನು ಮಾಚರಸನ ಮಗನೆಂದು ಕರೆಯಲ್ಪಟ್ಟಿದ್ದಾನೆ.

೪೩ ಎ.ಕ, ಸಂ ೭, ಎಚ್.ಎಲ್. ೪೫

೪೪ ದಿನಕರ ದೇಸಾಯಿ, ಪೂರ್ವೋಲ್ಲಿಖಿತ, ಪು. ೩೧

೪೫ ಎ.ಕ, ಸಂ. ೭, ಎಚ್.ಎಲ್ ೯೮

೪೬ ಅದೇ, ಸಂ. ೭, ಎಚ್.ಎಲ್. ೯೮

೪೭ ಅದೇ, ಸಂ. ೭, ಎಚ್.ಎಲ್. ೪೫

೪೮ ಬಿ.ಆರ್. ಗೋಪಾಲ, ಪೂರ್ವೋಲ್ಲಿಖಿತ, ಸಂ.೧, ಪು ೧೦೧, ಎ.ಆರ್.ಐ.ಇ., ೧೯೬೦-೬೧ ನಂ. ೪೫೪

೪೯ ಎ.ಕ, ಸಂ. ೭, ಎಚ್.ಎಲ್. ೫೦

೫೦ ಅದೇ, ಸಂ. ೭, ಎಚ್.ಎಲ್. ೪೬

೫೧ ಅದೇ, ಸಂ. ೭, ಎಚ್.ಎಲ್. ೫೧

೫೨ ಬಿ.ಆರ್. ಗೋಪಾಲ, ಪೂರ್ವೋಲ್ಲಿಖಿತ, ಸಂ.-೧, ಪು. ೧೦೨

೫೩ ಎ.ಕ, ಸಂ. ೭, ಎಚ್.ಎಲ್. ೩೭

೫೪ ಅದೇ, ಸಂ. ೭, ಎಚ್.ಎಲ್. ೨೮

೫೫ ದಿನಕರ ದೇಸಾಯಿ, ಪೂರ್ವೋಲ್ಲಿಖಿತ, ಪು. ೪೨

೫೬ ಎ.ಕ, ಸಂ. ೭ , ಎಚ್.ಎಲ್. ೩೫

೫೭ ಬಿ.ಆರ್. ಗೋಪಾಲ, ದಿ ಚಾಲುಕ್ಯಾಸ ಆಫ್ ಕಲ್ಯಾಣ ಆ್ಯಂಡ್ ಕಲಚುರಿಸ್, ಕ.ವಿ.ವಿ., ಧಾರವಾಡ ಪು. ೩೭೯-೩೮೦

೫೮ ಎ.ಕ. ಸಂ. ೭ (ಹಳೆಯ), ಎಚ್.ಎಲ್. ೪೬

೫೯ ಎಸ್.ಎಚ್.ರಿತ್ತಿ, ಸೇವುಣಸ್, ಪು. ೭೪

೬೦ ಎಸ್.ಐ.ಐ. ೧೫, ನಂ. ೫೮

೬೧ ಬಿ.ಆರ್. ಗೋಪಾಲ, ಪೂರ್ವೋಲ್ಲಿಖಿತ, ಪು. ೭೫

೬೨ ಬಿ.ಆರ್. ಗೋಪಾಲ, ಅದೇ, ಪು. ೭೫

೬೩ ಎ.ಕ. ಸಂ. ೭, ಎಚ್.ಎಲ್. ೫೧

೬೪ ದಿನಕರ ದೇಸಾಯಿ, ಪೂರ್ವೋಲ್ಲಿಖಿತ, ಪು. ೪೧

೬೫ ದಿನಕರ ದೇಸಾಯಿ, ಅದೇ, ಪು. ೪೨

೬೬ ಎ.ಕ. ಸಂ. ೭, ಎಚ್.ಎಲ್. ೭

೬೭ ಬಿ.ಆರ್. ಗೋಪಾಲ, ಪೂರ್ವೋಲ್ಲಿಖಿತ, ಸಂ. ೧, ಪು. ೧೦೩

೬೮ ಎ.ಕ. ಸಂ. ೭, ಎಚ್.ಎಲ್. ೨೫

೬೯ ಅದೇ, ಸಂ. ೭, ಎಚ್.ಎಲ್. ೨೫

೭೦ ಅದೇ, ಸಂ. ೭, ಎಚ್.ಎಲ್. ೨೦

೭೧ ಅದೇ, ಸಂ. ೭, ಎಚ್.ಎಲ್. ೪೪

೭೨ ಅದೇ, ಸಂ. ೭, ಎಚ್.ಎಲ್. ೪೮

೭೩ ಎ.ಆರ್.ಐ.ಇ., ೧೯೫೮-೫೯, ಅಪೆಂಡಿಕ್ಸ್, ಬಿ, ನಂ. ೫೭೨

೭೪ ಅದೇ, ೧೯೫೮-೫೯, ಅಪೆಂಡಿಕ್ಸ್, ಬಿ. ನಂ. ೬೧೧

೭೫ ಕ.ಇ, ಸಂ. ೬, ಶಾ.ಸಂ.೪೦

೭೬ ಕ.ಇ. ಸಂ. ೫, ಪು. ೨೬೩

೭೭ ಅಬ್ಬಲೂರು ಹಾನಗಲ್ ಕದಂಬರ ವಶದಲ್ಲಿದ್ದಿತೆಂದೂ, ಈಶ್ವರದೇವನು ಸಿಂಘಣನ ಪರವಾಗಿ ಕದಂಬರ ಮೇಲೆ ಈ ದಾಳಿಯನ್ನು ನಡೆಸಿದನೆಂದೂ ದೇಸಾಯಿ ದಿನಕರ ಅಭಿಪ್ರಾಯಪಡುತ್ತಾರೆ. (ಮಹಾಮಂಡಳೇಶ್ವರಾಸ್ ಅಂಡರ್ ದಿ ಚಾಲುಕ್ಯಸ ಆಫ್ ಕಲ್ಯಾಣ, ಪು. ೨೩) ಆದರೆ ಇದು ಅಬ್ಬಲೂರು ಬನವಾಸಿ ಪ್ರಾಂತದಲ್ಲಿದ್ದು, ಅದು ಸಿಂಘಣನ ಆಳಿಕೆಗೆ ಸೇರಿದ್ದಿತು. ಆದ್ದರಿಂದ ಈಶ್ವರದೇವನ ಈ ದಾಳಿಯು ಸಿಂಘಣನ ವಿರುದ್ಧವೇ ಆಗಿದ್ದಿತೆಂದು ಊಹಿಸಲು ಸಾಧ್ಯವಿದೆ

೭೮ ಪೂರ್ವೋಲ್ಲಿಖಿತ, ೧೯೫೮-೫೯, ಅಪೆಂಡಿಕ್ಸ್, ಬಿ, ನಂ. ೨೭೪

೭೯ ಅದೇ, ೧೯೫೭-೫೮, ಅಪೆಂಡಿಕ್ಸ್, ಬಿ, ನಂ. ೨೪೮

೮೦ ಎಸ್.ಎಚ್. ರಿತ್ತಿ, ಪೂರ್ವೋಲ್ಲಿಖಿತ, ಪು. ೧೨೩

೮೧ ಎ.ಕ. ಸಂ. ೭, ಎಚ್.ಎಲ್. ೨೦

೮೨ ಅದೇ, ಸಂ. ೭, ಎಚ್.ಎಲ್. ೨೦

೮೩ ಎಸ್.ಎಚ್. ರಿತ್ತಿ, ಪೂರ್ವೋಲ್ಲಿಖಿತ, ಪು. ೧೪೩ರಲ್ಲಿ ಅಡಿ ಟಿಪ್ಪಣಿ ೫೪

೮೪ ಎ.ಕ. ಸಂ. ೭, ಎಚ್.ಎಲ್. ೨೦

೮೫ ದಿನಕರ ದೇಸಾಯಿ, ಪೂರ್ವೋಲ್ಲಿಖಿತ, ಪು. ೫೭

೮೬ ದಿನಕರ ದೇಸಾಯಿ, ಅದೇ, ಪು. ೫೮

೮೭ ಎ.ಕ. ಸಂ. ೭, ಎಚ್.ಎಲ್. ೪೯

೮೮ ಬಿ.ಆರ್. ಗೋಪಾಲ, ಪೂರ್ವೋಲ್ಲಿಖಿತ, ಸಂ. ೧, ಪು. ೧೦೬

೮೯ ನರೇಗಲ್ಲಿನ ಒಂದು ಶಾಸನವು ಅವರನ್ನು "ಚಾಲುಕ್ಯ ಕುಲಕ್ಕೆ ಭಕ್ತರೆನಿಸಿದ್ದರು" ಎಂದು ಹೇಳುತ್ತದೆ. (ಜೆ.ಬಿ.ಬಿ.ಆರ್.ಎ.ಎಸ್. ೯, ಪು. ೨೨೫, ಸಾಲು ೧೧)

೯೦ ಎಪಿಗ್ರಾಫಿಯಾ ಇಂಡಿಕಾ (ಎ.ಇ), ಸಂ. ೨೦, ಪು. ೧೦೯

೯೧ ಅದೇ, ಸಂ. ೩, ಶಾ.ಸಂ. ೩೩

೯೨ ದಿನಕರ ದೇಸಾಯಿ, ಪೂರ್ವೋಲ್ಲಿಖಿತ, ಪು. ೬೯

೯೩ ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟಗಳು (ಕ.ವಿ.ವಿ. ಶಾ.ಸಂ.), ಶಾ.ಸಂ. ೧, ಶಾ. ನಂ. ೫೮

೯೪ ದಿನಕರ ದೇಸಾಯಿ, ಪೂರ್ವೋಲ್ಲಿಖಿತ, ಸಂ. ೧, ಪು. ೧೦೯

೯೫ ಈ ಸಿಂದರು ಬಾಗಡಗೇಯ ಸಿಂದರಿಗೆ ಸಂಬಂಧಿಸಿದ್ದರೂ ಇರಬಹುದು ಎಂದು ಬಹಳ ಹಿಂದೆಯೇ ಫ್ಲೀಟರವರೂ ಸಹ ಸೂಚಿಸಿದ್ದಾರೆ. (ಬಾಂಬೆ ಗೆಝಿಟಿಯರ್-ಸಂ.೧, ಭಾಗ ೨, ಪು. ೫೭೪)

೯೬ ಪೂರ್ವೋಲ್ಲಿಖಿತ, ಸಂ. ೨೦, ಪು. ೧೧೦

೯೭ ಅದೇ, ಸಂ. ೨೦, ಶಾ.ಸಂ. ೧೨, ಪು. ೧೧೧

೯೮ ಎಸ್.ಐ.ಐ, ಸಂ. ೧೧, ಭಾಗ ೨, ಶಾ.ಸಂ. ೧೨೯.

೯೯ ಬಿ.ಆರ್. ಗೋಪಾಲ, ಪೂರ್ವೋಲ್ಲಿಖಿತ, ಸಂ. ೧, ಪು. ೧೧೦, ೧೧೧

೧೦೦ ಬಿ.ಆರ್. ಗೋಪಾಲ, ಅದೇ, ಸಂ. ೧, ಪು. ೧೧೧

೧೦೧ ಎಸ್.ಐ.ಐ, ಸಂ. ೧೧, ಭಾಗ ೨, ಶಾ.ಸಂ. ೧೧೭

೧೦೨ ಬಿ.ಆರ್. ಗೋಪಾಲ, ಪೂರ್ವೋಲ್ಲಿಖಿತ, ಸಂ. ೧, ಪು ೧೧೧

೧೦೩ ಎ.ಇ, ಸಂ. ೨೦, ಶಾ.ಸಂ. ೧೨, ಪು. ೧೧೧

೧೦೪ ಸೌಥ್ ಇಂಡಿಯನ್ ಇನಸ್ಕ್ರಿಪ್ಷನ್ಸ್ ಸಂ. ೧೧, ಭಾಗ ೨, ಶಾ.ಸಂ. ೧೨೯, ಸಾಲು, ೪, ೫.

೧೦೫ ಜೆ.ಬಿ.ಬಿ.ಆರ್.ಎ.ಎಸ್, ಸಂ. ೧೧, ಶಾ.ಸಂ. ೫

೧೦೬ ಎಸ್.ಐ.ಐ, ಸಂ. ೧೧, ಭಾಗ ೨, ಶಾ.ಸಂ. ೧೫೫

೧೦೭ ಎ.ಇ, ಸಂ. ೨೦, ಪು. ೧೧೨

೧೦೮ ಜೆ.ಬಿ.ಬಿ.ಆರ್.ಎ.ಎಸ್, ಸಂ. ೧೧, ಶಾ.ಸಂ. ೧

೧೦೯ ಎಸ್.ಐ.ಐ, ಸಂ. ೧೫, ಶಾ.ಸಂ. ೨೮

೧೧೦ ಅದೇ, ಸಂ. ೧೧, ಶಾ.ಸಂ. ೪೭

೧೧೧ ಅದೇ, ಸಂ. ೧೫, ಶಾ.ಸಂ. ೨೩೬

೧೧೨ ಜೆ.ಬಿ.ಬಿ.ಆರ್.ಎ.ಎಸ್, ಸಂ. ೧೧, ಶಾ.ಸಂ. ೫

೧೧೩ ಎಸ್.ಐ.ಐ, ಸಂ. ೧೫, ಶಾ.ಸಂ. ೨೩೮

೧೧೪ ಅದೇ, ಸಂ. ೧೫, ಶಾ.ಸಂ. ೧೦೭

೧೧೫ ಬಿ.ಆರ್.ಗೋಪಾಲ, ಪೂರ್ವೋಲ್ಲಿಖಿತ, ಸಂ ೧, ಪು. ೧೧೫

೧೧೬ ಎಸ್.ಐ.ಐ, ಸಂ. ೧೫, ಶಾ.ಸಂ. ೧೧೭

೧೧೭ ಬಿ.ಆರ್. ಗೋಪಾಲ, ಪೂರ್ವೋಲ್ಲಿಖಿತ, ಸಂ ೧, ಪು. ೧೧೫

೧೧೮ ಜೆ.ಬಿ.ಬಿ.ಆರ್.ಎ.ಎಸ್, ಸಂ. ೧೧, ಶಾ.ಸಂ. ೫

೧೧೯ ಎ.ಇ, ಸಂ. ೧೯, ಶಾ.ಸಂ. ೩೮

೧೨೦ ಎಸ್.ಐ.ಐ, ಸಂ.೧೫, ಶಾ.ಸಂ.೨೪೦

೧೨೧ ಅದೇ, ಸಂ ೧೫, ಶಾ.ಸಂ. ೨೪೧

೧೨೨ ಎ.ಇ, ಸಂ. ೧೯, ಶಾ.ಸಂ. ೩೮

೧೨೩ ಎಸ್.ಐ.ಐ, ಸಂ.೧೫, ಶಾ.ಸಂ. ೨೪೨

೧೨೪ ಅದೇ, ಸಂ. ೧೫, ಶಾ.ಸಂ. ೨೫೪

೧೨೫ ಅದೇ, ಸಂ. ೧೫, ಶಾ.ಸಂ. ೬೮

೧೨೬ ಅದೇ, ಸಂ. ೧೫, ಶಾ.ಸಂ. ೧೬೫

೧೨೭ ಬಿ.ಆರ್. ಗೋಪಾಲ, ಪೂರ್ವೋಲ್ಲಿಖಿತ, ಸಂ. ೧, ಪು. ೧೧೭

೧೨೮ ಎ.ಇ, ಸಂ. ೨೦, ಪು. ೧೧೪

೧೨೯ ಅದೇ, ಸಂ. ೨೦, ಶಾ.ಸಂ. ೬ ಸಾಲು ೨೨

೧೩೦ ಜೆ.ಬಿ.ಬಿ.ಆರ್.ಎ.ಎಸ್, ಸಂ ೧೧, ಶಾ.ಸಂ. ೧

೧೩೧ ಅದೇ, ಸಂ ೧೧, ಶಾ.ಸಂ.೧

೧೩೨ ಬಿ.ಆರ್. ಗೋಪಾಲ, ಪೂರ್ವೋಲ್ಲಿಖಿತ, ಪು. ೧೬೬

೧೩೩ ಜೆ.ಬಿ.ಬಿ.ಆರ್.ಎ.ಎಸ್, ಸಂ ೧೧, ಶಾ.ಸಂ ೫

೧೩೪ ಬಿ.ಆರ್. ಗೋಪಾಲ, ಪೂರ್ವೋಲ್ಲಿಖಿತ, ಸಂ ೧, ಪು. ೮೧

೧೩೫ ಬಿ.ಆರ್. ಗೋಪಾಲ, ದಿ ಚಾಲುಕ್ಯಸ ಆಫ್ ಕಲ್ಯಾಣ ಆ್ಯಂಡ ಕಲಚುರಿಸ್, ಪು.ಸಂ. ೨೬೮

೧೩೬ ಬಿ.ಆರ್. ಗೋಪಾಲ, ಅದೇ, ಪು.ಸಂ. ೨೬೯

೧೩೭ ಜೆ.ಬಿ.ಬಿ.ಆರ್.ಎ.ಎಸ್, ಸಂ. ೧೧, ಶಾ.ಸಂ. ೧

೧೩೮ ಫ್ಲೀಟ್ ಜೆ.ಎಫ್. ಡಯಾನಾಸ್ಟೀಜ್ ಆಫ್ ಕೆನರಿಸ್ ಡಿಸ್ಟ್ರಿಕ್ಟ್ಸ್ (ಪರಿಷ್ಕೃತ–ಬಾಂಬೆ ಗೆಝಿಟಿಯರ್ ಸಂ.೧, ಭಾಗ ೨), ಪು. ೫೭೪

೧೩೯ ಜೆ.ಬಿ.ಬಿ.ಆರ್.ಎ.ಎಸ್, ಸಂ. ೧೧, ಶಾ.ಸಂ. ೨

೧೪೦ ಕೆ.ವಿ. ರಮೇಶ ಎ ಹಿಸ್ಟರಿ ಆಫ್ ಸೌಥ ಕೆನರಾ, ಪು. ೧೧೫

೧೪೧ ಜೆ.ಬಿ.ಬಿ.ಆರ್.ಎ.ಎಸ್, ಸಂ. ೧೧, ಶಾ.ಸಂ. ೧

೧೪೨ ಎ.ಇ., ಸಂ. ೨೦, ಶಾ. ಸಂ. ೧೨

೧೪೩ ಅದೇ, ಸಂ. ೨೦, ಶಾ.ಸಂ.೧೨

೧೪೪ ದಿನಕರ ದೇಸಾಯಿ, ಪೂರ್ವೋಲ್ಲಿಖಿತ, ಪು. ೧೦೫, ೧೦೬

೧೪೫ ಪರಿಷ್ಕೃತ-ಬಾಂಬೆ ಗೆಝಿಟಿಯರ್ ಸಂ.೧, ಭಾಗ ೨, ಸಂ. ೧, ಭಾಗ ೨, ಪು. ೫೦೪

೧೪೬ ಎಸ್.ಐ.ಐ. ಸಂ. ೯, ಭಾಗ ೧, ಶಾ.ಸಂ. ೧೦೧

೧೪೭ ಎ.ಕ, ಸಂ. ೭, ಡಿ.ಜಿ. ೪೩

೧೪೮ ಎ.ಇ, ಸಂ ೨೦, ಶಾ. ಸಂ. ೩೩

೧೪೯ ಕನ್ನಡ ವಿ.ವಿ ಶಾ.ಸಂ., ಸಂ. ೮, ಶಾ.ನಂ. ೫೮

೧೫೦ ಎ.ಇ, ಸಂ ೧೪, ಪು. ೨೩೦

೧೫೧ ಚನ್ನಬಸವಯ್ಯ ಹಿರೇಮಠ, ಪೂರ್ವೋಲ್ಲಿಖಿತ, ಪು. ೮೧

೧೫೨ ಎಸ್.ಐ.ಐ, *ಸಂ. ೯*, ಭಾಗ ೧, ಶಾ.ಸಂ. ೬೫

೧೫೩ ಚನ್ನಬಸವಯ್ಯ ಹಿರೇಮಠ, ಪೂರ್ವೋಲ್ಲಿಖಿತ, ಪು. ೭೦

೧೫೪ ಎಸ್.ಐ.ಐ, ಸಂ. ೯, ಭಾಗ ೧, ಶಾ.ಸಂ. ೧೦೦

೧೫೫ ಬೆಳಗುತ್ತಿ ಸಿಂದ ಮನೆತನದ ಪ್ರಾರಂಭಿಕ ಸಾಮಂತರು ಸಹ ನೊಳಂಬ ಪಲ್ಲವ ಅಧಿಕಾರಿಯಾಗಿದ್ದರು ಎಂಬುದನ್ನು ಈ ಮೊದಲೇ ಹೇಳಿದ್ದೇವೆ

೧೫೬ ಎನುವಲ್ ರಿಪೋರ್ಟ ಆಫ್ ಎಪಿಗ್ರಾಫಿಯಾ ಇಂಡಿಕಾ, ೧೯೧೪, ನಂ. ೫೨೩

೧೫೭ ದಿನಕರ ದೇಸಾಯಿ, ಪೂರ್ವೋಲ್ಲಿಖಿತ, ಪು. ೧೧೯

೧೫೮ ಎಸ್.ಐ.ಐ, ಸಂ. ೯, ಭಾಗ ೧, ಶಾ.ಸಂ. ೧೫೯

೧೫೯ ಅದೇ, ಸಂ. ೯, ಭಾಗ ೧, ಶಾ.ಸಂ. ೧೦೯

೧೬೦ ಅದೇ, ಸಂ. ೯, ಭಾಗ ೧, ಶಾ. ಸಂ. ೧೬೭

೧೬೧ ಚನ್ನಬಸವಯ್ಯ ಹಿರೇಮಠ, ಪೂರ್ವೋಲ್ಲಿಖಿತ, ಪು ೭೧, ೭೨

೧೬೨ ಎಸ್.ಐ.ಐ, ಸಂ. ೯, ಭಾಗ ೧, ಶಾ.ಸಂ. ೨೨೬

೧೬೩ ಬಿ.ಆರ್. ಗೋಪಾಲ, ಪೂರ್ವೋಲ್ಲಿಖಿತ, ಸಂ. ೧, ಪು. ೧೨೫

೧೬೪ ಎಸ್.ಐ.ಐ, ಸಂ. ೯, ಭಾಗ ೧, ಶಾ.ಸಂ. ೨೪೯

೧೬೫ ದಿನಕರ ದೇಸಾಯಿ, ಪೂರ್ವೋಲ್ಲಿಖಿತ, ಪು. ೧೨೦

೧೬೬ ಚನ್ನಬಸವಯ್ಯ ಹಿರೇಮಠ, ಪೂರ್ವೋಲ್ಲಿಖಿತ, ಪು. ೭೨

೧೬೭ ಕನ್ನಡ ವಿ.ವಿ. ಶಾ.ಸಂ.೧, ಶಾ.ನಂ. ೪೦

೧೬೮ ಎಸ್.ಐ.ಐ, ಸಂ. ೯, ಭಾಗ ೧, ಶಾ.ಸಂ. ೨೩೫

೧೬೯ ಕನ್ನಡ ವಿ.ವಿ, ಶಾ.ಸಂ. ೧, ಶಾ.ನಂ.೪೦

೧೭೦ ಚನ್ನಬಸವಯ್ಯ ಹಿರೇಮಠ, ಪೂರ್ವೋಲ್ಲಿಖಿತ, ಪು. ೭೪

೧೭೧ ಕನ್ನಡ ವಿ.ವಿ, ಶಾ.ಸಂ. ೧, ಶಾ.ನಂ. ೧೮

೧೭೨ ಚನ್ನಬಸವಯ್ಯ ಹಿರೇಮಠ, ಪೂರ್ವೋಲ್ಲಿಖಿತ, ಪು. ೭೪

೧೭೩ ಎಸ್.ಐ.ಐ, ಸಂ. ೯, ಭಾಗ ೧, ಶಾ.ಸಂ. ೨೯೬-೨೯೭

೧೭೪ ಅದೇ, ಸಂ. ೯, ಭಾಗ ೧, ಶಾ.ಸಂ. ೨೫೩

೧೭೫ ದಿನಕರ ದೇಸಾಯಿ, ಪೂರ್ವೋಲ್ಲಿಖಿತ, ಪು. ೧೨೧

೧೭೬ ಎ.ಇ, ಸಂ. ೧೪, ಶಾ.ಸಂ. ೧೯

೧೭೭ ಕನ್ನಡ ವಿ.ವಿ, ಶಾ.ಸಂ, ಶಾ.ಸಂ. ೧, ಶಾ.ನಂ. ೪೦

೧೭೮ ಎಸ್.ಐ.ಐ, ಸಂ. ೪, ಶಾ.ಸಂ. ೨೬೦

೧೭೯ ಅದೇ, ಸಂ. ೯, ಭಾಗ ೧, ಶಾ.ಸಂ. ೨೯೬

೧೮೦ ಅದೇ, ಸಂ. ೯, ಭಾಗ ೧, ಶಾ.ಸಂ. ೨೯೭

೧೮೧ ಎ.ಇ, ಸಂ. ೧೪, ಪು. ೨೬೫

೧೮೨ ಬಿ.ಆರ್ ಗೋಪಾಲ., ಮಾನವಿಕ ಕರ್ಣಾಟಕ ಸಂ. ೪, ಸಂಚಿಕೆ ೨, ಪು. ೩೩ ರಿಂದ ೩೮

೧೮೩ ವಿ.ಎಸ್.ಕುಲಕರ್ಣಿ, ಹಿಸ್ಟಾರಿಕಲ್ ಆ್ಯಂಡ್ ಕಲ್ಚರಲ್ ಸ್ಟಡೀಸ್ ಆಫ್ ದಿ ರೀಜನ್ ಅರೌಂಡ್ ಬಸವಕಲ್ಯಾಣ, (ಅಪ್ರಕಟಿತ) ಭಾಗ ೨, ಶಾ.ಸಂ. ೩೬

೧೮೪ ವಿ.ಎಸ್. ಕುಲಕರ್ಣಿ, ಅದೇ ಮಹಾಪ್ರಬಂಧ ಶಾ.ಸಂ. ೧೦೪

೧೮೫ ವಿ.ಎಸ್. ಕುಲಕರ್ಣಿ, ಅದೇ ಮಹಾಪ್ರಬಂಧ, ಶಾ.ಸಂ. ೨೮

೧೮೬ ವಿ.ಎಸ್. ಕುಲಕರ್ಣಿ, ಅದೇ ಮಹಾಪ್ರಬಂಧ ಶಾ.ಸಂ. ೬೦

೧೮೭ ಬಿ.ಆರ್. ಗೋಪಾಲ, ಪೂರ್ವೋಲ್ಲಿಖಿತ, ಸಂ ೧, ಪು. ೧೧೯.

೧೮೮ ವಿ.ಎಸ್. ಕುಲಕರ್ಣಿ, ಅದೇ ಮಹಾಪ್ರಬಂಧ ಶಾ.ಸಂ. ೨೯.

೧೮೯ ಕನ್ನಡ ವಿ.ವಿ, ಶಾ.ಸಂ. ೮, ಶಾ.ನಂ. ೫೮

೧೯೦ ಬಿ.ಆರ್ ಗೋಪಾಲ ರವರು ಬಾಚಿದೇವ ಎಂದು ಕೊಟ್ಟಿದ್ದಾರೆ ಮೈನರ್ ಡಯಾನಾಸ್ಟೀಜ ಆಫ್ ಸೌಥ್ ಇಂಡಿಯಾ, ಕರ್ನಾಟಕ, ಸಂ ೧, ಪು.ಸಂ ೧೧೯ ಆದರೆ ಇದನ್ನು ಕುಲಕರ್ಣಿ ವಿ.ಎಸ್. ಅದೇ ಮಹಾಪ್ರಬಂಧ ಪು. ೯೪ ಭೈರವದೇವ ಎಂದು ಓದಿದ್ದಾರೆ. ಶಾಸನದ ಪಾಠವು ಕನ್ನಡ ವಿ.ವಿ. ಶಾ.ಸಂ. ೮ (ಬೀದರ) ೫೮ ರಲ್ಲಿ ಪ್ರಕಟವಾಗಿದ್ದರೂ ಶಾಸನ ಬಹಳಷ್ಟು ಒಡೆದಿದ್ದರಿಂದ ವಿವರಗಳು ಸ್ಪಷ್ಟವಾಗಿ ತಿಳಿಯುವುದಿಲ್ಲ.

೧೯೧ ಕನ್ನಡ ವಿ.ವಿ, ಶಾ ಸಂ. ೮, ಬೀದರ ಜಿಲ್ಲೆ, ಬೀದರ ತಾಲೂಕ, ಶಾ.ನಂ. ೫೮

೧೯೨ ಅದೇ, ಶಾ ಸಂ. ೮, ಬೀದರ ಜಿಲ್ಲೆ, ಬೀದರ ತಾಲೂಕ, ಶಾ.ನಂ. ೧

೧೯೩ ಎಸ್.ಎಚ್. ರಿತ್ತಿ, ಸೇವುಣಸ್, ಪು. ೧೫೬ ರಿಂದ ೧೫೮

೧೯೪ ವಿ.ಎಸ್. ಕುಲಕರ್ಣಿ, ಅದೇ ಮಹಾಪ್ರಬಂಧ ಶಾ.ಸಂ. ೯೯

೧೯೫ ವಿ.ಎಸ್. ಕುಲಕರ್ಣಿ, ಅದೇ ಮಹಾಪ್ರಬಂಧ, ಪು. ೧೯೩

೧೯೬ ಮಾನವಿಕ ಕರ್ಣಾಟಕ, ಸಂ. ೪, ಸಂಚಿಕೆ ೨, ಪು.ಸಂ. ೩೩ ರಿಂದ ೩೮

೧೯೭ ಕನ್ನಡ ವಿ.ವಿ, ಶಾ.ಸಂ, ಶಾ ಸಂ. ೮, ಬೀದರ ಜಿಲ್ಲೆ, ಬೀದರ ತಾಲೂಕ, ಶಾ.ಸಂ. ೫೮

೧೯೮ ವಿ.ಎಸ್. ಕುಲಕರ್ಣಿ, ಅದೇ ಮಹಾಪ್ರಬಂಧ ಪುಟ ೯೩

೧೯೯ ಎ.ಆರ್.ಐ.ಇ. ೧೯೬೨-೧೯೬೩, ನಂ. ೭೭೪

೨೦೦ ವಿ.ಎಸ್. ಕುಲಕರ್ಣಿ, ಅದೇ ಮಹಾಪ್ರಬಂಧ ಶಾ.ಸಂ. ೯

೨೦೧ ದಿ ಓರಿಜನ್ ಹೋಮ್ ಆಫ್ ಕಾಕತಿಯಾಸ್, ಕರ್ನಾಟಕ ಹಿಸ್ಟಾರಿಕಲ್ ರಿವ್ಯೂ, ಸಂ. ೧೩ ಪು. ೩೦ ರಿಂದ ೩೩

೨೦೨ ಕಾಕತೀಯರ ಬಗ್ಗೆ ಹೆಚ್ಚಿನ ವಿವರಗಳನ್ನು ಪಿ.ವಿ. ಪರಬ್ರಹ್ಮಶಾಸ್ತ್ರಿ ಅವರ ದಿ ಕಾಕತೀಯಾಸ್ ಆಫ್ ವಾರಂಗಲ್ ಗ್ರಂಥ ನೋಡಿರಿ

೨೦೩ ಎಸ್.ಎಚ್. ರಿತ್ತಿ, ಪೂರ್ವೋಲ್ಲಿಖಿತ, ಪು. ೧೫೬

೨೦೪ ಕನ್ನಡ ವಿ.ವಿ, ಶಾ.ಸಂ. ೮, ಬೀದರ ಜಿಲ್ಲೆ, ಬೀದರ ತಾಲೂಕ, ಶಾ.ನಂ. ೧

೨೦೫ ಅದೇ, ಶಾ. ಸಂ. ೮, ಬೀದರ ಜಿಲ್ಲೆ, ಬೀದರ ತಾಲೂಕ, ಶಾ.ನಂ. ೨

೨೦೬ ಎ.ಇ, ಸಂ. ೨, ಶಾ.ಸಂ. ೨, ಪು. ೧೭೦.

೨೦೭ ಚನ್ನಬಸವಯ್ಯ ಹಿರೇಮಠ, ಪೂರ್ವೋಲ್ಲಿಖಿತ, ಪು. ೨೯೧.

೨೦೮ ಎಸ್.ಐ.ಐ, ಸಂ. ೨೦, ಶಾ.ಸಂ. ೨೮೦.

೨೦೯ ಅದೇ, ಸಂ. ೧೧, ಭಾಗ ೧, ಶಾ.ಸಂ. ೭೧.

೨೧೦ ಚನ್ನಬಸವಯ್ಯ ಹಿರೇಮಠ, ಪೂರ್ವೋಲ್ಲಿಖಿತ, ಪು. ೩೦

೨೧೧ ಎ.ಇ, ಸಂ. ೩, ಶಾ.ಸಂ. ೪೩

# ಅಧ್ಯಾಯ ೫

## ಸಿಂದರ ಆಡಳಿತ ಪ್ರದೇಶಗಳು, ಆಡಳಿತ ಹಾಗೂ ಅರ್ಥ ವ್ಯವಸ್ಥೆ

ನಾವು ಅಭ್ಯಾಸ ಮಾಡಿದ ಸಿಂದ ಮನೆತನಗಳು, ಕರ್ನಾಟಕದ ಉತ್ತರ ಭಾಗದ ಬಹಳಷ್ಟು ಪ್ರದೇಶಗಳಲ್ಲಿ ವ್ಯಾಪಿಸಿ ರಾಜ್ಯವಾಳಿದರು ಎಂಬುದು ಸ್ಪಷ್ಟವಾಗಿದೆ. ಪಶ್ಚಿಮದ ಭಾಗದಲ್ಲಿ ಬನವಾಸಿ ಪ್ರಾಂತದಲ್ಲಿ ಬೆಳಗುತ್ತಿ ಸಿಂದರು, ಮಧ್ಯಭಾಗದ ವಿಜಾಪುರ ಪ್ರದೇಶದಲ್ಲಿ ಬಾಗಡಗೆಯ ಸಿಂದರು, ಪೂರ್ವದಲ್ಲಿ ಬಳ್ಳಾರಿ ಪ್ರದೇಶದಲ್ಲಿ ಕುರುಗೋಡು ಸಿಂದರು, ಉತ್ತರಕ್ಕೆ ಬೀದರ ಗುಲಬುರ್ಗಾ ಪ್ರದೇಶಗಳಲ್ಲಿ ಅಟ್ಟಳೆ ನಾಡಿನ ಸಿಂದರು, ಅದರಿಂದ ಉತ್ತರಕ್ಕೆ ಪಳಿಯಂಡ ಸಿಂದರು ಹೀಗೆ ರಾಜ್ಯವಾಳಿದರು. ಉಸ್ಮನಾಬಾದ ಸುತ್ತ ಪಳಿಯಂಡ ಸಿಂದರ ಬೇರೆ ರಾಜ್ಯವಾಳಿದರು. ಇತಿಹಾಸ ಕಾಲದಲ್ಲಿ ಚಾಲುಕ್ಯ ಸಾಮ್ರಾಜ್ಯವಾದ ವಿಶಾಲ ಕರ್ನಾಟಕದ ಭಾಗವೇ ಆಗಿದ್ದಿತು. ಈ ಮನೆತನಗಳ ಆಳಿದ ಬೆಳಗವರ್ತಿ ರಾಜ್ಯದ ಕಿಸುಕಾಡು-೭೦, ಬಾಗಡಗೆ-೭೦, ಎಡವಟ್ಟೆ-೭೦, ಕೆಳವಡಿ-೩೦೦, ಸಿಂದವಾಡಿ-೧೦೦೦, ಬಲಕುಂದೆ-೫೦೦, ಪಳಿಯಂಡ-೪೦೦೦ ಇವೆಲ್ಲ ಪ್ರಸಿದ್ಧ ಪ್ರದೇಶವಾಗಿದ್ದವು. ಈ ಎಲ್ಲ ಪ್ರದೇಶಗಳ ಭೌಗೋಳಿಕ ವ್ಯಾಪ್ತಿಯನ್ನು ಗುರುತಿಸಿ ಅಲ್ಲಿ ಆಡಳಿತ ಹೇಗೆ ನಡೆದಿದಿತ್ತು ಎಂದು ತಿಳಿದುಕೊಳ್ಳುವುದೇ ಈ ಅಧ್ಯಾಯದ ಉದ್ದೇಶವಾಗಿದೆ.

ಇಲ್ಲಿ ಚರ್ಚಿಸಬೇಕಾದ ಮಹತ್ವದ ವಿಷಯವೊಂದಿದೆ. ನಾವು ಈಗ ನೋಡಿದಂತೆ ಈ ಪ್ರದೇಶಗಳ ಹೆಸರುಗಳೊಂದಿಗೆ ಕೆಲವೊಂದು ಸಂಖ್ಯೆಗಳು ಜೋಡಿಸಲ್ಪಟ್ಟಿವೆ. ಕರಹಾಟ ದೇಶ, ಕಿಸುಕಾಡು ನಾಡು, ಬನವಾಸಿ ಮಂಡಲ ಇತ್ಯಾದಿ ಪ್ರಾಂತಗಳು ಕರಹಾಟ-೪೦೦೦, ಕಿಸುಕಾಡು-೭೦, ಬನವಾಸಿ-೧೨೦೦೦ ಎಂಬುದಾಗಿ ಅವುಗಳ ಪ್ರಾಂತಗಳ ಹೆಸರಿಗೆ ಸಂಖ್ಯೆಗಳನ್ನು ಜೋಡಿಸಿದ್ದನ್ನು ಕಾಣುತ್ತೇವೆ. ಇದೇ ರೀತಿ ಸಿಂದವಾಡಿ-೧೦೦೦, ಕಿಸುಕಾಡು-೭೦, ಬಲ್ಲಕುಂದೆ-೫೦೦, ಪಳಿಯಂಡ-೪೦೦೦ ಇತ್ಯಾದಿ ಹೆಸರುಗಳು ಕಾಣಸಿಗುತ್ತವೆ. ಈ ಸಂಖ್ಯೆಗಳ ಸಂಕೇತವೇನು ಅರ್ಥವೇನು ಎಂಬುದು ಅನೇಕ ವಿದ್ವಾಂಸರ ಚರ್ಚೆಯ ವಿಷಯವಾಗಿದೆ. ಹಲವಾರು ಅಭಿಪ್ರಾಯಗಳು ವ್ಯಕ್ತವಾಗಿವೆ. ವಿಶೇಷವಾಗಿ ಗಮನಿಸಬೇಕಾದ ವಿಷಯವೆನೆಂದರೆ, ಈ ಪ್ರದೇಶಗಳ ಹೆಸರಿಗೆ ಸಂಖ್ಯೆಯನ್ನು ಜೋಡಿಸಿರುವುದು ಇದು ಹೆಚ್ಚಾಗಿ ಕರ್ನಾಟಕದ ಸಾಮ್ರಾಜ್ಯಗಳಲ್ಲಿ ರೂಢಿಯಲ್ಲಿದ್ದಿತು. ಇತರ ಸುತ್ತಲಿನ ರಾಜ್ಯಗಳಲ್ಲಿ ಇಂಥ ಪದ್ಧತಿ ಹೆಚ್ಚಾಗಿ ಪ್ರಚಲಿತವಿರದಿದ್ದರೂ, ಆಗಾಗ ಕಂಡು ಬಂದಿದೆ. ಈ ಪದ್ಧತಿಯು ಬದಾಮಿ ಚಾಲುಕ್ಯ ಮತ್ತು

ರಾಷ್ಟ್ರಕೂಟರ ಕಾಲದಲ್ಲಿ ಅಷ್ಟೊಂದು ಪ್ರಚಲಿತದಲ್ಲಿರಲಿಲ್ಲ. ಕಲ್ಯಾಣ ಚಾಲುಕ್ಯರು ಸೇವುಣರು ಮತ್ತು ಹೊಯ್ಸಳರ ಕಾಲಕ್ಕೆ ಇದು ಹೆಚ್ಚಾಗಿ ಕಂಡು ಬರುತ್ತದೆ. ವಿಜಯನಗರದ ಕಾಲಕ್ಕೆ ರೂಢಿಯಲ್ಲಿ ಇರಲಿಲ್ಲ. ನೇರೆಯ ರಾಜ್ಯಗಳಾದ ಕಾಕತೀಯ, ಚೋಳ ರಾಜ್ಯಗಳಲ್ಲಿ ಈ ಪದ್ಧತಿಯು ಸ್ವಲ್ಪ ಮಟ್ಟಿಗೆ ಇತ್ತು. ತೀರಾ ಪ್ರಾಚೀನ ಕಾಲದಲ್ಲಿ ಪ್ರಾಂತ ಎಂಬ ಅರ್ಥದಲ್ಲಿ ಆಹಾರ, ಪತಕ ಇತ್ಯಾದಿ ಪದಗಳು ಬಳಿಕೆಗೆ ಬಂದವು ಉದಾ : ಶೂರಪಾರಕ ಆಹಾರ, ಗೋವರ್ಧನ ಆಹಾರ, ಪೈಠಣ ಪಥಕ ಇತ್ಯಾದಿ ಮುಂದೆ ಬರಬರುತ್ತ ರಾಷ್ಟ್ರ, ರಾಜ್ಯ, ವಿಷಯ ಇತ್ಯಾದಿ ಪದಗಳು ಒಂದು ವಿಶಿಷ್ಠ ಪ್ರದೇಶಗಳನ್ನು ಸೂಚಿಸಲು ಉಪಯೋಗಿಸಲ್ಪಟ್ಟವು. ಬಾದಾಮಿ ಚಾಲುಕ್ಯರ ಕಾಲದಿಂದಲೇ ಈ ಪದ್ಧತಿಯು ಆರಂಭಗೊಂಡಿತೆಂದು ಹೇಳಬಹುದು. ಪ್ರಸಿದ್ಧರಾದ ೨ನೇ ಪುಲಕೇಶಿಯ ಐಹೊಳೆ ಪ್ರಶಸ್ತಿಯಲ್ಲಿ ೯೯ ಸಾವಿರ ಹಳ್ಳಿಗಳನ್ನೊಳಗೊಂಡು ಮೂರು ಮಹಾರಾಷ್ಟ್ರಗಳ ಉಲ್ಲೇಖ ಬರುತ್ತದೆ.[೧] ಬಹಳಷ್ಟು ಹಿಂದೆಯೇ ಫ್ಲೀಟರವರು ಈ ಸಂಖ್ಯೆಯು ಆ ಪ್ರಾಂತಗಳಲ್ಲಿ ಇರುವ ಗ್ರಾಮಗಳ ಸಂಖ್ಯೆಯನ್ನು ಸೂಚಿಸುತ್ತದೆ ಎಂದು ಅಭಿಪ್ರಾಯಪಟ್ಟಿದ್ದಾರೆ. ಆದರೆ ಬಿ.ಎಲ್ ರೈಸರವರು ಈ ಸಂಖ್ಯೆಗಳು ಆಯಾ ಪ್ರದೇಶಗಳ ಆದಾಯವನ್ನು ಸೂಚಿಸುತ್ತವೆ ಎಂದಿದ್ದಾರೆ.[೨] ಡಾ. ಅಳ್ತೆಕರ ಅವರು ಈ ಅಭಿಪ್ರಾಯವು ಸೂಕ್ತವಲ್ಲ ಎಂದು ಸೂಚಿಸಿದ್ದಾರೆ. ಏಕೆಂದರೆ ಕರವನ್ನು ಧನರೂಪವಲ್ಲದೇ ವಸ್ತು ರೂಪದಲ್ಲಿಯೂ ಸಂಗ್ರಹಿಸುತ್ತಿದ್ದುದರಿಂದ ಈ ವಿವರಣೆ ಸಮಂಜಸವಲ್ಲ. ಅಲ್ಲದೇ ಕೆಲವು ಪ್ರದೇಶಗಳ ಜೊತೆಗೆ ೨, ೬, ೧೨, ೩೦ ಇತ್ಯಾದಿ ಬಹು ಚಿಕ್ಕ ಸಂಖ್ಯೆಗಳು ಜೋಡಿಸಲ್ಪಟ್ಟಿದ್ದನ್ನು ಕಾಣುತ್ತೇವೆ. ಪ್ರದೇಶವು ಎಷ್ಟೇ ಚಿಕ್ಕದಿದ್ದರೂ, ಆದಾಯ ಮಾತ್ರ ಇಷ್ಟು ಕಡಿಮೆ ಇರಲಾರದು. ಈ ಸಂಖ್ಯೆಗಳು ಆಯಾ ಪ್ರದೇಶಗಳ ಜನಸಂಖ್ಯೆ ಸೂಚಿಸುತ್ತವೆ ಎಂದು ಕೆಲವು ವಿದ್ವಾಂಸರು ಸೂಚಿಸಿದ್ದಾರೆ. ಆದರೆ ಜನಸಂಖ್ಯೆಯು ಶಾಶ್ವತವಾಗಿ ಉಳಿಯುವುದಿಲ್ಲವಾದ್ದರಿಂದ ಈ ವಿವರಣೆಯು ಸಮಂಜಸವೆನಿಸುವುದಿಲ್ಲ. ಹಾಗೇ ನೋಡಿದರೆ ಫ್ಲೀಟರು ಮೊದಲೇ ಹೇಳಿದಂತೆ ಈ ಸಂಖ್ಯೆಗಳು ಆಯಾ ಪ್ರದೇಶಗಳಲ್ಲಿನ ಗ್ರಾಮಗಳನ್ನು ಸೂಚಿಸುತ್ತವೆ ಎಂಬುದೇ ಸಮಂಜಸವೆನಿಸುತ್ತದೆ. ಈ ಮೊದಲೇ ಸೂಚಿಸಿದ ಐಹೊಳೆ ಪ್ರಶಸ್ತಿಯಲ್ಲಿನ ಮೂರು ಮಹಾರಾಷ್ಟ್ರಗಳಿಗೆ ಸಂಬಂಧಿಸಿದಂತೆ ೯೯ ಸಾವಿರ ಗ್ರಾಮಗಳಿದ್ದವು ಎಂದು ಸ್ಪಷ್ಟವಾಗಿ ಹೇಳುತ್ತದೆ. ಈ ಮೂರು ಮಹಾರಾಷ್ಟ್ರಗಳು ಪುಲಕೇಶಿಯು ಸ್ಥಾಪಿಸಿದ ನರ್ಮದೆಯಿಂದ ಕಾವೇರಿವರೆಗಿನ ವಿಶಾಲ ಸಾಮ್ರಾಜ್ಯಕ್ಕೆ ಅನ್ವಯಿಸುತ್ತದೆ ಎಂಬುದನ್ನು ಗಮನಿಸಬೇಕು. ಇನ್ನು ಅನೇಕ ಪ್ರಸಂಗಗಳಲ್ಲಿ ಗ್ರಾಮ ಎಂಬ ಪದವು ಸ್ಪಷ್ಟವಾಗಿ ಉಪಯೋಗಿಸಲ್ಪಟ್ಟಿದೆ. ಉದಾಹರಣೆ ಕೊಳನೂರು-೩೦ ಎಂಬ ಪ್ರದೇಶದಲ್ಲಿ ಇದ್ದ ಮೂವತ್ತೂ ಗ್ರಾಮಗಳನ್ನು ಒಂದು ಶಾಸನವು ಉಲ್ಲೇಖಿಸುತ್ತದೆ. ಅವುಗಳಲ್ಲಿ ಬಹಳಷ್ಟು ಗ್ರಾಮಗಳನ್ನು

ಇಂದಿಗೂ ಗುರುತಿಸಬಹುದಾಗಿದೆ ಬಹು ದೊಡ್ಡದಾದ ಒಂದು ಪ್ರದೇಶದಲ್ಲಿ ಇಷ್ಟೊಂದು ಗ್ರಾಮಗಳಿರಲಿಕ್ಕಿಲ್ಲ ಎಂಬ ಸಂಶಯ ಬರುವುದು ಸಹಜ. ಗ್ರಾಮ ಎಂದಾಗ ಇಂದಿನ ಗ್ರಾಮಗಳ ಮಾನದಿಂದ ಹಿಂದಿನ ಕಾಲದ ಗ್ರಾಮಗಳ ವ್ಯಾಪ್ತಿ ನೋಡುವುದು ಅಷ್ಟು ಸರಿ ಆಗುವುದಿಲ್ಲ. ಅನೇಕ ಸಲ ಗ್ರಾಮ ಗಾತ್ರ ಅತೀ ಚಿಕ್ಕದಿದ್ದಿರಬಹುದು. ಇಂದಿಗೂ ಸಹ ಕೇವಲ ಮೂರು, ನಾಲ್ಕು ಮನೆಗಳಷ್ಟಯ ಜನವಸತಿ ಇದ್ದ ಗ್ರಾಮಗಳನ್ನು ನಾವು ನೋಡುತ್ತೇವೆ. ಹಿಂದಿನ ಕಾಲದಲ್ಲಿಯೂ ಇಂತಹ ಪರಿಸ್ಥಿತಿ ಇದ್ದಿರಬೇಕು. ಜನವಸತಿಯು ಆಯಾ ಪ್ರದೇಶಗಳಲ್ಲಿ ದೊರೆಯುವ ನೀರು, ಭೂಮಿ ಇತ್ಯಾದಿ ಸೌಕರ್ಯಗಳನ್ನು ಅವಲಂಬಿಸಿರುತ್ತದೆ ಎಂಬುದನ್ನು ಗಮನಿಸಿದರೆ ಕೆಲವೊಂದು ಪ್ರದೇಶಗಳಲ್ಲಿ ಹೆಚ್ಚು ಗ್ರಾಮಗಳು, ಇನ್ನು ಕೆಲವು ಪ್ರದೇಶಗಳಲ್ಲಿ ಕಡಿಮೆ ಗ್ರಾಮಗಳು ಇರುವುದನ್ನು ನಾವು ಕಾಣುತ್ತೇವೆ. ಪ್ರಾಣನಾಥ ಎಂಬುವರು ಗ್ರಾಮ ಎಂದರೆ ಒಂದು ವಿಶಿಷ್ಠ ವ್ಯಾಪ್ತಿಯಿರುವ ಉಳಲು ಉಪಯುಕ್ತವಾದ ಭೂಮಿಯೆಂದು ಅರ್ಥೈಸುತ್ತಾರೆ. ಇದೇ ರೀತಿ ಗ್ರಾಮವೆಂದರೆ, ಒಂದು ಜನವಸತಿ ಅದು ಚಿಕ್ಕದಿರಲಿ, ದೊಡ್ಡದಿರಲಿ ಎಂದು ಅರ್ಥ ಮಾಡಿದರೆ ಸರಿ ಹೊಂದುತ್ತದೆ. ಒಟ್ಟಿನಲ್ಲಿ ಈ ಸಂಖ್ಯೆಗಳು "ಗ್ರಾಮಗಳ ಸಂಖ್ಯೆಗಳನ್ನು ಸೂಚಿಸುತ್ತವೆ" ಎಂಬುದು ನಮ್ಮ ಅಭಿಪ್ರಾಯ. ಫ್ಲೀಟರ ಇನ್ನೂ ಒಂದು ಸೂಚನೆಯಂತೆ ಇಂಥ ಸಂಖ್ಯೆಗಳು ಚಿಕ್ಕವು ಇದ್ದಾಗ ಅವು ವಸ್ತುತಃ ಅಲ್ಲಿ ಇದ್ದಷ್ಟು ಗ್ರಾಮಗಳನ್ನು ಸೂಚಿಸುತ್ತವೆ, ಅದು ಸಂಖ್ಯೆ ಬಹುದೊಡ್ಡದಾದಾಗ ಆ ಸಂಖ್ಯೆ ಸಾಂಕೇತಿಕ ಹಾಗೂ ಸಾಂಪ್ರದಾಯಿಕವಾಗಿರುತ್ತದೆ ಎಂದು ಅವರು ಹೇಳುತ್ತಾರೆ.[೩] ಸಪಾದಲಕ್ಷ, ಸಪ್ತಾರ್ಧಲಕ್ಷ ಎಂಬಂತಹ ಬೃಹತ್ ಸಂಖ್ಯೆಗಳು ಇದ್ದಾಗ ಫ್ಲೀಟರ ಸೂಚನೆ ಸಮಂಜಸ ಎನಿಸುತ್ತದೆ.[೪]

ಆಯಾ ಪ್ರದೇಶಗಳ ಕಂದಾಯ ನಿರ್ವಹಣೆಯ ಸೌಕರ್ಯಕ್ಕಾಗಿ ಆ ಪ್ರದೇಶಗಳಲ್ಲಿಯ ಗ್ರಾಮಗಳ ಸಂಖ್ಯೆಯು ಕಂದಾಯ ಅಧಿಕಾರಿಗಳ ತೀವ್ರ ಗಮನಕ್ಕೆ ಬರುವ ಉದ್ದೇಶದಿಂದ ಆಡಳಿತ ವಿಭಾಗಗಳ ಹೆಸರಿನಲ್ಲಿಯೇ ಅವುಗಳನ್ನು ಸೂಚಿಸಿವಿದ್ದಿರಬಹುದಾಗಿದೆ. ಈ ಹಿನ್ನಲೆಯಲ್ಲಿ ನಮಗೆ ದೊರೆಯುವ ಮಾಹಿತಿಯನ್ನು ಆಧರಿಸಿ ವಿವಿಧ ಆಡಳಿತ ಪ್ರದೇಶಗಳ ಭೌಗೋಳಿಕ ವ್ಯಾಪ್ತಿಯನ್ನು ತಿಳಿದುಕೊಳ್ಳಲು ಪ್ರಯತ್ನಿಸಲಾಗಿದೆ.[೫]

**ಕರಹಾಡನಾಲ್ಸಾಸಿರ ಅಥವಾ ಕರಹಾಟಕ ; ಚತುಸಹಸ್ರ**

ಎಲ್ಲ ಸಿಂದ ಮನೆತನಗಳಿಗೂ ಕರ್ನಾಟವೇ ಮೂಲಸ್ಥಾನವಾಗಿದ್ದಿತು ಎಂಬ ವಿಷಯವನ್ನು ನಾವು ಈ ಮೊದಲು ನೋಡಿದ್ದೇವೆ. ನಿಡುದೋಳ ಸಿಂದನು "ಕರಹಾಟನಾಲ್‌ಸಾಸಿರ

ಒಳಗಾಗನೇಕ ದೇಶಂಗಳನಾಳ್ದ" ನೆಂದು ಹೇಳುವುದಲ್ಲದೆ ಮುಂದೆ ಬಂದ ಕೆಲವು ಸಿಂದ ಸಾಮಂತರು ಕರ್ಹಾಟಪುರವರೇಶ್ವರ ಎಂಬ ಬಿರುದನ್ನು ಹೊಂದಿದ್ದನ್ನು ನಾವು ನೋಡಿದ್ದೇವೆ. ಕರಹಾಟವು ಚಾಲುಕ್ಯ ಮಾಂಡಲಿಕರಾಗಿದ್ದ ಶಿಲಾಹಾರರ ಮೂಲಸ್ಥಳ ಎಂಬುದು ಎಲ್ಲರಿಗೂ ತಿಳಿದ ವಿಷಯ. ಈ ಮೊದಲೇ ನೋಡಿದಂತೆ ಶಿಲಾಹಾರರಗಿಂತ ಸ್ವಲ್ಪ ಕಾಲ ಮುಂಚೆ ರಾಷ್ಟ್ರಕೂಟರ ೩ನೇ ಕೃಷ್ಣನ ಕಾಲದಲ್ಲಿ ಇಲ್ಲಿ ಒಂದು ಸಿಂದ ಮನೆತನವು ಅಧಿಕಾರದಲ್ಲಿದ್ದಿತು ಎಂದು ತೋರಿಸುವ ಶಾಸನವಿದೆ ಅದನ್ನು ನಾವು ಈ ಮೊದಲೇ ಉಲ್ಲೇಖಿಸಿದ್ದೇವೆ. ಬಹುಶಃ ಸಿಂದರು ಇವರ ಅಧೀನರಾಗಿಯೇ ಕಾರ್ಯ ಮಾಡುತ್ತಿದ್ದು ಮುಂದೆ ಅವಕಾಶಗಳು ದೊರೆತಾಗ ಅಲ್ಲಿಂದ ಬೇರೆ ಕಡೆಗಳಿಗೆ ಹೊರಟಿರಬಹುದೆಂದು ನಾವು ಈಗಾಗಲೇ ಸೂಚಿಸಿದ್ದೇವೆ. ಈ ಸ್ಥಳವು ಕರಹಾಟ, ಕರಹಾಟಕ ಕರಹಡ ಎಂದು ಮುಂತಾಗಿ ಶಿಲಾಹಾರರ ಶಾಸನಗಳಲ್ಲಿ ಉಲ್ಲೇಖಿಸಲ್ಪಟ್ಟಿದೆ. ಇದು ಇಂದು ಮಹಾರಾಷ್ಟ್ರ ರಾಜ್ಯದಲ್ಲಿ ಕೊಲ್ಲಾಪುರದಿಂದ ಉತ್ತರಕ್ಕೆ ಸಾತಾರಾ ಜಿಲ್ಲೆಯಲ್ಲಿ ಒಂದು ಪ್ರಮುಖ ಕರ್ಹಾಡ, ಕರಾಡ ಎಂಬ ಪ್ರಮುಖ ಪಟ್ಟಣವಾಗಿದೆ. ಮೊದಲಿನಿಂದಲೂ ಇದು ಪ್ರಸಿದ್ಧ ಸ್ಥಳವಾಗಿದ್ದಿತು ಎಂದು ಹೇಳಲು ಇದು "ಕರಹಾಟ ಯೋಗಪೀಠಂ" ಎಂದು ಶಾಸನದಲ್ಲಿ ಹೇಳಲ್ಪಟ್ಟಿದೆ.[೬] ನಿರ್ಧಿಷ್ಟ ಮಾಹಿತಿ ಇಲ್ಲದ್ದರಿಂದ ಈ ನಾಲ್ಸಾಸಿರ ಪ್ರದೇಶದ ನಿರ್ದಿಷ್ಟ ಭೌಗೋಳಿಕ ವ್ಯಾಪ್ತಿಯನ್ನು ನಿರ್ಧರಿಸುವುದು ಕಠಿಣವಾದರೂ ಅದು ಇಂದಿನ ಸಾತಾರಾ, ಕೊಲ್ಲಾಪುರ ಜಿಲ್ಲೆಗಳ ಕೆಲ ಭಾಗಗಳು ಒಳಗೊಂಡಿದ್ದಿತು ಎಂದು ಸ್ಥೂಲವಾಗಿ ಹೇಳಬಹುದು.

## ಬೆಳಗವರ್ತಿ ರಾಜ್ಯ

ಬೆಳಗುತ್ತಿ ಸಿಂದರು ಆಳಿದ ಪ್ರದೇಶಕ್ಕೆ ಬೆಳಗವರ್ತಿ ರಾಜ್ಯ ಎಂದು ಹೆಸರಿದ್ದಿತು. ಬೆಳಗವರ್ತಿಯು ಇಂದಿನ ದಾವಣಗೆರೆ ಜಿಲ್ಲೆಯಲ್ಲಿನ ಹೊನ್ನಾಳಿ ತಾಲೂಕಿನ ಬೆಳಗುತ್ತಿ ಎಂಬ ಗ್ರಾಮ. ಈ ರಾಜ್ಯವು ಬನವಾಸಿ-೧೨೦೦೦ ಎಂಬ ವಿಶಾಲವಾದ ಪ್ರದೇಶದ ಭಾಗವಾಗಿದ್ದಿತು. ಈ ಬೆಳಗುತ್ತಿ ಸಿಂದರು ೬ನೇ ವಿಕ್ರಮಾದಿತ್ಯನ ಮಾಂಡಲಿಕರಾಗಿ, ಬನವಾಸಿ ಪ್ರಾಂತದ ದಂಡನಾಯಕರ ಅಧೀನರಾಗಿ ಕಾರ್ಯಮಾಡುತ್ತಿದ್ದರು. ಉದಾಹರಣೆಗೆ ಸಾಮಂತ ಚಟ್ಟರಸನು ಬನವಾಸಿಯನ್ನು ಆಳುತ್ತಿದ್ದ ಮಹಾಪ್ರಧಾನ ದಂಡನಾಯಕ ಗೋವಿಂದರಸನ ಅಧೀನನಾಗಿದ್ದನು.[೭]. ಬೆಳಗುತ್ತಿ ರಾಜ್ಯವು ಅನೇಕ ಕಂಪಣ ಅಥವಾ ಚಿಕ್ಕ ಚಿಕ್ಕ ಆಡಳಿತ ವಿಭಾಗಗಳನ್ನು ಒಳಗೊಂಡಿದ್ದಿತು. ಇದೇ ಪ್ರದೇಶದಲ್ಲಿ ಬನವಾಸಿ ನಾಡಿನ ಭಾಗವಾದ ನಾಗರಖಂಡ-೭೦ ಎಂಬ ಪ್ರಾಂತವು ಸಹ ಬೆಳಗುತ್ತಿ ರಾಜ್ಯದ ಭಾಗವಾಗಿದ್ದಿತು. ಈ ಪ್ರಾಂತವು

ಪ್ರತ್ಯೇಕವಾಗಿ ಬೆಳಗುತ್ತಿ ಸಿಂದರ ಶಾಸನಗಳಲ್ಲಿ ನಮೂದಿಸಲ್ಪಟ್ಟಿಲ್ಲದಿದ್ದರೂ ಬೆಳಗುತ್ತಿ ಸಾಮಿಪ್ಯ ಮತ್ತು ಗ್ರಾಮಗಳ ಉಲ್ಲೇಖ ಇವುಗಳ ಮೇಲಿಂದ ನಾಗರಖಂಡವು ಬೆಳಗುತ್ತಿ ರಾಜ್ಯದ ಒಂದು ಪ್ರಾಂತವಾಗಿದ್ದಿತ್ತೆಂದು ಸ್ಪಷ್ಟವಾಗುತ್ತದೆ. ಇವರ ಶಾಸನಗಳನ್ನು ಪರಿಶೀಲಿಸಿದಾಗ ಈ ಕೆಳಗಿನ ಪ್ರಾಂತಗಳು ಈ ರಾಜ್ಯದಲ್ಲಿ ಸೇರಿದ್ದವು ಎಂದು ತಿಳಿಯುತ್ತವೆ. ಎಡವಟ್ಟೆ-೭೦, ಎಡಮಲೈ-೭೦, ರಟ್ಟಪಳ್ಳಿ-೭೦, ಜಿಡ್ಡುಳ್ಳಿಗೆ-೭೦, ಕೊಳ್ಳಗನೂರು-೭೦, ಐವತ್ತಾರು ಬಾಡ, ತರ್ದವಾಡಿ-೧೦೦೦ ಪ್ರದೇಶ, ಭ್ರಾಂತಿ-೩೦, ಮಧುಮಲ್ಲ-೩೦, ನರೆಯಳಿಗೆ-೩೦, ಕುಂಮಶಿ-೩೦, ಅರಕೇರಿ-೧೨, ಮೂಗಂದ-೧೨, ಕುಂದೂರು-೧೨. ಜಿಡ್ಡುಳಿಗೆ-೭೦ ಎಂಬ ಪ್ರಾಂತವು ಬೆಳಗುತ್ತಿ ರಾಜ್ಯದ ಒಂದು ಭಾಗವಾಗಿತ್ತೆಂದು ಶಾಸನವು ಹೇಳುತ್ತದೆ[೮]. ನಾಗರಖಂಡವು ಇದರ ನೆರೆಯ ಪ್ರಾಂತವಾಗಿತ್ತು ಎಂಬುದು ಜಿಡ್ಡುಳಿಗೆ "ನಾಗರಖಂಡವೆರಡರಪ್ಪತ್ತು" ಎಂಬ ಒಂದು ಶಾಸನದ ಹೇಳಿಕೆಯಿಂದ ಸ್ಪಷ್ಟವಾಗುತ್ತದೆ. ಜಿಡ್ಡುಳಿಗೆಯು ಸಹ ೭೦ ಗ್ರಾಮಗಳ ಒಂದು ಪ್ರಾಂತವಾಗಿತ್ತೆಂದು ಇತರ ಶಾಸನಗಳಿಂದ ತಿಳಿದು ಬರುತ್ತದೆ. ಜಿಡ್ಡುಳ್ಳಿಗೆ-೭೦ ಮತ್ತು ನಾಗರಖಂಡ-೭೦ ಒಟ್ಟಾಗಿ ಎರಡೆಪ್ಪತ್ತರ ಒಂದು ಪ್ರಾಂತವಾಗಿದ್ದಿತು. ಎರಡು ಪ್ರಾಂತಗಳನ್ನು ಸೇರಿಸಿ ಒಂದೇ ಹೆಸರನ್ನು ಕೊಟ್ಟಿರುವ ಇನ್ನೊಂದು ಉದಾಹರಣೆ ಎಂದರೆ ಬೆಳ್ವೊಲಮೂನುರುಂ, ಪುರುಗೆರೆಮೂನುರಂ, ಅಂತೆರಡರಮೂನುರಂ ಎಂಬುದು.

ಎಡವಟ್ಟೆ-೭೦ ಬೆಳಗುತ್ತಿ ರಾಜ್ಯದ ಒಂದು ಪ್ರಮುಖ ಪ್ರಾಂತ. ಈ ೭೦ ಹಳ್ಳಿಗಳನ್ನು ಗುರುತಿಸುವುದು ಅಸಾಧ್ಯ. ಎಡವಟ್ಟೆ ಎಂಬುದು ಇಂದಿನ ಯಾವ ಗ್ರಾಮ ಎಂದು ಗೊತ್ತಾಗುವುದಿಲ್ಲ. ಹಿರೇಕೆರೂರು ತಾಲೂಕಿನ ನಾಗವಂದ ಎಂಬಲ್ಲಿಯ ಸಿಂದ ಮಾಚರಸನ ಶಾಸನದಲ್ಲಿ "ಎಡವಟ್ಟೆಪ್ಪತ್ತರ ಬಳಿಯ ನಾಗಾರ್ಜುನದ" ಎಂಬ ಉಲ್ಲೇಖವಿದೆ. ಈ ನಾಗಾರ್ಜುನವು ಶಾಸನ ದೊರೆತ ಸ್ಥಳವಾದ ನಾಗವಂದ ಎಂದು ಗುರುತಿಸಲಾಗಿದೆ.[೯] ಹರಿಹರ ಶಾಸನದಲ್ಲಿ ಹಳ್ಳವುರು ಅಂದರೆ ಇಂದಿನ ಹಿರೇಕೆರೂರು ತಾಲೂಕಿನಲ್ಲಿಯ ಹಳ್ಳೂರು ಎಡೆವಟ್ಟೆ ಕಂಪಣದ ಮುಖ್ಯ ಸ್ಥಳವಾಗಿತ್ತೆಂದು ಸೂಚಿತವಾಗಿದೆ.[೧೦] ಅದೇ ರೀತಿಯಾಗಿ ಬೆಳಗುತ್ತಿ ರಾಜ್ಯದಲ್ಲಿ ಸೇರ್ಪಡೆಯಾದ ಇತರ ಚಿಕ್ಕ ಆಡಳಿತ ವಿಭಾಗಗಳೆಂದರೆ, ಎಡಮಲೆ-೭೦, ರಟ್ಟಪಳ್ಳಿ-೭೦, ಕೊಳಗನೂರು-೭೦, ಐವತ್ತಾರು ಬಾಡ, ಬಳ್ಳವೆ-೭೦, ಸಾಂತಳಿಗೆ-೧೦೦೦, ಮಾಲೆ-೭೦ ಗಳಲ್ಲದೇ ಭ್ರಾಂತಿ ೩೦, ನರೆಯಳಿಗೆ -೩೦, ಮಧುಮಲ್ಲ-೩೦, ಅರಕೇರಿ-೧೨, ಕುಂದೂರು-೧೨, ಮೂಗುಂದ-೧೨ ಎಂಬ ಚಿಕ್ಕ ವಿಭಾಗಗಳಿದ್ದವು ಇವುಗಳಲ್ಲಿ ಎಲ್ಲವುಗಳನ್ನು ಇಂದಿನ ಭೂಪಟದಲ್ಲಿ ಗುರುತಿಸುವುದಾಗಲೀ ಅವುಗಳ ಭೌಗೋಳಿಕ ವ್ಯಾಪ್ತಿಯನ್ನು ನಿರ್ಧರಿಸುವುದಾಗಲಿ

ಸಾಧ್ಯವಾಗುವುದಿಲ್ಲ. ಬೆಳಗುತ್ತಿ ಸಿಂದರ ಶಾಸನಗಳ ಸಂಖ್ಯೆ ಸಾಕಷ್ಟಿದ್ದರೂ ಅನೇಕ ಶಾಸನಗಳು ಒಡೆದು, ಸವೆದು ಹೋಗಿ ಪೂರ್ಣ ಮಾಹಿತಿ ದೊರೆಯುವುದಿಲ್ಲ. ಸ್ಥೂಲವಾಗಿ ಹೇಳಬೇಕೆಂದರೆ, ಬೆಳಗುತ್ತಿ ರಾಜ್ಯವು ಹಾವೇರಿ, ಹಿರೇಕೆರೂರು ತಾಲೂಕುಗಳು ಮತ್ತು ಸೊರಬ, ಶಿಕಾರಿಪುರ ಕೆಲ ಭಾಗಗಳು ಹೊನ್ನಾಳಿ ತಾಲೂಕುಗಳನ್ನು ಒಳಗೊಂಡಿತ್ತೆಂದು ಸ್ಥೂಲವಾಗಿ ಹೇಳಬಹುದು. ಈ ರಾಜ್ಯದಲ್ಲಿ ಅಡಕವಾದ ಶಾಸನಗಳಿಂದ ಲಭ್ಯವಾದ ಗ್ರಾಮಗಳನ್ನು ಸಾಧ್ಯವಿದ್ದಲ್ಲಿ ಇಂದಿನ ಹೆಸರುಗಳನ್ನು ಸೂಚಿಸಿ ಅಕಾರಾದಿಯಾಗಿ ಈ ಕೆಳಗೆ ಕೊಡಲಾಗಿದೆ.

| | ಊರಿನ ಹೆಸರುಗಳು | ಇಂದಿನ ಹೆಸರು | ತಾಲೂಕ | ಉಲ್ಲೇಖಗಳು<br>ಎಪಿಗ್ರಾಫಿಯಾ ಕರ್ನಾಟಿಕಾ ಸಂ.೭ ರಲ್ಲಿನ |
|---|---|---|---|---|
| ೧) | ಅರಕೇರಿ | ಅರಕೇರಿ | ಹೊನ್ನಾಳಿ | ಎಚ್.ಎಲ್–೯೮ |
| ೨) | ಉಗುರೆ | ಉಗುರೆ | ಹೊನ್ನಾಳಿ | ಎಚ್.ಎಲ್, ೭ |
| ೩) | ಉಚ್ಚಂಗಿ | ಉಚ್ಚಂಗಿ | ಹೊನ್ನಾಳಿ | ಎಚ್.ಎಲ್, ೨೦ |
| ೪) | ಎಡಮಲೆ | ಎಡಮಲೆ | ಹೊನ್ನಾಳಿ | ಎಚ್.ಎಲ್, ೨೦ |
| ೫) | ಎಡವಟ್ಟೆ | ಎಡವಟ್ಟೆ | | ಕರ್ನಾಟಕ ಇನ್ಸ್‌ಸ್ಕ್ರಿಪ್ಷನ್ಸ ಸಂ. ೬, ಶಾ.ಸಂ. ೩೯ |
| ೬) | ಐವತ್ತಾರು ಬಾಡ | | ಹೊನ್ನಾಳಿ | ಎಚ್.ಎಲ್, ೭ |
| ೭) | ಕರ್ಹಾಟ | ಕರ್ಹಾಡ | ಮಹಾರಾಷ್ಟ್ರ | ಎಚ್.ಎಲ್, ೭ |
| ೮) | ಕೂಡಮಗೆ | ಕೂಡಮಗ್ಗಿ | ಹಿರೇಕೆರೂರು | ಎಚ್.ಎಲ್, ೨೦ |
| ೯) | ಕೂಡಲ | ಕೂಡಲ | ಹಾನಗಲ್ಲು | ಎಚ್.ಎಲ್, ೫೪ |
| ೧೦) | ಕುರುವ | ಕುರುವ | ಹೊನ್ನಾಳಿ | ಎಚ್.ಎಲ್, ೭ |
| ೧೧) | ಕೋಟೆಹಾಳ | ಕೋಟೆಹಾಳು | ಹೊನ್ನಾಳಿ | ಎಚ್.ಎಲ್, ೭ |

| | | | | |
|---|---|---|---|---|
| ೧೨) | ಕುರವರಬೇಗೂರು | ಕುರವರಬೇಗೂರು | ಹೊನ್ನಾಳಿ | ಎಚ್.ಎಲ್, ೭ |
| ೧೩) | ಕಭವಿ | ಕಭವಿ | ಹೊನ್ನಾಳಿ | ಎಸ್.ಕೆ, ೩೧೬ |
| ೧೪) | ಕುಂದೂರ | ಕುಂದೂರು | ಹಿರೇಕೆರೂರು | ಕೆ.ಇ. ಸಂ, ೬, ಶಾ.ಸಂ, ೧೨ |
| ೧೫) | ಕೊಳ್ಳಗನೂರು | ಕೊಳನೂರು | ಹೊನ್ನಾಳಿ | ಎಚ್.ಎಲ್, ೨೦ |
| ೧೬) | ಕುಂಮಶಿ | ಕುಂಮಶಿ | ಹೊನ್ನಾಳಿ | ಎಚ್.ಎಲ್, ೨೦ |
| ೧೭) | ಕುಳಹಳ್ಳಿ | ಕುಳ್ಳೆಹಳ್ಳಿ | ಹೊನ್ನಾಳಿ | ಎಚ್.ಎಲ್, ೭ |
| ೧೮) | ಕೊಡಿಕೊಪ್ಪ | ಕೊಡಿಕೊಪ್ಪ | ಹೊನ್ನಾಳಿ | ಎಚ್.ಎಲ್, ೭ |
| ೧೯) | ಖಂಡೆಬಾಗೂರ | ಖಂಡೆಬಾಗೂರ | ಹಿರೇಕೆರೂರು | ಕೆ.ಇ. ಸಂ, ೪, ಶಾ.ಸಂ, ೧೧ |
| ೨೦) | ಗುತ್ತನಹಳ್ಳಿ | ಗುತ್ತನಹಳ್ಳಿ | | ಎಚ್.ಎಲ್, ೪೯ |
| ೨೧) | ಜಿಡ್ಡುಳುಗೆ | ಜಿಡ್ಡುಳುಗೆ | | ಎಚ್.ಎಲ್, ೨೦ |
| ೨೨) | ನೆಲವತ್ತಿ | ನೆಲಹೊನ್ನೆ | ಹೊನ್ನಾಳಿ | ಎಚ್.ಎಲ್, ೨೦ |
| ೨೩) | ನೆಮತ್ತಿ | ನ್ಯಾಮತಿ | ಹೊನ್ನಾಳಿ | ಎಚ್.ಎಲ್, ೨೦ |
| ೨೪) | ನರಿಯಂಗಳಗೆ | ನರಿಯಳಗೆ | | ಎಚ್.ಎಲ್, ೨೬ |
| ೨೫) | ನಿಡನೇಗಿಲು | ನೀಡನೇಗಿಲು | ಹಿರೇಕೆರೂರು | ಕೆ.ಇ. ಸಂ, ೪, ಶಾ.ಸಂ, ೧೩ |
| ೨೬) | ನೂರರ ಬಾಳ (ನೂರಂಬಾಳ) | | ಹಿರೇಕೆರೂರು | ಕೆ.ಇ. ಸಂ, ೬, ಶಾ.ಸಂ, ೨೫ |

| | | | | |
|---|---|---|---|---|
| ೨೭) | ನಾಗಾರ್ಜುನ | ನಾಗವಂದ | ಹಿರೇಕೆರೂರು | ಕೆ.ಇ. ಸಂ, ೬, ಶಾ.ಸಂ, ೨೫ |
| ೨೮) | ಪುರದ ಹಳ್ಳಿ | | ಹಿರೇಕೆರೂರು | ಕೆ.ಇ. ಸಂ, ೪, ಶಾ.ಸಂ, ೧೨ |
| ೨೯) | ಚಿಕ್ಕಬೇಗೂರು, ಹಿರಿಯಬೇಗೂರು | | | ಎಚ್.ಎಲ್, ೭ |
| ೩೦) | ಬಳ್ಳರೆ ಬಡತೂರು | ಬೀಡೂರ | ದಾವಣಗೆರೆ | ಎ.ಕ, ೧೧ ಡಿ.ಜಿ, ೩೩. |
| ೩೧) | ಬೆಳಗವತ್ತಿ | ಬೆಳಗುತ್ತಿ | ಹೊನ್ನಾಳಿ | ಎಚ್.ಎಲ್, ೨೦ |
| ೩೨) | ಬಳ್ಳಾಪೂರ | ಬಳ್ಳಾಪೂರ | ಹೊನ್ನಾಳಿ | ಎಚ್.ಎಲ್, ೨೦ |
| ೩೩) | ಬಳ್ಳವೆ | ಬೆಳವಗಿ | ಹಾವೇರಿ | ಕ.ಇ, ೪ ಶಾ.ಸಂ. ೧೨ |
| ೩೪) | ಭ್ರಾಂತಿ | ಭ್ರಾಂತಿ | | ಎ.ಕ, ೧೧ ಡಿ.ಜಿ, ೩೩. |
| ೩೫) | ಮೂಗುಂದ | ಮೂಗುಂದ | | ಎ.ಕ, ೧೧ ಡಿ.ಜಿ, ೪೩ |
| ೩೬) | ಮುದಿಯನಪಳ್ಳಿ | ಮನೋಜವೊಳಲ್ | | ಎ.ಕ, ೧೧ ಡಿ.ಜಿ, ೪೩ |
| ೩೭) | ಮೇದೂರು | ಮೇದೂರು | ಹಿರೆಕೆರೂರ | ಎಚ್.ಎಲ್, ೨೦ |
| ೩೮) | ಮಾದನಬಾಗಿ | ಮಾದನಭಾವಿ | ಹೊನ್ನಾಳಿ | ಎಚ್.ಎಲ್, ೭ |
| ೩೯) | ಮಂಡಲನಾಡು | ಮಂಡಳೂರು | ದಾವಣಗೇರೆ | ಡಿ.ಜಿ, ೪೩ |
| ೪೦) | ರಟ್ಟಪಲ್ಲಿ | ರಟ್ಟಿಹಳ್ಳಿ | ಹಿರೇಕೆರೂರು | ಕ.ಇ, ೪ ಶಾ.ಸಂ. ೧೨ |

| | | | | |
|---|---|---|---|---|
| ೪೧) | ಸಾಂತಳಿಗೆನಾಡು | ಸಾಂತಳಿಗೆನಾಡು | | ಕ.ಇ, ೪<br>ಶಾ.ಸಂ. ೧೩ |
| ೪೨) | ಸತ್ತಳಿಗೆ | ಸತಗಿಹಳ್ಳಿ | ಹಿರೇಕೆರೂರು | ಎಚ್.ಎಲ್, ೨೦ |
| ೪೩) | ಹಣಜ | ಹಣಜ | ಹೊನ್ನಾಳಿ | ಎಚ್.ಎಲ್, ೨೦ |
| ೪೪) | ಹತ್ತಿಯೂರು | ಹತ್ತೂರು | ಹೊನ್ನಾಳಿ | ಎಚ್.ಎಲ್, ೨೦ |
| ೪೫) | ಹಳ್ಳವೂರು | ಹಳ್ಳೂರ | ಹಿರೇಕೆರೂರು | ಎ.ಕ, ೧೧<br>ಡಿ.ಜಿ, ೪೩ |
| ೪೬) | ಹೆಬ್ಬಾಳ | ಹೆಬ್ಬಾಳ | ಹೊನ್ನಾಳಿ | ಎಚ್.ಎಲ್, ೭ |
| ೪೭) | ಹಣ್ಣಸಿಗಿ | | ಹೊನ್ನಾಳಿ | ಎಚ್.ಎಲ್, ೭ |
| ೪೮) | ಹಿರೆಕಬ್ಬಾರ | ಹಿರೆಕಬ್ಬಾರ | ಹಿರೇಕೆರೂರು | ಕ.ಇ.ಸಂ, ೪<br>ಶಾ.ಸಂ. ೧೩ |

## ಯಲಬುರ್ಗಿ ಸಿಂದರು

ಯಲಬುರ್ಗಿ ಸಿಂದರು ಸಾಂಪ್ರದಾಯಿಕವಾಗಿ ನಾಲ್ಕು ಪ್ರಮುಖ ಪ್ರದೇಶಗಳನ್ನು ಆನುವಂಶಿಕವಾಗಿ ಆಳಿದರು ಎಂದು ಹಲವಾರು ಶಾಸನಗಳು ಹೇಳುತ್ತವೆ. ಉದಾಹರಣೆಗೆ ಪೆರ್ಮಾಡಿದೇವನ ನರೇಗಲ್ಲ ಶಾಸನವು, ಕಿಸುಕಾಡುಎಪ್ಪತ್ತು ಕೆಳವಾಡಿಮೂನೂರು, ಬಾಗಡಗೆ ಎಪ್ಪತ್ತು, ನರೆಯಂಗಲ್ಲಹನ್ನೆರಡು ಇವುಗಳನ್ನು "ಯರಂಬರಿಗೆಯ ನೆಲೆವೀಡಿನೊಳ್ ಸುಖಸಂಕಥಾವಿನೋದದಿಂ" ಆಳುತ್ತಿದ್ದನು ಎಂದು ಹೇಳುತ್ತದೆ.[೧೧] ಕರವಿಡಿ-೩೦ ಸಹ ಇದೇ ಆಳಿಕೆಗೆ ಸೇರಿತ್ತೆಂಬ ಉಲ್ಲೇಖವಿದೆ. ಅದೇ ರೀತಿಯಾಗಿ ಈ ಸಾಮಂತನು ಪ್ರದೇಶಗಳನ್ನು ಆಳುತ್ತಿದ್ದನೆಂದು ಇನ್ನೂ ಹಲವಾರು ಶಾಸನಗಳು ಹೇಳುತ್ತವೆ. ಈ ಮನೆತನದ ಲಭ್ಯವಿದ್ದ ಎಲ್ಲ ಶಾಸನಗಳಲ್ಲಿ ಬರುವ ಪ್ರದೇಶಗಳ ಊರುಗಳ ಉಲ್ಲೇಖಗಳನ್ನು ಕ್ರೋಢೀಕರಿಸಿ ಯಲಬುರ್ಗಿ ಸಿಂದರ ಪ್ರದೇಶಗಳ ವ್ಯಾಪ್ತಿಯನ್ನು ಸ್ಥೂಲವಾಗಿ ನಿರ್ದೇಶಿಸಲು ಸಾಧ್ಯವಾಗುತ್ತದೆ.

ಕಿಸುಕಾಡು ಎಂಬ ಹೆಸರು ಅನ್ವರ್ಥಕವಾಗಿಯೇ ಇದೆ ಏಕೆಂದರೆ 'ಕಿಸು' ಎಂದರೆ ಕೆಂಪು ಕಿಸುಕಾಡು ಪ್ರಾಂತವು ವ್ಯಾಪಿಸಿದ ಪ್ರದೇಶ ಹೆಚ್ಚಾಗಿ ಕೆಂಪು ಭೂಮಿಯಿಂದ ಕೂಡಿದುದು. ಸಾಮಾನ್ಯವಾಗಿ ಒಕ್ಕುಲತನ ಭಾಷೆಯಲ್ಲಿ ಇದನ್ನು ಮಸಾರಿ ಭೂಮಿ ಎಂದು ಕರೆಯುತ್ತಾರೆ. ಕೆಂಪು ಮಣ್ಣೆ ಪ್ರಧಾನವಾದುದರಿಂದ ಕಿಸುಕಾಡು ಎಂದು ಹೆಸರು ಬಂದಿತು. ಕಿಸುಕಾಡು ಪ್ರಾಂತವು ಕುಂತಲ ದೇಶಕ್ಕೆ ಭೂಷಣವಿದ್ದಂತೆ ಎಂದು ಕೆಲವಡೆ ವರ್ಣಿತವಾಗಿದೆ. ಸಿಂದರು ಇದರ ಆಧಿಪತ್ಯವನ್ನು ಪಡೆಯುವುದಕ್ಕಿಂತ ಮೊದಲು ಕಿಸುಕಾಡು ವಿವಿಧ ಆಡಳಿತಗಳಲ್ಲಿ ಬೇರೆ ಬೇರೆ ಅಧಿಕಾರಿಗಳ ಅಧೀನವಾಗಿದ್ದಿತು. ಫ್ಲೀಟರವರು ಬಹಳ ಹಿಂದೆಯೇ ಈ ಪ್ರಾಂತದ ಇತಿಹಾಸ ಬರೆಯುತ್ತಾ ಇದರ ಪ್ರಾಚೀನತೆಯು ಕ್ರಿ.ಶ. ೬೧೦ ರ ವರೆಗೆ ಹೋಗುತ್ತದೆ ಎಂದು ಅಭಿಪ್ರಾಯಪಟ್ಟಿರುವರು. ಅವರೇ ತೋರಿಸಿದಂತೆ, ರಾಷ್ಟ್ರಕೂಟರ ಅಮೋಘವರ್ಷನು ತನ್ನ ಮಗಳಾದ ರೇವಕನಮ್ಮಡಿಯನ್ನು ಗಂಗ ೨ನೇ ಬೂತುಗನಿಗೆ ಮದುವೆ ಮಾಡಿಕೊಟ್ಟಾಗ ಕಿಸುಕಾಡು-೭೦ ಹಾಗೂ ಇತರ ಪ್ರಾಂತಗಳನ್ನು ಉಡುಗೊರೆಯಾಗಿ ಕೊಟ್ಟ ವಿಷಯವು ಸರ್ವವಿದಿತವಾಗಿದೆ. ರಾಷ್ಟ್ರಕೂಟರ ನಂತರ ಚಾಲುಕ್ಯ ಆಳಿಕೆ ಆರಂಭವಾದ ಮೇಲೆ ೫ನೇ ವಿಕ್ರಮಾದಿತ್ಯನ ತಂಗಿಯಾದ ಅಕ್ಕಾದೇವಿಯು ಈ ಪ್ರಾಂತವನ್ನು ಆಳುತ್ತಿದ್ದ ಬಗ್ಗೆ ಶಾಸನದಲ್ಲಿ ಉಲ್ಲೇಖವಿದೆ.[೧೨]

ಕಿಸುಕಾಡು-೭೦ ಸಿಂದರ ಆಳಿಕೆಗೆ ಒಳಪಡುವ ಮೊದಲು ಕಿಸುವೊಳಲ್ ಅಂದರೆ ಇಂದಿನ ಪಟ್ಟದಕಲ್ಲು ಅದರ ರಾಜಧಾನಿಯಾಗಿತ್ತು. ಸಿಂದರ ಕಾಲಕ್ಕೆ ಅದು ಯರಂಬರಿಗೆ ಅಥವಾ ಈಗಿನ ಗಂಗಾವತಿ ತಾಲೂಕಿನ ಮುಖ್ಯಸ್ಥಳವಾದ ಯಲಬುರ್ಗಿಗೆ ಸ್ಥಳಾಂತರಿಸಲ್ಪಟ್ಟಿರಬೇಕು. ಪಟ್ಟದಕಲ್ಲು ಕಿಸುಕಾಡಿನ ಭಾಗವಾಗಿಯೇ ಉಳಿಯಿತು. ೨ನೇ ಚಾವುಂಡನ ಮಗ ಆಚಿದೇವನು ತನ್ನ ತಾಯಿ ದೇಮಲದೇವಿಯೊಡನೆ ಈ ಪಟ್ಟಣವನ್ನು ಕುಮಾರವೃತ್ತಿಯೆಂದು ಆಳುತ್ತಿದ್ದನೆಂದು ಪಟ್ಟದಕಲ್ಲಿನ ಶಾಸನ ಹೇಳುತ್ತದೆ.[೧೩] ಕುಂತಳದೇಶದಲ್ಲಿಯ ಸುಂದರ ಪ್ರದೇಶವಾದ ಕಿಸುಕಾಡಿನ ಮೇಲಿನ ರತ್ನಪಟ್ಟಿಕೆಯಂತೆ ಈ ಕಿಸುವೊಳಲ್ ಶೋಭಿಸುತ್ತದೆ ಎಂದು ಶಾಸನದ ಕವಿ ವರ್ಣಿಸಿದ್ದಾನೆ. ಜೊತೆಗೆ ಮಲಹರಿ ನದಿಯನ್ನೂ ಹೆಸರಿಸಿದ್ದಾನೆ. ಈ ಮಲಹರಿ ನದಿಯು ಈಗಿನ ಮಲಾಪಹಾರಿ ಅಥವಾ ಮಲಪ್ರಹಾರಿ (ಮಲಪ್ರಭಾ) ಎಂಬ ಹೆಸರಿನಿಂದ ಪಟ್ಟದಕಲ್ಲಿನ ಪಕ್ಕದಲ್ಲಿಯೇ ಹರಿಯುತ್ತಿದೆ.[೧೪] ಈ ಶಾಸನದಲ್ಲಿ ದಾನ ಮಾಡಿದ ಮೇರೆಗಳನ್ನು ಹೇಳುವಾಗ 'ಪರುವಳಬೆಟ್ಟ' ಎಂಬ ಉಲ್ಲೇಖವಿದೆ. ಇದು ಪಟ್ಟದಕಲ್ಲಿನ ಬೆಟ್ಟಗಳ ಸಾಲುಗಳು ಇದ್ದಿರಬಹುದು. ಐಯ್ಯಾವೊಳೆಯ ಹೊಲವೂ ಒಂದು ಮೇರೆಯಾಗಿದ್ದಿತು. ಈ ಐಯ್ಯಾವೊಳೆಯು ಪಟ್ಟದಕಲ್ಲಿನ

ಸಮೀಪದಲ್ಲಿರುವ ಐಹೊಳೆ. ಅದು ಸಹ ಕಿಸುಕಾಡಿನ ಭಾಗವಾಗಿದ್ದಿತು. ಬಾದಾಮಿ ಚಾಲುಕ್ಯರ ಕಾಲದ ವಾಸ್ತುಶಿಲ್ಪದ ಶ್ರೇಷ್ಠ ನೆಲೆಯೆಂದು ಜಗತ್ಪಸಿದ್ಧವಾಗಿದೆ. ಇನ್ನೊಂದು ಮೇರೆ ಪಿರಿಯನರೇಯಗಲ್ಲು ಅಥವಾ ಹಿರಿಯನರೇಯಗಲ್ಲು, ಇದು ಇಂದಿನ ರೋಣ ತಾಲೂಕಿನ ನರೇಗಲ್ಲು. ಈ ನರೇಗಲ್ಲು, ನರೆಯಂಗಲ್ಲ-೧೨ ಚಿಕ್ಕ ಪ್ರಾಂತದ ಮುಖ್ಯ ಸ್ಥಳ. ಈ ನರೆಯಂಗಲ್ಲ-೧೨ ಸಿಂದರ ಅಧೀನದಲ್ಲಿದ್ದರೂ, ಅದು ಕಿಸುಕಾಡಿನಲ್ಲಿ ಸೇರದೇ, ಪ್ರತ್ಯೇಕವಾದ ಪ್ರಾಂತವಾಗಿ ನೆರೆಯ ಪ್ರದೇಶವಾದ ಬೆಳ್ವೊಲ್ ಮೂನೂರು ಇದ್ದಿತೆಂದು ತೋರುತ್ತದೆ. ಆದರೆ ಇದರ ಸಮೀಪದಲ್ಲಿಯೇ ಇದ್ದಿರಬಹುದಾದ ಕಿರಿಯನರೆಯಂಗಲ್ಲ ಅಥವಾ ಚಿಕ್ಕನರೆಯಂಗಲ್ಲ ಕಿಸುಕಾಡು ಪ್ರಾಂತದಲ್ಲಿ ಇದ್ದಿತೆಂದು ಕೊಡಿಕೊಪ್ಪದ ಶಾಸನದಿಂದ ತೋರುತ್ತದೆ.[೧೫] ಕೊಡಿಕೊಪ್ಪದ ಇನ್ನೊಂದು ಶಾಸನದಲ್ಲಿ ಸಹ ಕಿರುನರೆಯಂಗಲ್ಲು ಕಿಸುಕಾಡು-೭೦ರ ಬಳಿಯ 'ಬಾಡಂ' ಎಂದು ಉಲ್ಲೇಖಿಸಿದೆ. ಉಮಚಗಿ ಎಂಬ ಗ್ರಾಮವೂ ಕಿಸುಕಾಡಿನಲ್ಲಿದ್ದಿತು. ಕುಕ್ಕನೂರು ಅಥವಾ ಇಂದಿನ ಕುಕನೂರು ಯಲಬುರ್ಗಿ ತಾಲುಕಿನಲ್ಲಿದೆ. ಇದು ಕಿಸುಕಾಡಿನ ನೆರೆಯಲ್ಲಿಯೇ ಇದ್ದಿತೇನೋ ಎಂಬಂತೆ ಕೊಡಿಕೊಪ್ಪದ ಶಾಸನದ ಮೇರೆಗಳನ್ನು ಹೇಳುವಾಗ ನಮೂದಿತವಾಗಿದೆ. ವಿಕ್ರಮಪುರ ಅಥವಾ ಇಂದಿನ ಹುನಗುಂದ ತಾಲೂಕಿನಲ್ಲಿಯ ಅರಸೀಬೀಡಿ ಸಹ ಇದೇ ಪ್ರಾಂತದಲ್ಲಿದ್ದಿತು. ಉಂಚಗೆರೆ, ರಾಜೂರು, ದಿಂಡೂರು ಇವು ಕಿಸುಕಾಡು ಪ್ರಾಂತದಲ್ಲಿದ್ದವು. ಇವು ಈಗ ರೋಣ ತಾಲೂಕಿನಲ್ಲಿ ಉಣಚಗೆರಿ, ರಾಜೂರು, ದಿಂಡೂರು ಎಂಬ ಹೆಸರಿನಿಂದ ಇವೆ. ಈ ಪ್ರಾಂತದಲ್ಲಿಯ ಇನ್ನೊಂದು ಗ್ರಾಮ ನಿಡಗುಂದಿಯು ಅಗ್ರಹಾರ ಚೂಡಾರತ್ನ ಎಂದು ಹೆಸರಾಗಿದ್ದಿತು ಮತ್ತು ಅದು ಸಿಂದ ಬಿಜ್ಜಳದೇವನ ಅಧಿಕಾರಿಯಾಗಿದ್ದ ಮಾಧವದಂಡನಾಥನ ಜನ್ಮಭೂಮಿಯು ಆಗಿದ್ದಿತು.[೧೬] ನಿಡಗುಂದಿಯು ಅದೇ ಹೆಸರಿನಿಂದ ರೋಣ ತಾಲೂಕಿನಲ್ಲಿದೆ.[೧೭] ಸಿಂದರ ಅಧೀನದಲ್ಲಿ ಮೇಲೆ ಹೇಳಲಾದ ಪ್ರಾಂತಗಳಲ್ಲದೇ ಕರವೀಡಿ-೩೦, ಹಂಗರಗೆ-೧೨ ಎಂಬ ಚಿಕ್ಕ ಆಡಳಿತ ಪ್ರದೇಶಗಳು ಸಹ ಇದ್ದವು. ಹಂಗರಗೆ-೧೨ ರ ಮುಖ್ಯಸ್ಥಳವಾದ ಹಂಗರಗೆಯು ಇಂದಿನ ಬಾದಾಮಿ ತಾಲೂಕಿನ ಅದೇ ಹೆಸರಿನ ಗ್ರಾಮವು ಈ ಚಿಕ್ಕ ಆಡಳಿತ ವಿಭಾಗದಲ್ಲಿ ನುಗ್ಗಿವಾಡ ಎಂಬ ಗ್ರಾಮವಿದ್ದು, ಅದನ್ನು ಗುರುತಿಸುವುದು ಸಾಧ್ಯವಾಗಿಲ್ಲ. ಕರವೀಡಿ-೩೦ ರ ಮುಖ್ಯಸ್ಥಳವಾದ ಕರವೀಡಿಯು ಈಗಿನ ರೋಣ ತಾಲೂಕಿನ ಕರಮಡಿ ಎಂಬ ಗ್ರಾಮ.

ಸಿಂದರವಲ್ಲದ ಕೆಲವು ಶಾಸನಗಳಲ್ಲಿ ಕಿಸುಕಾಡು-೭೦ರ ಮತ್ತು ಅದರಲ್ಲಿ ಸೇರ್ಪಡೆಯಾದ ಕೆಲವು ಊರುಗಳು ಸಿಗುತ್ತವೆ. ನಾವು ಅವುಗಳನ್ನು ಇಲ್ಲಿ ಪರಿಗಣಿಸಿಲ್ಲ.

ಒಟ್ಟಿನಲ್ಲಿ ಕಿಸುಕಾಡು-೭೦, ಏಪ್ಪತ್ತು ಗ್ರಾಮಗಳ ಒಂದು ಚಿಕ್ಕ ವಿಭಾಗ, ಅದು ಇಂದಿನ ಬಾಗಲಕೋಟೆ ಜಿಲ್ಲೆಯ ಹುನಗುಂದ ತಾಲೂಕಿನ ಕೆಲ ಭಾಗ ಮತ್ತು ಅದಕ್ಕೆ ಹೊಂದಿದ ಬಾದಾಮಿ ತಾಲೂಕಿನ ಐಹೊಳೆ, ಪಟ್ಟದಕಲ್ಲು ಒಳಗೊಂಡ ಭಾಗಗಳ ಹಾಗೂ ಗದಗ ಜಿಲ್ಲೆಯ ಬಾದಾಮಿ ತಾಲೂಕಿಗೆ ಹೊಂದಿದ ಕೆಲ ಭಾಗ ಇವುಗಳನ್ನು ಒಳಗೊಂಡಿದ್ದಿತ್ತೆಂದು ಸ್ಥೂಲವಾಗಿ ಹೇಳಬಹುದು. ತರ್ದವಾಡಿ-೧೦೦೦ ಎಂಬ ಪ್ರಾಂತ ಈಗಿನ ವಿಜಾಪುರ ಜಿಲ್ಲೆಯ ಇಂಡಿ ತಾಲೂಕಿನ ಭಾಗವಾಗಿದ್ದು, ಈ ಪ್ರಾಂತವು, ಈಗಿನ ಬಿಜಾಪೂರ ಜಿಲ್ಲೆಯ ಇಂಡಿ ತಾಲೂಕಿನ ತದ್ದೇವಾಡಿಯ ಮುಖ್ಯಸ್ಥಳ. ತದ್ದೇವಾಡಿ-೧೦೦೦ ಎಂಬ ತರ್ದವಾಡಿ ದೊಡ್ಡ ವಿಭಾಗದ ಒಂದು ಭಾಗವಾಗಿರಬಹುದಾದ ಸಾಧ್ಯತೆಯಿದೆ.[೧೮] ಆದರೆ ಇದು ಸರಿಯಲ್ಲ. ಈ ವಿಭಾಗಗಳು ಒಂದಕ್ಕೊಂದು ಹತ್ತಿಕೊಂಡಿರುವುದರಿಂದ ಶಾಸನಗಳಲ್ಲಿ ನಮೂದಿಸುವಾಗ ಸ್ವಲ್ಪ ಸ್ಥಾನಪಲ್ಲಟವಾಗುವ ಸಾಧ್ಯತೆಯಿದೆ ಎಂಬುದನ್ನು ಗಮನಿಸಬೇಕು.

ಈ ಸಿಂದರ ಅಧೀನದಲ್ಲಿದ್ದ ಇನ್ನೆರಡು ಆಡಳಿತ ಪ್ರದೇಶಗಳೆಂದರೆ ಬಾಗಡಗೆ-೭೦ ಮತ್ತು ಕೆಳವಡಿ-೩೦೦. ಬಾಗಡಗೆ-೭೦ರ ಮುಖ್ಯಸ್ಥಳವು ಇಂದಿನ ಬಾಗಲಕೋಟೆ ಎಂಬ ವಿಷಯವನ್ನು ಮೇಲೆ ಈ ಮೊದಲೇ ಪ್ರಸ್ತಾಪಿಸಿದ್ದೇವೆ. ೩೦೦ ಗ್ರಾಮಗಳು ಈ ಪ್ರದೇಶದಲ್ಲಿ ಸೇರ್ಪಡೆಯಾಗಿದ್ದವು. ಈ ಕೆಳವಡಿಯಲ್ಲಿನ ಗ್ರಾಮಗಳ ಬಗ್ಗೆ ಮಾಹಿತಿ ದೊರೆಯುವುದಿಲ್ಲ. ರಾಷ್ಟ್ರಕೂಟರ ಅಮೋಘವರ್ಷನು ತನ್ನ ಮಗಳ ಮದುವೆ ಉಡುಗೊರೆಯಾಗಿ ಕೊಟ್ಟ ಪ್ರಾಂತಗಳಲ್ಲಿ, ಬಾಗಡಗೆಯೂ ಒಂದಾಗಿದ್ದಿತು.[೧೯] ಸದ್ಯದ ತಿಳುವಳಿಕೆಯಂತೆ ಬಾಗಲಕೋಟೆಯ ಮತ್ತು ನೆರೆಯ ವಿಜಾಪುರ ಜಿಲ್ಲೆಯ ಕೆಲವು ಭಾಗಗಳನ್ನು ಒಳಗೊಂಡಿದ್ದಿತೆಂದು ಸ್ಥೂಲವಾಗಿ ಹೇಳಬಹುದು. ಕೆಳವಡಿ-೩೦೦ ರ ಬಗ್ಗೆಯೂ ಹೆಚ್ಚಿನ ಮಾಹಿತಿ ದೊರೆಯುವುದಿಲ್ಲ. ಮೂನ್ನೂರು ಗ್ರಾಮಗಳ ಈ ಆಡಳಿತ ಪ್ರದೇಶದ ಮುಖ್ಯಸ್ಥಳವಾದ ಕೆಳವಡಿಯು ಈಗ ಕೆಲವಡಿ ಎಂಬ ಹೆಸರಿನಿಂದ ಬಾದಾಮಿ ತಾಲೂಕಿನಲ್ಲಿದೆ. ಇದು ಬಾದಾಮಿ ಉತ್ತರದ ಅಂಚಿನಲ್ಲಿ ಬಾಗಲಕೋಟೆ ತಾಲೂಕಿಗೆ ಹತ್ತಿರದಲ್ಲಿದೆ. ಆದ್ದರಿಂದ ಈ ಪ್ರದೇಶವು ಬಾದಾಮಿ ತಾಲೂಕಿನ ಮಧ್ಯ ಮತ್ತು ಉತ್ತರದ ಭಾಗ ಅದಕ್ಕೆ ಹೊಂದಿದ ಬಾಗಲಕೋಟೆ ತಾಲೂಕಿನ ಕೆಲವು ಭಾಗಗಳನ್ನು ಒಳಗೊಂಡಿದ್ದಿತೆಂದು ಹೇಳಬಹುದು. ಬಾಗಡಗೆಯ-೭೦ ಈ ವಿಭಾಗದ ಭಾಗವಾಗಿರುವ ಸಾಧ್ಯತೆಯನ್ನು ಅಲ್ಲಗಳೆಯವಂತಿಲ್ಲ.

## ಕುರುಗೋಡಿನ ಸಿಂದರು

### ಬಲ್ಲಕುಂದೆ-೩೦೦

ಕುರುಗೋಡು ಸಿಂದರ ಆಳಿಕೆಯಲ್ಲಿದ್ದ ಪ್ರಮುಖ ಪ್ರದೇಶವೆಂದರೆ ಬಲ್ಲಕುಂದೆ ಮೂನೂರು ಅಥವಾ ಬಲ್ಲಕುಂದೆ ಗ್ರಾಮಗಳನ್ನು ಮುಖ್ಯವಾಗಿ ಇಟ್ಟುಕೊಂಡು ಸುತ್ತಲಿನ ಮೂನ್ನೂರು ಗ್ರಾಮಗಳನ್ನೊಳಗೊಂಡ ಆ ಪ್ರದೇಶವು. ಯಾವುದೊಂದು ಮುಖ್ಯಸ್ಥಳವನ್ನು ಬಳಸಿಕೊಂಡು ಆ ಪ್ರದೇಶದ ಹೆಸರನ್ನಾಗಿ ಇಡುವುದು ಅಂದಿನ ಪದ್ಧತಿಯಾಗಿದ್ದಿತು. ಉದಾಹರಣೆಗೆ ಕೋಗಳಿ-೫೦೦, ಪುರುಗೆರೆ-೩೦೦, ಬೆಳ್ವೊಲ-೩೦೦, ಬನವಾಸಿ-೧೨೦೦೦ ಇತ್ಯಾದಿ. ಪ್ರಸ್ತುತ ಬಲ್ಲಕುಂದೆಯು ಇಂದಿನ ಬಳ್ಳಾರಿ ಜಿಲ್ಲೆಯ ಸಿರಗುಪ್ಪ ತಾಲೂಕಿನ ಬಲ್ಲಕುಂದೆ ಗ್ರಾಮ, ಈ ಬಲ್ಲಕುಂದೆ ಪ್ರದೇಶ ನೊಳಂಬವಾಡಿ-೩೨೦೦ ಎಂಬ ವಿಶಾಲವಾದ ಈ ಪ್ರದೇಶದ ಒಂದು ಭಾಗವಾಗಿದ್ದಿತು. ನೊಳಂಬಳಗೆ-೧೦೦೦ ಎಂಬ ಚಿಕ್ಕ ಪ್ರಾಂತ ನೊಳಂಬವಾಡಿ-೩೨೦೦೦ ವಾಗಿ ಬೆಳೆದು ಆಡಳಿತ ಬದಲಾವಣೆಗಳೊಂದಿಗೆ ಪ್ರಾದೇಶಿಕ ಬದಲಾವಣೆ ಹೇಗೆ ಆಗುತ್ತಿತ್ತು ಎಂಬುದಕ್ಕೆ ಉತ್ತಮ ಉದಾಹರಣೆ. ರಾಷ್ಟ್ರಕೂಟರ ಕಾಲದಿಂದ ಬೆಳೆಯುತ್ತಾ ಬಂದು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ನೊಳಂಬವಾಡಿ-೩೨೦೦೦ ವಾಗಿ ಇಂದಿನ ಚಿತ್ರದುರ್ಗ ಜಿಲ್ಲೆಯ ತುಮಕೂರು, ಕೋಲಾರ ಜಿಲ್ಲೆಗಳ ಭಾಗಗಳನ್ನು ಮತ್ತು ಹೆಚ್ಚು ಕಡಿಮೆ ಇಡೀ ಬಳ್ಳಾರಿ ಜಿಲ್ಲೆ ಅಲ್ಲದೇ ಅನಂತಪುರ, ಚಿತ್ತೂರ ಜಿಲ್ಲೆಗಳ ಭಾಗಗಳನ್ನು ಒಳಗೊಂಡು ತಮಿಳುನಾಡಿನ ಧರ್ಮಪುರಂ ಜಿಲ್ಲೆಯ ಅಂಚಿನವರೆಗೆ ಹಬ್ಬಿದ್ದಿತು[೨೦] ಬಾಗಳಿ-೫೦೦, ಕೋಗಳಿ-೫೦೦, ಸಿಂದವಾಡಿ-೧೦೦೦ ಮುಂತಾದ ಉಪಪ್ರದೇಶಗಳನ್ನು ಅದು ಒಳಗೊಂಡಿತ್ತು. ಬಲ್ಲಕುಂದೆ-೩೦೦, ಸಿಂದವಾಡಿಯ ಭಾಗವಾಗಿತ್ತು ಎಂದು ಫ್ಲೀಟರು ಪರಿಗಣಿಸಿದ್ದಾರೆ.[೨೧] ಬಲ್ಲಕುಂದೆ-೩೦೦, ಸಿಂದವಾಡಿಯ ಭಾಗವಾಗಿತ್ತೋ ಇಲ್ಲವೋ ಎಂದು ಖಚಿತವಾಗಿ ಹೇಳಲ್ಲಿಕ್ಕಾಗದು. ಇವೆರಡೂ ಪ್ರದೇಶಗಳು ನೊಳಂಬವಾಡಿಯ ಭಾಗವಾಗಿದ್ದವು ಎಂಬುದು ಮಾತ್ರ ಸ್ಪಷ್ಟವಾಗಿದೆ.

ಬಲ್ಲಕುಂದೆ ಪ್ರಾಂತವು ಆರಂಭದಿಂದ ನೊಳಂಬ ಪಲ್ಲವರ ಅಧೀನವಾಗಿಯೇ ಇದ್ದಿದಿತು. ಈ ಪ್ರಾಂತವನ್ನು ಸಿಂದರಿಗಿಂತ ಮೊದಲು ಬೇರೆ ಬೇರೆಯವರು ಆಳುತ್ತಿದ್ದರು ಎಂದು ಹೇಳಲು ಸಾಕಷ್ಟು ಆಧಾರಗಳಿವೆ. ೬ನೇ ವಿಕ್ರಮಾದಿತ್ಯನ ರಾಣಿಯಾದ ಪಿರಿಯ ಕೇತಲದೇವಿಯು ಈ ಪ್ರದೇಶದ ಉಪವಿಭಾಗವಾದ ತೆಕ್ಕಕಲ್ಲು-೧೨ ರೊಳಗಿನ ಸಿರಗುಪ್ಪಿಯ ಮತ್ತು ಕೊಳಲೂರು ಎಂಬ ಗ್ರಾಮವನ್ನು ಆಳುತ್ತಿದ್ದಳೆಂಬ ರೋಚಕ ಉದಾಹರಣೆ ಶಾಸನದಲ್ಲಿದೆ. ಶಾಸನದ ಕಾಲ ಕ್ರಿ.ಶ. ೧೦೯೨.[೨೨] ಬಲ್ಲಕುಂದೆ ಪ್ರಾಂತವು ನಿಜವಾಗಿಯು ಕುರುಗೋಡಿನ ಸಿಂದರ ಕೈಗೆ ಬಂದಿದ್ದು ಇಮ್ಮಡಿ ಭೀಮ ಹಾಗೂ ರಾಚಮಲ್ಲನ ಕಾಲದಲ್ಲಿ ಇವರಿಬ್ಬರೂ ಕೂಡಿಯೇ ಬಲ್ಲಕುಂದೆಯನ್ನು ಆಳುತ್ತಿದ್ದರೆಂದು ಕ್ರಿ.ಶ. ೧೧೪೭ರ ಕೋಳೂರಿನ ಶಾಸನ ಹೇಳುತ್ತದೆ.[೨೩] ಇಮ್ಮಡಿ ಭೀಮನು ಬಲ್ಲಕುಂದೆ ನಾಡಿಗೆ ಅಧಿನಾಥ ಎಂದು ಹೇಳಿ ("ಆ ನಾಡಿಂಗದಿನಾತಂ ...... ಸಿಂದ ಕುಲತಿಲಕನಿರ್ಮಡಿ ಭೀಮಂ") ಭೀಮ ಮತ್ತು ರಾಚಮಲ್ಲರು ಇದನ್ನು ಆಳುತ್ತಿದ್ದರು ಎಂದು ಈ ಶಾಸನದಲ್ಲಿದೆ. (ಭೀಮ, ನೃಪ ರಾಚಮಲ್ಲರ್ತಾಮುತ್ಸವದಿಂ ಧರಿತ್ರಿಯಂ ಪಾಳಿಸುತಂ). ಈ ನಾಡಿಗೆ ಮುಖ್ಯಸ್ಥಳವಾದ ಬಲ್ಲಕುಂದೆಯಿಂದ ಈ ಹೆಸರು ಬಂದರೂ ಹೆಚ್ಚು ಪ್ರಸಿದ್ಧಿಯನ್ನು ಪಡೆದ ಕುರುಗೋಡು ಇದರ ರಾಜಧಾನಿ ಎಂದು ವರ್ಣಿಸಲ್ಪಟ್ಟಿದೆ. (ಆ ನಾಳ್ಗೆ ರಾಜಧಾನಿ ...... ಕುರುಗೋಡೆಸಗು).

ಈ ಮೂನ್ನೂರು ಗ್ರಾಮಗಳ ಪ್ರದೇಶವು ಆಡಳಿತ ಅನುಕೂಲತೆಗೋಸ್ಕರ ಹಲವಾರು ಉಪವಿಭಾಗಗಳಾಗಿ ವಿಭಜಿಸಲ್ಪಟ್ಟಿದ್ದಿತು. ಅಂತಹ ಕೆಲವು ಉಪವಿಭಾಗಗಳು ಶಾಸನಗಳಲ್ಲಿ ಉಕ್ತವಾಗಿವೆ.

ದೊರವಡಿನಾಡು ಅಥವಾ ದೊರವಡಿ-೭೦ ಎಂಬುದು ಇಂಥ ಒಂದು ವಿಭಾಗ. ಈ ದೊರವಡಿಯನ್ನು ಇಂದಿನ ಬಳ್ಳಾರಿ ಸಮೀಪದ ದರೋಜಿ ಎಂದು ಗುರುತಿಸಲಾಗಿದೆ.[೨೪] ವಿಶೇಷವೆಂದರೆ ಪಂಪಾ ಕ್ಷೇತ್ರ ಅಥವಾ ಇಂದಿನ ಹಂಪೆ ಈ ವಿಭಾಗದಲ್ಲಿ ಒಂದು ಗ್ರಾಮವಾಗಿದ್ದಿತು.[೨೫] ಹಂಪೆಯ ಇದನ್ನು ಶಾಸನದಲ್ಲಿ ವಿರುಪಾಕ್ಷತೀರ್ಥ ಎಂದು ಕರೆಯಲಾಗಿದೆ. ಆರುಂಬಾಡ ಅಥವಾ ಆರು ಗ್ರಾಮಗಳ ಒಂದು ಚಿಕ್ಕ ಆಡಳಿತ ವಿಭಾಗವು. ಈ ದರೋಜಿಯು ಆಡಳಿತ ವಿಭಾಗವಾಗಿದ್ದಿತು. ಈ ವಿಷಯವನ್ನು ತಿಳಿಸುವ ಶಾಸನವಿರುವ ಕುರಿಕೊಪ್ಪೆ ಗ್ರಾಮವು ಒಂದು ಆಡಳಿತ ಭಾಗವಾಗಿತ್ತು.[೨೬] ನಲ್ವಡಿ-೧೨ ಎಂಬುದು ಇನ್ನೊಂದು ಉಪವಿಭಾಗವಾಗಿದ್ದಿತೆಂದು ಹಿರೇಮಠ ಚನ್ನಬಸವಯ್ಯ ಹೇಳುತ್ತಾರೆ.[೨೭] ತೆಕ್ಕಕಲ್ಲು-೧೨ ಎಂಬುದು ಸಿರಗುಪ್ಪೆ ತಾಲೂಕಿನ ತೆಕ್ಕಲಕೋಟೆ, ಈ ಬಲ್ಲಕುಂದೆಯ ಉಪವಿಭಾಗದಲ್ಲಿ[೨೮] ಶಿರಗುಪ್ಪೆ,

ಕೊಳಗನೂರು ಇಂದಿನ ಕೊಳನೂರು ಮತ್ತು ಇನ್ನೊಂದು ಗ್ರಾಮವನ್ನು ೬ನೇ ವಿಕ್ರಮಾದಿತ್ಯನ ಹೆಂಡತಿಯಾದ ಪಿರಿಯಕೇತಲದೇವಿ ಆಳುತ್ತಿದ್ದಳೆಂದು ಈ ಮೊದಲು ಉಲ್ಲೇಖಿಸಿದ್ದೇವೆ.

ಶಾಸನಗಳಿಂದ ದೊರೆಯುವ ಅಲ್ಪಸ್ವಲ್ಪ ಮಾಹಿತಿಗಳಿಂದ ಈ ವಿಭಾಗದ ಮೇರೆಗಳನ್ನು ಖಚಿತವಾಗಿ ನಿರ್ಧರಿಸಲಾಗದು. ಅದು ಸ್ಥೂಲವಾಗಿ ಶಿರಗುಪ್ಪೆ, ಬಳ್ಳಾರಿ, ಸೊಂಡೂರ, ಹೊಸಪೇಟೆಯ ಹಂಪೆ ಪ್ರದೇಶವನ್ನು ಒಳಗೊಂಡಿದ್ದಿತು.

ಶಾಸನಗಳ ಆಧಾರದ ಮೇಲೆ ಈ ಕೆಳಗಿನ ಬಲ್ಲಕುಂದೆ ೩೦೦ ವಿಭಾಗದ ಗ್ರಾಮಗಳ ಪಟ್ಟಿಯನ್ನು ಅಕಾರಾದಿಯಾಗಿ ಈ ಕೆಳಗೆ ನೀಡಲಾಗಿದೆ.

| **ಹಳ್ಳಿಗಳು** | **ಈಗಿನ ಹೆಸರು** | **ತಾಲೂಕ** | **ಉಲ್ಲೇಖಗಳು** |
|---|---|---|---|
| ೧) ಅರಕೆರೆ | ಅರಕೆರೆ | ಬಳ್ಳಾರಿ | ಕನ್ನಡ ವಿ.ವಿ. ಶಾ.ಸಂ.೧, ಶಾ.ನಂ. ೧೮ |
| ೨) ಅರಳೆಯಹಾಳು | ಅರಳಿಗನೂರು | ಸಿರಗುಪ್ಪೆ | ಅದೇ |
| ೩) ಅಂಡಗೆರೆ | ಅಂಡಗೆರೆ | – | ಎಸ್.ಐ.ಐ. ೯, ಭಾಗ ೧, ೨೪೯ |
| ೪) ಆದವಾನಿ | ಅದೋನಿ | ಅನಂತಪುರ | ಅದೇ, ೨೨೬ |
| ೫) ಆನೆವರಿ | ಆನೆವರಿ | ಭದ್ರಾವತಿ | ಕನ್ನಡ ವಿ.ವಿ.ಸಂ.೧, ಶಾ.ಸಂ ೧೮ |
| ೬) ಓರುವಾಯಿ | ಓರುವಾಯಿ | ಬಳ್ಳಾರಿ | ಎಸ್.ಐ.ಐ, ೯, ಭಾಗ ೧, ಶಾ.ಸಂ. ೨೨೬ |
| ೭) ಕರವಿಡಿ | ಕರವಿಡಿ | ಹಡಗಲಿ | ಎಸ್.ಐ.ಐ. ೯, ಭಾಗ ೧, ೧೦೪ |
| ೮) ಕವತಾಳ | ಕವತಾಳ | ಅದೋನಿ | ಎಸ್.ಐ.ಐ. ೯, ಭಾಗ ೧, ೨೫೦ |
| ೯) ಕಟಿಕೂರು | ಕಟಿಕೂರು | ಬಳ್ಳಾರಿ | ಕ.ವಿ.ವಿ.ಶಾ.ಸಂ. ೧, ಶಾ.ನಂ. ೭ |

| | | | |
|---|---|---|---|
| ೧೦) ಕಂತರಿಕೆ | ಕಂತರಿಕೆ | ಬಳ್ಳಾರಿ | ಎಸ್.ಐ.ಐ. ೯, ಭಾಗ ೧, ಶಾ.ಸಂ. ೨೪೯ |
| ೧೧) ಕಟಹಳ್ಳಿ | ಕಟಹಳ್ಳಿ | ಬಳ್ಳಾರಿ | ಕನ್ನಡ ವಿ.ವಿ. ಶಾ.ಸಂ.೧, ಶಾ.ನಂ. ೭ |
| ೧೨) ಕರಿವೂರು | ಕರಿವೂರು | ಬಳ್ಳಾರಿ | ಅದೇ |
| ೧೩) ಕುರಗೋಡ | ಕುರಗೋಡು | ಬಳ್ಳಾರಿ | ಎಸ್.ಐ.ಐ, ಭಾಗ ೧, ಶಾ.ಸಂ. ೨೪೯ |
| ೧೪) ಕೋಳೂರು | ಕೋಳೂರು | ಬಳ್ಳಾರಿ | ಅದೇ, ೨೪೯ |
| ೧೫) ಕೊಳನೂರು | ಕೊಳನೂರು | ಸಿರಗುಪ್ಪೆ | ಕ.ವಿ.ವಿ. ಶಾ.ಸಂ. ೧, ಶಾ.ನಂ. ೧ |
| ೧೬) ಕೊರಗನೂರ | ಕುರಿಗನೂರು | ಬಳ್ಳಾರಿ | ಎಸ್.ಐ.ಐ, ೯, ಭಾಗ ೧, ಶಾ.ಸಂ, ೧೫೯ |
| ೧೭) ಕೊಂಚಗೆರೆ | ಕೊಂಚಗೆರಿ | ಸಿರಗುಪ್ಪೆ | ಕನ್ನಡ ವಿ.ವಿ. ಸಂ.೧, ಶಾ.ನಂ ೪೦ |
| ೧೮) ಗುರುಜೆ | ಗುರುಜೆ | ಅದೋನಿ | ಎಸ್.ಐ.ಐ ೯, ಭಾಗ ೧, ಶಾ.ಸಂ. ೨೪೦ |
| ೧೯) ಗುರಿಂದಾಲ | | ಅದೋನಿ | ಎಸ್.ಐ.ಐ. ೯, ಭಾಗ ೧, ಸಂ. ೨೪೦ |
| ೨೦) ಗೊಣನಹಾಳು | ಗೊರವನಹಳ್ಳಿ | ಬಳ್ಳಾರಿ | ಕನ್ನಡ ವಿ.ವಿ, ಸಂ.೧, ಶಾ.ಸಂ. ೧೮ |
| ೨೧) ಜಂತೆ ಗ್ರಾಮ | – | ಬಳ್ಳಾರಿ | ಕನ್ನಡ ವಿ.ವಿ, ಸಂ. ೯, ಅದೇ |
| ೨೨) ತೆಕ್ಕಕಲ್ಲು | ತೆಕ್ಕಲಕೋಟೆ | ಸಿರಗುಪ್ಪೆ | ಕನ್ನಡ ವಿ.ವಿ, ಸಂ. ೯, ಅದೇ |

| | | | |
|---|---|---|---|
| ೨೩) ದೊಂಡವಟ್ಟಿ | | ಬಳ್ಳಾರಿ | ಕನ್ನಡ ವಿ.ವಿ, ಸಂ. ೯, ಅದೇ, ೧೮ |
| ೨೪) ಪರ್ದಿಗೆ | | ಬಳ್ಳಾರಿ | ಎಸ್.ಐ.ಐ, ೯ ಭಾಗ ೧, ಶಾ.ಸಂ. ೧೫೯ |
| ೨೫) ಬಲ್ಲಕುಂದೆ | ಬಳಕುಂದಿ | ಹಡಗಲಿ | ಎಸ್.ಐ.ಐ. ೯, ಭಾಗ-೧, ಶಾ.ಸಂ. ೧೦೨ |
| ೨೬) ಬಾಗಿ | ಬಾಗಿ | ಅದೋನಿ | ಎಸ್.ಐ.ಐ. ೯, ಭಾಗ ೧, ಶಾ.ಸಂ. ೨೭೭ |
| ೨೭) ಬಾಡನಹಳ್ಳಿ | – | ಬಳ್ಳಾರಿ | ಕನ್ನಡ ವಿ.ವಿ, ಸಂ. ೧, ಶಾ.ನಂ. ೧೮ |
| ೨೮) ಬಿಯನಹಳ್ಳಿ | | ಬಳ್ಳಾರಿ | ಅದೇ |
| ೨೯) ಬಾಡನಹಟ್ಟಿ | | ಬಳ್ಳಾರಿ | ಅದೇ |
| ೩೦) ಮಂಜಲು | ಮಂಜನಹಾಳು | ಅದೋನಿ | ಎಸ್.ಐ.ಐ. ೯, ಭಾಗ ೧, ಶಾ.ಸಂ. ೨೪೦ |
| ೩೧) ಮುದಿಯನೂರು | ಮುದನೂರು | ಬಳ್ಳಾರಿ | ಎಸ್.ಐ.ಐ. ೯, ಭಾಗ ೧, ಶಾ.ಸಂ, ೨೯೬ |
| ೩೨) ಮಣಿಯೂರು | ಮಣೂರ | ಸಿರಗುಪ್ಪೆ | ಕನ್ನಡ ವಿ.ವಿ, ಶಾ.ಸಂ. ೧, ಶಾ.ನಂ.೧೮ |
| ೩೩) ಶಿರಗುಪ್ಪೆ | ಸಿರಗುಪ್ಪೆ | ಸಿರಗುಪ್ಪೆ | ಅದೇ |
| ೩೪) ಸಿರಿಯೂರು | | ಸಿರಗುಪ್ಪೆ | ಅದೇ |

| | | | |
|---|---|---|---|
| ೩೫) ಸೂಗೂರು | ಮಿಟ್ಟೆ ಸೂಗೂರು | ಸಿರಗುಪ್ಪೆ | ಕನ್ನಡ ವಿ.ವಿ, ಶಾ.ಸಂ. ೧, ಶಾ.ನಂ. ೧೧೮ |
| ೩೬) ಹೊನ್ನೆನಹಾಳು | ಹೊನ್ನಹಳ್ಳಿ | ಬಳ್ಳಾರಿ | ಎಸ್.ಐ.ಐ ೯, ಭಾಗ ೧, ಶಾ.ಸಂ. ೨೪೧ |
| ೩೭) ಹಟ್ಟಣ | | ಬಳ್ಳಾರಿ | ಕನ್ನಡ ವಿ.ವಿ, ಶಾ.ಸಂ. ೧ ಶಾ.ನಂ. ೭ |
| ೩೮) ಹಂಗವೆ | | ಬಳ್ಳಾರಿ | ಅದೇ |

ಕವಿಗಳ ದೃಷ್ಟಿಯಲ್ಲಿ ಇದು ಅತ್ಯಾಕರ್ಷಕವಾದ ಪ್ರದೇಶವಾಗಿದ್ದಿತು. ತುಂಗಭದ್ರಾ ನದಿಯ ದಕ್ಷಿಣ ದಂಡೆಯಲ್ಲಿರುವ ಬಲ್ಲಕುಂದೆಯು ನಾನಾ ತರಹದ ವೃಕ್ಷಗಳಿಂದ, ಸಮೃದ್ಧವಾಗಿ ಬೆಳೆದು ನಿಂತ ಹೊಲಗಳಿಂದ, ನಾನಾ ತರಹದ ಹಣ್ಣಿನ ಗಿಡಗಳಿಂದ, ಹೂವಿನ ತೋಟಗಳಿಂದ ಎಲ್ಲಿ ನೋಡಿದಲ್ಲಿ ಕಣ್ಣಿಗೆ ಹಬ್ಬವನ್ನು ಉಂಟು ಮಾಡುತ್ತವೆ ಎಂದು ಕವಿ ಬಣ್ಣಿಸಿದ್ದಾನೆ. ಕುರುಗೋಡಿನ ಕೋಟೆಯಂತೂ ಯುದ್ಧವೆಂದರೆ, ಉತ್ಸಾಹದಿಂದ ಏಳು ಪಟ್ಟು ಎದೆ ಸೆಟೆದು ನಿಲ್ಲುತ್ತದೆ ಎಂದು ಹೇಳುತ್ತಾನೆ.[೨೯] ಈ ಪ್ರದೇಶದಲ್ಲಿಯ ಇನ್ನೊಂದು ಪ್ರಸಿದ್ಧ ಸ್ಥಳ ಕೊಳೂರು ಬಲಾಢ್ಯವಾದ ಕೋಟೆಯಿಂದ, ಗೋಪುರಗಳಿಂದ ಹರಿಯುವ ನದಿಗಳಿಂದ ನಾನಾ ತರಹದ ಹೂಗಳ ಸುವಾಸನೆಯ ಗಾಳಿಯಿಂದ, ಬಾಳೆ, ನಿಂಬೆ, ಮಾವು, ಕಂಚಿ, ತೆಂಗು, ಹಲಸು ಗಿಡಗಳಿಂದ ಕಬ್ಬಿನ ತೋಟ, ಜೋಳದ ಹೊಲ, ಭತ್ತದ ಗದ್ದೆ, ಎತ್ತರವಾದ ದೇವಾಲಯಗಳು ಇವೆಲ್ಲವುಗಳಿಂದ ಬಹು ಸುಂದರವಾಗಿ ಕಾಣುತ್ತದೆ ಎಂದು ವರ್ಣಿಸುತ್ತಾನೆ.[೩೦] ಈ ಸುಂದರ ಶಾಸನವನ್ನು ಯಾರು ರಚಿಸಿದರು ಎಂದು ತಿಳಿಯದು.

**ಬಾಗಡಗೇಯ ಸಿಂದರು ಹಾಗೂ ಪ್ರತ್ಯಂಡಕ ಸಿಂದರು**

ಬಾಗಡಗೇಯ ಸಿಂದರು ಮತ್ತು ಪ್ರತ್ಯಂಡಕ ಸಿಂದರ ಬಗ್ಗೆ ಆಡಳಿತ ಪ್ರದೇಶಗಳ ಬಗೆಗಂತೂ ಯಾವ ಮಾಹಿತಿಗಳು ಸಿಗುವುದಿಲ್ಲ. ಬಾಗಡಗೇಯ-೭೦ ಅಂದರೆ ೭೦ ಗ್ರಾಮಗಳನ್ನೊಳಗೊಂಡ ಚಿಕ್ಕ ಪ್ರದೇಶವೇ. ಸಿಂದರ ಆಳಿಕೆಗೆ ಒಳಪಟ್ಟ ಪ್ರದೇಶವಾಗಿತ್ತು. ಬಾಗಡಗೇಯು ಇಂದಿನ ಬಾಗಲಕೋಟೆ ಎಂದು ಈ ಮೊದಲೇ ನಿರ್ಧರಿಸಲಾಗಿದೆ. ಈ ಮನೆತನಕ್ಕೆ ಸಂಬಂಧಿಸಿದಂತೆ ಒಂದೇ ಒಂದು ಶಾಸನ ಲಭ್ಯವಾದುದರಿಂದ ಈ ಚಿಕ್ಕ ಪ್ರಾಂತದಲ್ಲಿ ಯಾವ ಯಾವ ಗ್ರಾಮಗಳು ಸೇರ್ಪಡೆಗೊಂಡಿದ್ದವೋ ಎಂಬುದು ತಿಳಿಯುವುದಿಲ್ಲ.

ಈ ಮೊದಲೇ ನೋಡಿದಂತೆ, ಯಲಬುರ್ಗಿ ಸಿಂದರ ಶಾಸನದಲ್ಲಿಯೂ ಸಹ ಅವರೂ ಕಿಸುಕಾಡು-೭೦ ಜೊತೆಗೆ ಬಾಗಡಗೆ-೭೦ ಆಳುತ್ತಿದ್ದರು ಎಂದು ತಿಳಿದು ಬರುತ್ತದೆ. ಮತ್ತು ಈ ಸಿಂದರು ಬಾಗಡಗೆ-೭೦ನ್ನು ಆಳುತ್ತಿದ್ದರೆಂದು ಕಂಡು ಬರುವುದರಿಂದ ಇಬ್ಬರು ಒಂದೇ ಮನೆತನಕ್ಕೆ ಸೇರಿದ ದಾಯಾದಿಗಳು ಆಗಿದ್ದು ಒಂದು ಶಾಖೆಯು ಬಾಗಡಗೆ-೭೦ರ ಅಧಿಪತ್ಯವನ್ನು ಪಡೆಯಿತೆಂದು ಊಹಿಸಬೇಕಾಗುತ್ತದೆ. ಕಿಸುಕಾಡು ಪ್ರಾಂತದ ನೆರೆಯ ಪ್ರದೇಶವಾದ ಬಾಗಡಗೇಯು ರಾಷ್ಟ್ರಕೂಟರ ಕಾಲದಿಂದಲೇ ಅಸ್ತಿತ್ವದಲ್ಲಿ ಇದ್ದಿತು. ಈ ಪ್ರಾಂತವನ್ನು ೩ನೇ ಅಮೋಘವರ್ಷನು ಗಂಗ ಬೂತಗನಿಗೆ ಬಳುವಳಿಯಾಗಿ ಕೊಟ್ಟ ವಿಷಯವನ್ನು ಈ ಹಿಂದೆಯೇ ನೋಡಿದ್ದೇವೆ. ರಾಷ್ಟ್ರಕೂಟರ ಪ್ರಭಾವ ಅಳಿದ ಮೇಲೆ ಬಾಗಡಗೆ ನಾಡು ಗಂಗರ ಕೈ ತಪ್ಪಿತು. ೧ನೇ ಸೋಮೇಶ್ವರನ ಕಾಲದಲ್ಲಿ ಅದನ್ನು ೫ನೇ ವಿಕ್ರಮಾದಿತ್ಯನ ತಂಗಿಯಾದ ಅಕ್ಕಾದೇವಿಯು ಆಳುತ್ತಿದ್ದಳು ಎಂದೂ ಸಹ ಗಮನಿಸಿದ್ದೇವೆ. ಒಂದು ಶಾಸನದಲ್ಲಿ ಇದೇ ಪ್ರಾಂತವು ಬಾಗೆ-೭೦ ಎಂದು ಹೆಸರಿಸಲ್ಪಟ್ಟಿದೆ. ಒಂದು ಶಾಸನದಲ್ಲಿ ಬಾಗಡಗೆ ಕೋಟೆ ಎಂದು ಕರೆಯಲ್ಪಟ್ಟಿದೆ. ಇದೇ ಆಧಾರದ ಮೇಲೆ ಫ್ಲೀಟರವರು ಬಾಗಡಗೆಯನ್ನು ಈಗಿನ ಬಾಗಲಕೋಟೆ ಎಂದು ಗುರುತಿಸಿದರು. ಸ್ಥೂಲವಾಗಿ ಇದು ಬಾಗಲಕೋಟೆಯನ್ನು ಮುಖ್ಯ ಸ್ಥಳವನ್ನಾಗಿ ಇಟ್ಟುಕೊಂಡು ಐಹೊಳೆಯಿಂದ ಮಲಪ್ರಭಾ ನದಿಯ ಉತ್ತರ ಭಾಗದಲ್ಲಿ ಹಬ್ಬಿತ್ತೆಂದು ಹೇಳಬಹುದು. ಐಹೊಳೆಯು ನೆರೆ ಪ್ರಾಂತವಾದ ಕಿಸುಕಾಡು-೭೦ ರಲ್ಲಿ ಸೇರಿದ್ದಿತೆಂದು ಈ ಮೊದಲೇ ಸೂಚಿಸಿದ್ದೇವೆ.

ಪ್ರತ್ಯಂಡಕ ಸಿಂದ ಮನೆತನದವರು "ಪ್ರತ್ಯಂಡಕ ಚತುಸಹಸ್ರ" ದೇಶದ ಅಧಿಪತಿಗಳಾಗಿದ್ದರೆಂದು ತಿಡಗುಂದಿ ಶಾಸನದಲ್ಲಿ ವರ್ಣಿತರಾಗಿದ್ದಾರೆ. ಇವರನ್ನು ಕುರಿತು ದೊರೆತ ಶಾಸನ ಇದೊಂದೆ.[೫೧] ಕನ್ನಡದ ಶಾಸನಗಳಲ್ಲಿ ಪಳಿಯಂಡ ನಾಲ್ಸಾಸಿರ ಎಂದು ಉಲ್ಲೇಖಿತವಾಗಿದೆ.[೫೨] ಪ್ರತ್ಯಂಡಕ ಅಥವಾ ಪಳಿಯಂಡವನ್ನು ಈಗಿನ ಉಸ್ಮಾನಬಾದ ಜಿಲ್ಲೆಯ ತಾಲೂಕ ಮುಖ್ಯಸ್ಥಳ ಪರೆಂಡ ಎಂದು ಗುರುತಿಸಲಾಗಿದೆ. ಬಹಳ ಹಿಂದೆ ಫ್ಲೀಟರವರು ಪ್ರತ್ಯಂಡಕವನ್ನು ಇಂದಿನ ಉಸ್ಮಾನಬಾದ ಜಿಲ್ಲೆಯ ಫಲ್ಟನ್ ಎಂಬ ಊರಿನೊಂದಿಗೆ ಗುರುತಿಸಿದರು. ಅವರಿಗೆ ಪಳಿಯಂಡ ಎಂಬ ಇನ್ನೊಂದು ರೂಪ ದೊರೆತಿರಲಿಲ್ಲವೆಂದು ಕಾಣುತ್ತದೆ. ಆದರೆ ಪಳಿಯಂಡವನ್ನು ಇದೀಗ ಹೇಳಿದಂತೆ ಉಸ್ಮಾನಬಾದ ಜಿಲ್ಲೆಯ ಪರೇಂಡದೊಂದಿಗೆ ಗುರುತಿಸುವುದು ಸೂಕ್ತ.

**ಅಟ್ಟಳೆ ನಾಡು (ರಂಜೇರು ಸಿಂದರು)**

ಅಟ್ಟಳೆ ನಾಡಿನ ಸಿಂದರ ಬಗ್ಗೆ ಈ ಮೊದಲೇ ಬರೆದಿದ್ದೇವೆ. ಅವರ ಬಗ್ಗೆ ಐತಿಹಾಸಿಕ ವಿಷಯವು ಬೀದರ ತಾಲೂಕಿನ ರಂಜೇರು ಎಂಬ ಗ್ರಾಮದಲ್ಲಿ ದೊರೆತ ಶಾಸನದಿಂದ ಲಭ್ಯವಾಗುತ್ತದೆ. ಇವರನ್ನು ಸಾಮಾನ್ಯವಾಗಿ ರಂಜೇರು ಸಿಂದರೆಂದು ಹೆಸರಿಸಲಾಗಿದೆ.[೩೩] ಆದರೆ ಅವರು ಅಟ್ಟಳೆ ನಾಡು ಆಳುತ್ತಿದ್ದರಿಂದ ಇನ್ನುಳಿದ ಸಿಂದ ಮನೆತನಗಳಂತೆ ಇವರನ್ನು ನಾವು, ಇವರು ಆಳುತ್ತಿದ್ದ ಅಟ್ಟಳೆನಾಡಿನೊಂದಿಗೆ ಗುರುತಿಸಿದ್ದೇವೆ. ಅಟ್ಟಳೆ ಎಂಬ ಊರಿನಿಂದ ಈ ನಾಡಿಗೆ ಅಟ್ಟಳೆನಾಡು ಎಂಬ ಹೆಸರು ಬಂದಿತೆಂದು ಸ್ಪಷ್ಟವಿದೆ. ಈ ಅಟ್ಟಳೆಯನ್ನು ಈಗ ಬೀದರ ತಾಲೂಕಿನಲ್ಲಿರುವ ಅಟ್ವಾಲ್ ಎಂಬ ಗ್ರಾಮದೊಂದಿಗೆ ಅಥವಾ ಹುಮನಾಬಾದ ತಾಲೂಕಿನ ಅತ್ವಾಲ್ ಎಂಬ ಗ್ರಾಮದೊಂದಿಗೆ ಗುರುತಿಸಬಹುದು[೩೪] ಹೆಸರು ಅಟ್ಟಳೆನಾಡಾದರೂ ಈ ಪ್ರದೇಶದ ರಾಜಧಾನಿ ರಂಜೇರು ಅಥವಾ ಬೀದರ ತಾಲೂಕಿನ ರಂಜೋಲ (ಪ್ರಾಚೀನ ರಂಜೇರು) ಆಗಿದ್ದಿತೆಂದು ಅಲ್ಲಿರುವ ಶಾಸನಗಳಿಂದ ತಿಳಿಯುತ್ತದೆ. ಈ ಶಾಸನವು ಅಟ್ಟಳೆನಾಡನ್ನು, ರಂಜೇರು ಗ್ರಾಮವನ್ನು ಈ ರೀತಿ ವರ್ಣಿಸುತ್ತದೆ.[೩೫]

॥ ಎಳೆಯೊಳುಮಿಗಿಲೆನಿಸಿದ ಕು
ನ್ತಳ ವಿಷಯೊತ್ತಂ ಸಮೆನಿಸಿಫಲತೆರದಿಂದ
ಟ್ಟಳೆನಾಡು ಚೆಲ್ವಿನಾಗರ
ವಳುಂಬವಾನಾಳ್ಕೆ ನಾಡುಗಳ್ ಪಡಿಯೊಳವೆ॥

ಎನೆ ಪೊಗಳ್ವ ಪೊಗರ್ತ್ತಿಗೆ
ನೆಲೆಯೆನಿಪಟ್ಟಳೆ ನಾಳಕೆ ತಿಳಕುಹಸ
ರುಂ ಸಜ್ಜನಿತಾ ಸೇಬ್ಯಂ —ಂಜೇಮಿ ನಿವಾಸ ಸ್ಥಾನಮೆನಿಸಿ ಸಿಂದಾನ್ವಯದ॥

ಈ ನಾಡಿನಲ್ಲಿ ಕೆಲವು ಹಳ್ಳಿಗಳು ಸೇರ್ಪಡೆಯಾಗಿದ್ದು, ಈ ಕೆಳಗಿನಂತೆ ಪಟ್ಟಿಯಿದೆ.

| ಹಳ್ಳಿಗಳು | | ಇಂದಿನ ಹೆಸರು | ಉಲ್ಲೇಖ |
|---|---|---|---|
| ೧) | ಹಳೆಯಖೇಡ | ಹಳ್ಳಿಖೇಡ | ಕುಲಕರ್ಣಿ ವ್ಹಿ.ಎಸ್. ಮಹಾಪ್ರಬಂಧದಿಂದ ಸಾದರಪೂರ್ವಕವಾಗಿ ಪಡೆಯಲಾಗಿದೆ. [೨೭] |
| ೨) | ಮರಿಕಲ್ಲು | ಮರಕಲ್ಲು | |
| ೩) | ಸಿರಿಗೆರೆ | ಶಿರಸಗಿ | ಬೀದರ ಜಿಲ್ಲೆ |
| ೪) | ಮಂಗಲಿಗೆ | ಮಂಗಲಗಿ | |
| ೫) | ಕೊವತನ | | |
| ೬) | ಗಟ್ಟಿಬೋರಿಹಳ್ಳಿ | ಘಟಬೋರಾಲ | ಹುಮನಾಬಾದ ತಾಲೂಕ |
| ೭) | ಹಲ್ಲಹಳ್ಳಿ | ಹಿಲಾಲಪುರ | |
| ೮) | ಬಗದಾಳ | ಬಗದಾಳ | |
| ೯) | ನಜ್ಜರಗಿ | ನಜ್ಜರಗಿ | |
| ೧೦) | ನಿಮಿಲಖೇಡ | ನಿಮಿಲಖೇಡ | |
| ೧೧) | ಧನಶ್ರೀ | ಧನಶ್ರೀ | ಜಹಿರಾಬಾದ್ / ಮೆಡಕ್ ಜಿಲ್ಲೆ ಆಂಧ್ರಪ್ರದೇಶ) |

ಈ ನಾಡಿನಲ್ಲಿ ಕರಂಜೆ ಎಂಬ ನದಿ ಮತ್ತು ಬಿಜ್ಜರಗಿ ಹಳ್ಳವು ಹರಿಯುತ್ತಿದ್ದವೆಂದು ಗೊತ್ತಾಗುತ್ತವೆ. ಕರಂಜೆ ನದಿಯು ಈಗಿನ ಮಾಂಜ್ರಾ ನದಿಯ ಒಂದು ಶಾಖೆ ಎಂದು ಹೇಳಲಾಗಿದೆ.

## ಆಡಳಿತ ವ್ಯವಸ್ಥೆ

ಸಾಮಂತ ಮನೆತನಗಳ ಪ್ರದೇಶಗಳ ಆಡಳಿತ ವ್ಯವಸ್ಥೆ ಅವರವರ ಆಳರಸರ ಸಾಮ್ರಾಜ್ಯಗಳ ಆಡಳಿತ ವ್ಯವಸ್ಥೆಯ ಪ್ರತಿರೂಪವೇ ಸರಿ. ಇಂತಹ ಸಾಮಂತ ಪ್ರದೇಶಗಳು ಸಾಮ್ರಾಜ್ಯಗಳ ಭಾಗಗಳೇ ಆಗಿದ್ದುದರಿಂದ ಅದೇ ಆಡಳಿತ ವ್ಯವಸ್ಥೆ ಇಲ್ಲಿಯೂ ಇದ್ದಿತೆಂದು ಬೇರೆ ಹೇಳುವ ಕಾರಣವಿಲ್ಲ. ಪ್ರಸ್ತುತ ನಮ್ಮ ಅಭ್ಯಾಸಕ್ಕೊಳಪಟ್ಟ ಸಿಂದ ಮನೆತನಗಳು ಕಲ್ಯಾಣ ಚಾಲುಕ್ಯ

ಸಾಮ್ರಾಜ್ಯದ ಭಾಗಗಳೇ ಆಗಿದ್ದುದರಿಂದ ಚಾಲುಕ್ಯ ಸಾಮ್ರಾಜ್ಯದ ಆಡಳಿತ ವ್ಯವಸ್ಥೆಯೇ ಈ ಸಾಮಂತ ಪ್ರದೇಶಗಳಲ್ಲಿಯೂ ಇದ್ದಿತು.

ಕಲ್ಯಾಣ ಚಾಲುಕ್ಯ ಸಾಮ್ರಾಜ್ಯದ ಆಡಳಿತ ವ್ಯವಸ್ಥೆ ಕುರಿತು ಹಲವಾರು ವಿದ್ವಾಂಸರು ವಿವರವಾಗಿ ಅಭ್ಯಸಿಸಿದ್ದಾರೆ. ಅವೆಲ್ಲ ವಿವರಗಳು ಸಿಂದ ಪ್ರದೇಶಗಳಿಗೆ ಅನ್ವಯಿಸುತ್ತವೆ. ಆದರೂ ಅವು ಸಿಂದರ ಆಳಿಕೆಗೆ ಸಂಬಂಧಿಸಿದವೆಂದು ಬಿಂಬಿಸುವುದು ಸರಿಯಾಗಲಾರದು. ಆದ್ದರಿಂದ ಸಿಂದರ ಪ್ರದೇಶಗಳಿಗೆ ಅಷ್ಟೇ ಸಂಬಂಧಿಸಿದಂತೆ ಸಿಂದರ ಶಾಸನಗಳಲ್ಲಿ ದೊರೆತ ಮಾಹಿತಿಯನ್ನು ಇಲ್ಲಿ ಕೊಡಲಾಗಿದೆ. ಇದರಿಂದ ಇಲ್ಲಿ ಕೊಡಲಾದ ವಿವರಗಳು ಸಂಕ್ಷಿಪ್ತವಾಗಿರುವುದು ಅಗತ್ಯವು ಅನಿವಾರ್ಯವೂ ಆಗಿದೆ.

ಯಾವುದೇ ಸಾಮ್ರಾಜ್ಯದ ಅತ್ಯುಚ್ಚ ಅಧಿಪತಿಯೆಂದರೆ ಅರಸ. ಅರಸೊತ್ತಿಗೆಯೂ ಸರ್ವಸಾಮಾನ್ಯವಾಗಿ ವಂಶಪಾರಂಪರಾನುಗತವಾಗಿಯೇ ಇದ್ದಿತು ಎಂಬುದು ಸರ್ವವಿಧಿತ. ಹಾಗೆಂದ ಮಾತ್ರಕ್ಕೆ ಅರಸನು ಸರ್ವಸ್ವತಂತ್ರ ನಿರಕುಂಶ ಪ್ರಭು ಆಗಿದ್ದನು ಎಂದು ಅರ್ಥವಲ್ಲ. ಅವನ ಅಧಿಕಾರವು ದೈವದತ್ತ ಎಂದು ಪರಿಗಣಿಸಲ್ಪಟ್ಟರೂ ಆತನಿಗೆ ಕಟ್ಟುಪಾಡುಗಳಿದ್ದವು. ಕೆಲವು ಅನುಸರಿಸಲೇಬೇಕಾದ ರೀತಿ ನಿಯಮಗಳು, ನಿರ್ಬಂಧಗಳು ಅವನ ಮೇಲಿದ್ದವು. ಅದೇ "ರಾಜಧರ್ಮ" ಎಂದು ಕರೆಯಲ್ಪಡುತ್ತದೆ. ರಾಜಧರ್ಮವನ್ನು ಅನುಸರಿಸದ ನಿರಂಕುಶ ಅರಸನಿಗೆ ಆಳುವ ಅಧಿಕಾರವೇ ಇಲ್ಲ ಎಂದು ರಾಜ್ಯಶಾಸ್ತ್ರದ ಗ್ರಂಥಗಳು ಸಾರಿ ಹೇಳುತ್ತವೆ. ಯಾವುದೇ ಸಾಮ್ರಾಜ್ಯದ ಅರಸನ ಮುಖ್ಯ ಗುರಿ ಪ್ರಜಾಹಿತ. ಇದನ್ನು ಕ್ರಿ.ಪೂ. ೪ನೇ ಶತಮಾನದಷ್ಟು ಹಿಂದೇ ಕೌಟಿಲ್ಯನು ತನ್ನ ಅರ್ಥಶಾಸ್ತ್ರ ಗ್ರಂಥದಲ್ಲಿ ಸ್ಪಷ್ಟವಾಗಿ 'ಪ್ರಜಾಹಿತೆಹಿತಂ ರಾಜ್ಞಃ ಪ್ರಜಾನಾಂಚ ಸುಖೇ ಸುಖ' ಎಂದು ನಿರೂಪಿಸಿದ್ದಾನೆ. ಇದು ಮುಂದೆ ಬಂದ ಎಲ್ಲ ಸಾಮ್ರಾಜ್ಯಗಳ, ಎಲ್ಲ ಅರಸರಿಗೂ ಮಾರ್ಗದರ್ಶಿ ಸೂತ್ರವಾಯಿತು. ಸಾಮ್ರಾಜ್ಯದ ರಕ್ಷಣೆಗಾಗಿ, ಪ್ರಜೆಗಳ ಹಿತರಕ್ಷಣೆಗಾಗಿ, ಧರ್ಮ, ಸಾಹಿತ್ಯ, ಸಂಸ್ಕೃತಿ, ಪೋಷಣೆಗಾಗಿ ಅವನು ಕೆಲಸ ಮಾಡುವುದು ಅವಶ್ಯವಿತ್ತು. ಅದಕ್ಕಾಗಿಯೇ ಅವನಿಗೆ ಬೆಂಬಲವಾಗಿ ಆರು ಅಂಗಗಳನ್ನು ಪ್ರಾಚೀನ ರಾಜನೀತಿ ಶಾಸ್ತ್ರಜ್ಞರು ನಿರೂಪಿಸಿದರು. ರಾಜ್ಯವೆಂದರೆ ಅರಸನನ್ನು ಹಿಡಿದು ಏಳು ಅಂಗಗಳ ಒಂದು ನಿರ್ಧಿಷ್ಟ ಸಂಸ್ಥೆ ಅವುಗಳು, ೧) ಸ್ವಾಮಿ ಅಥವಾ ಅರಸ ೨) ಅಮಾತ್ಯ ಅಥವಾ ಮಂತ್ರಿ ೩) ಸೈನ್ಯ ಅಥವಾ ಬಲ ೪) ಕೋಶ ೫) ದುರ್ಗ ಅಥವಾ ಕೋಟೆ ೬) ಜನಪದ ಅಥವಾ ದೇಶ ೭) ಮಿತ್ರ ಅಥವಾ ಪ್ರಸಂಗಗಳಲ್ಲಿ ಸಹಾಯಕ್ಕೆ ಬರುವ ನೆರೆರಾಜ್ಯದ ಅರಸ. ಇದನ್ನೇ ಸಪ್ತಾಂಗ ರಾಜ್ಯ ಎಂದು ಕರೆದರು. ಈ ಅಂಗಗಳ ಸಹಾಯದಿಂದ ಅರಸನು ದೇಶದ ರಕ್ಷಣೆ ಮತ್ತು ಜನರ

ಅಭಿವೃದ್ಧಿಯನ್ನು ಸಾಧಿಸುವುದು ಅರಸನ ಆದ್ಯ ಕರ್ತವ್ಯವಾಗಿದ್ದಿತು. ಅದಕ್ಕಾಗಿ ಕೆರೆಕಟ್ಟೆಗಳ ರಚನೆ, ದೇವತಾಗೃಹಗಳ ನಿರ್ಮಾಣ, ವಿದ್ಯೆ, ಒಕ್ಕುಲತನ, ಕಲೆ, ಸಾಹಿತ್ಯಗಳಿಗೆ ಪ್ರೋತ್ಸಾಹ ಇವೆಲ್ಲಾ ಅವನ ಆದ್ಯ ಕರ್ತವ್ಯಗಳಾಗಿದ್ದವು. ಇವುಗಳ ಸಾಧನೆಗಾಗಿ ಅರಸನು ಪರಿಶ್ರಮಪಡುವುದು ಅಗತ್ಯವಾಗಿತ್ತು. ಅರಸನ ಶರೀರವು ಲೋಕಹಿತಕ್ಕಾಗಿ ಪರಿಶ್ರಮಪಡುವುದಕ್ಕಾಗಿಯೇ ಇದೆಯೇ ಹೊರತು ಸುಖೋಪಭೋಗಕ್ಕೆಲ್ಲ "ರಾಜ್ಞಾಂ ಶರೀರಗ್ರಹಣಂ, ಕ್ಲೇಶಾಯ ಮಹತೇ ನ ಪರಿಭೋಗಾಯ" ಎಂಬ ಮಹಾಭಾರತದ ಹೇಳಿಕೆ ಅರಸನ ಕರ್ತವ್ಯಗಳೇನೆಂಬುದನ್ನು ಸಾರಾಂಶ ರೂಪದಲ್ಲಿ ಬಿಂಬಿಸುತ್ತದೆ. ಇಂತಹ ಉದಾತ್ತ ತತ್ವಗಳು ಬಹು ಪ್ರಾಚೀನ ಕಾಲದಿಂದ ತಲೆತಲಾಂತರವಾಗಿ ಅನುಸರಿಸುತ್ತ ಬಂದಿದ್ದರಿಂದಲೇ ಮೌರ್ಯ, ಗುಪ್ತ, ರಾಷ್ಟ್ರಕೂಟ ಮುಂತಾದ ಮಹಾನ್ ಸಾಮ್ರಾಜ್ಯಗಳು ಆಗಿಹೋದವು. ಅವುಗಳ ಸಾಧನೆಯ ಹೆಗ್ಗುರುತುಗಳು ಇಂದು ದೇಶ ತುಂಬೆಲ್ಲಾ ಕಾಣಸಿಗುತ್ತವೆ. ಪ್ರಸ್ತುತ ಚಾಲುಕ್ಯ ಸಾಮ್ರಾಜ್ಯವು ಇದಕ್ಕೆ ಹೊರತಾಗಿಲ್ಲ. ಈ ಸಾಮ್ರಾಜ್ಯದ ಹಿರಿಮೆಯನ್ನು ಬಿಂಬಿಸಿರುವ ಅಸಂಖ್ಯ ಶಿಲಾಶಾಸನಗಳು, ಕೋಟೆ ಕೊತ್ತಳಗಳು, ದೇವಾಲಯಗಳು, ಕೆರೆಕಟ್ಟೆಗಳು ಇಂದಿಗೂ ಕಾಣಸಿಗುತ್ತವೆ. ಅರಸರ ಹೆಜ್ಜೆಯಲ್ಲಿಯೇ ಸಾಮಂತರು ಹೆಜ್ಜೆಯನ್ನು ಇಟ್ಟರು ಎಂಬುದಕ್ಕೆ ಉದಾಹರಣೆಗಳಿವೆ.

ಸಾಮ್ರಾಜ್ಯಕ್ಕೆ ಅರಸನಿದ್ದಂತೆ ಸಾಮಂತಿಕೆಯ ಪ್ರದೇಶಕ್ಕೆ ಸಾಮಂತನಿದ್ದನು. ಸಾಮಂತ ಪ್ರದೇಶಗಳ ಆಡಳಿತವು ಸಾಮ್ರಾಜ್ಯದ ಆಡಳಿತದ ಪ್ರತಿರೂಪವೇ ಎಂದು ಈ ಮೊದಲು ಸ್ಪಷ್ಟಪಡಿಸಿದ್ದೇವೆ. ಶಾಸನಗಳು ಅರಸನು 'ಸುಖಸಂಕಥಾ ವಿನೋದದಿಂ ರಾಜ್ಯಂಗೈಯುತಿರೆ' ಎಂದು ಹೇಳಿದಂತೆ ಮಾಂಡಲಿಕರು ರಾಜ್ಯಂಗೈಯುತ್ತಿದ್ದರು ಎಂದು ಹೇಳಿದೆ. ಬೆಳಗುತ್ತಿ ಸಿಂದ ಈಶ್ವರದೇವನು "ಬೆಳಗವರ್ತಿಯ ನೆಲವೀಡಿನೊಳ್ ಸುಖದಿಂ ಅರಸುಗೆಯ್ವುತ್ತಮಿರಲು" ಎಂದು ಬೆಳಗುತ್ತಿ ಸಿಂದ ಒಂದು ಶಾಸನ ಹೇಳುತ್ತದೆ.[೩೭] ಹಾಗೆಯೇ ಯಲಬುರ್ಗಿ ಸಿಂದ ಮನೆತನದ ಜಗದೇಕ ಪೆರ್ಮಾಡಿದೇವರಸನು "ಕಿಸುಕಾಡು ನಾಡುವಂ, ಬಾಗಡಗೆ ನಾಡುವಂ, ಕೆಳವಡಿ ನಾಡುವಂ, ನರೆಯಂಗಲ್ಲ ನಾಡುವಂ, ದುಷ್ಟನಿಗ್ರಹ ವಿಶಿಷ್ಟ ಪ್ರತಿಪಾಳನಂ ಮಾಡಿ ರಾಜಧಾನಿ ನೆಲವೀಡಿನೊಳ ಸುಖಸಂಕಥಾ ವಿನೋದದಿಂ ರಾಜ್ಯಂಗೈಯುತ್ತಿರೆ" ಎಂದು ಕೋಡಿಕೊಪ್ಪ ಶಾಸನವು ಹೇಳುತ್ತದೆ.[೩೮] ಕುರುಗೋಡು ಸಿಂದ ಮನೆತನದ ೨ನೇ ರಾಚಮಲ್ಲನು ಪ್ರಸಿದ್ಧ ಸಾಮಂತನು ಅವನ ಬಿರುದಾವಳಿಗಳು ಅವನನ್ನು ಅರಸನಂತಯೇ ಬಿಂಬಿಸುತ್ತವೆ.[೩೯] ಹೀಗೆ ಸಾಮಂತರು ಆಳರಸರಿಗೆ ಪಾದಪದ್ಮೋಪಜೀವಿಗಳೆಂದು ಕರೆದುಕೊಂಡರು. ತಮ್ಮ ಆಳಿಕೆಯ ಪ್ರದೇಶದಲ್ಲಿ ಸ್ವತಂತ್ರ ಅರಸರಂತೆಯೇ ವಿವರಿಸುತ್ತಿದ್ದರು. ಇದರಿಂದ ತಿಳಿದು ಬರುವುದೇನೆಂದರೆ

ಸಾಮಂತರಾಗಲಿ, ಮಾಂಡಲಿಕರಾಗಲಿ ತಮ್ಮ ತಮ್ಮ ಪ್ರದೇಶಗಳಲ್ಲಿ ಸ್ವತಂತ್ರವಾಗಿಯೇ ಆಳುತ್ತಿದ್ದರು. ಅನಿವಾರ್ಯ ಪ್ರಸಂಗಗಳನ್ನು ಬಿಟ್ಟರೆ ಆಳರಸರು ಈ ಆಡಳಿತದಲ್ಲಿ ಹಸ್ತಕ್ಷೇಪ ಮಾಡುತ್ತಿರಲಿಲ್ಲ. ಅಂತರವಿಷ್ಟೆ ಸಾಮಂತ ಅಥವಾ ಮಾಂಡಲಿಕರು ಆಳರಸರ ಪಾದಪದ್ಮೋಪಜೀವಿಗಳು, ಅಂದರೆ ನಿಷ್ಠಾವಂತ ಸೇವಕರೆಂದು ಹೇಳುಕೊಳ್ಳುತ್ತಿದ್ದರು.

ಚಾಲುಕ್ಯ ಸಾಮ್ರಾಜ್ಯಕ್ಕೆ ಸಂಬಂಧಿಸಿದಂತೆ ಇಂತಹ ಅನೇಕ ಉದಾಹರಣೆಗಳನ್ನು ಸಿಗುತ್ತವೆ. ಆದರೆ ಅವನ್ನು ಇಲ್ಲಿ ಉಲ್ಲೇಖಿಸುವುದು ಪ್ರಸ್ತುತವಲ್ಲ. ಸಿಂದ ಮನೆತನಗಳ ಚರಿತ್ರೆ ಪ್ರಸ್ತುತ ಪ್ರಬಂಧದ ವಿಷಯವಾಗಿದ್ದರಿಂದ ನಮ್ಮ ಅಭ್ಯಾಸವನ್ನು ಆ ಮನೆತನಗಳ ಶಾಸನಗಳಿಂದಲೇ ಸಾಧ್ಯವಿದ್ದಷ್ಟು ಉದಾಹರಣೆ ಕೊಡುತ್ತೇವೆ. ಸಿಂದ ಮನೆತನಗಳ ಶಾಸನಗಳು ಕಡಿಮೆ. ಇದ್ದವುಗಳಲ್ಲಿ ಬಹುಪಾಲು ಸವೆದು, ಒಡೆದು ಹೋಗಿದ್ದರಿಂದ ನಿರ್ಧಿಷ್ಠವಾದ ವಿಪುಲವಾದ ಮಾಹಿತಿ ಸಿಗುವುದಿಲ್ಲ. ದೊರೆತಷ್ಟವನ್ನೇ ಸಾದರಪಡಿಸಿದ್ದೇವೆ. ಹೆಚ್ಚಾಗಿ ಸಿಂದ ಸಾಮಂತರು ಮೊದಮೊದಲು ಮಾಂಡಲಿಕರಾಗಿರಲಿಲ್ಲ. ಅರಸರ ಉಚ್ಚಪ್ರಾಂತಾಧಿಕಾರಿಗಳು, ದಂಡನಾಯಕರು, ಪ್ರಧಾನರು, ಇಂತಹವರ ಅಧೀನರಾಗಿಯೇ ಕಾರ್ಯ ಮಾಡುತ್ತಿದ್ದರು. ಉದಾಹರಣೆಗೆ ಸಿಂದ ಸಾಮಂತ ಚಾಲುಕ್ಯ ವಿಕ್ರಮಾದಿತ್ಯನ ದಕ್ಷ ಅಧಿಕಾರಿಯಾದ ಗೋವಿಂದ ದಂಡನಾಥನ ಅಧೀನರಾಗಿ ಕಾರ್ಯಮಾಡುತ್ತಿದ್ದರು. ಕುರುಗೋಡು ಸಿಂದರು ಬಹಳಷ್ಟು ಕಾಲ ಚಾಲುಕ್ಯರ ಮಾಂಡಲಿಕರಾದ ನೊಳಂಬ ಪಲ್ಲವರ ಅಧೀನರಾಗಿ ಕಾರ್ಯ ಮಾಡುತ್ತಿದ್ದರು. ಇಲ್ಲಿ ಇನ್ನೊಂದು ವಿಷಯವನ್ನು ಸ್ಪಷ್ಟಪಡಿಸಬೇಕು. ಅದೇನೆಂದರೆ, ಪ್ರಧಾನಮಂತ್ರಿ ದಂಡನಾಯಕ ಮುಂತಾದ ಅಧಿಕಾರ ವಾಚಕ ಪದಗಳು ಆಯಾ ಅಧಿಕಾರಿಗಳ ತಾರತಮ್ಯವನ್ನು (Hierarchies) ಅವರ ಪದವಿಗಳ ಎಷ್ಟರಮಟ್ಟಿಗೆ ಸೂಚಿಸುತ್ತವೆ ಎಂಬುದನ್ನು ಸ್ಪಷ್ಟಪಡಿಸುವುದು ಕಷ್ಟ ಶಾಸನಗಳಲ್ಲಿ ಪ್ರಧಾನ, ಮಹಾಪ್ರಧಾನ, ದಂಡನಾಯಕ, ಮಹಾದಂಡನಾಯಕ, ಸಚಿವ, ಅಮಾತ್ಯ ಇತ್ಯಾದಿ ಪದಗಳನ್ನು ಉಪಯೋಗಿಸಲ್ಪಟ್ಟಿದ್ದನ್ನು ನಾವು ಕಾಣುತ್ತೇವೆ. ಇವುಗಳಲ್ಲಿ ಯಾವುದು ಹೆಚ್ಚಿನ ಸ್ಥಾನ ಸೂಚಿಸುತ್ತದೆ, ಯಾವುದು ಕೆಳಗಿನ ಸ್ಥಾನ ಸೂಚಿಸುತ್ತದೆ ಎಂಬುದನ್ನು ನಿರ್ಧರಿಸಲಾಗುವುದಿಲ್ಲ. ಉದಾಹರಣೆಗೆ ಪ್ರಧಾನ, ಮಹಾಪ್ರಧಾನ ನಡುವೆ ಮಹಾಪ್ರಧಾನಗಳ ಎಂಬುದು ಪ್ರಧಾನರಿಗಿಂತ ಮೇಲಿನ ಹುದ್ದೆಯನ್ನು ಸೂಚಿಸುತ್ತದೆ ಎಂಬುದು ಸಾಮಾನ್ಯ ತಿಳುವಳಿಕೆ ಆದರೆ ಒಬ್ಬನೇ ವ್ಯಕ್ತಿ ಪ್ರಧಾನ ಮತ್ತೇ ಕೆಲವು ಸಲ ಮಹಾಪ್ರಧಾನ ಅಥವಾ ದಂಡನಾಯಕ ಮತ್ತು ಮಹಾದಂಡನಾಯಕ ಎಂದು ಕರೆಯಲ್ಪಟ್ಟಿದ್ದನ್ನು ನೋಡಿದಾಗ ಈ ರೀತಿ ಖಚಿತವಾದ ಪದವಿಗಳ ಶ್ರೇಣಿ (Hierarchies) ಯನ್ನು ನಿರ್ಧರಿಸಲಾಗುವುದಿಲ್ಲ. ಎಷ್ಟೋ ಸಲ

ಮಹಾಪ್ರಧಾನ, ಮಹಾದಂಡನಾಯಕ ಬಿರುದುಗಳು ಯಾರೊಬ್ಬರ ಯೋಗ್ಯತೆಯನ್ನು ಪ್ರಭಾವವನ್ನು ಅನುಸರಿಸಿ ಕೊಡಲ್ಪಟ್ಟಿದ್ದವೆಂದು ಸೂಚಿತವಾಗುತ್ತದೆ. ಎಷ್ಟೋ ಸಲ ಕೆಲ ವಿದ್ವಾಂಸರು ಒಬ್ಬನು ಮಾಂಡಲಿಕ ಎಂದು ಕರೆಯಲ್ಪಟ್ಟು ಮತ್ತೊಮ್ಮೆ ಮಹಾಮಂಡಲೇಶ್ವರ ಎಂದು ಕರೆಯಲ್ಪಟ್ಟಾಗ ಅವನು ಒಂದು ಸ್ಥಾನದಿಂದ ಮತ್ತೊಂದು ಹೆಚ್ಚಿನ ಸ್ಥಾನಕ್ಕೆ ಪದೋನ್ನತಿಯನ್ನು ಪಡೆದಿದ್ದನೆಂದು ಬರೆಯುತ್ತಾರೆ. ಆದರೆ ನಮ್ಮ ದೃಷ್ಟಿಯಲ್ಲಿ ಹೀಗೆಂದು ಖಚಿತವಾಗಿ ಹೇಳಲಾಗದು. ಕುರುಗೋಡು ಸಿಂದರ ಒಂದು ಶಾಸನದಲ್ಲಿ ಸಿಂದ ರಾಚಮಲ್ಲನ ಮಂತ್ರಿಯಾದ ರೇಚಿರಾಜನು ಮಹಾಪ್ರಧಾನವೆಂದಲ್ಲದೆ ಶ್ರೀಕರಣಿಕ ಎಂದು ಕರೆಯಲ್ಪಟ್ಟಿದ್ದಾನೆ.[೪೦] ಈ ಹಿನ್ನಲೆಯಲ್ಲಿ ಸಿಂದ ಮನೆತನಗಳ ವಿವಿಧ ಅಧಿಕಾರಿಗಳ ಬಗ್ಗೆ ಲಭ್ಯವಿದ್ದಷ್ಟು ಮಾಹಿತಿಯನ್ನು ಸಂಗ್ರಹಿಸಿ ಚರ್ಚಿಸಲಾಗುವುದು.

ಅರಸೊತ್ತಿಗೆಯಂತೆ ಸಾಮಂತಿಕೆಯು ಆನುವಂಶಿಕವಾಗಿತ್ತೆಂಬುದು ಸರ್ವವಿಧಿತ. ಸಿಂದ ಮನೆತನಗಳ ಅಭ್ಯಾಸದಿಂದಲೂ ಇದು ಸ್ಪಷ್ಟವಾಗಿದೆ. ಇಲ್ಲಿ ಎಲ್ಲ ಸಿಂದ ಸಾಮಂತರು ತಮ್ಮ ತಮ್ಮ ಪ್ರದೇಶಗಳನ್ನು ವಂಶಪರಂಪರೆಯಾಗಿ ಆಳುತ್ತಿದ್ದರೆಂಬುದನ್ನು ನೋಡಿದ್ದೇವೆ. ಅರಸರಂತೆ ಇವರಿಗೂ ತಮ್ಮ ತಮ್ಮ ಪ್ರದೇಶಗಳ ರಕ್ಷಣೆಯ ಜವಾಬ್ದಾರಿ ಇರುತ್ತಿತ್ತು. ಅಲ್ಲದೇ ಜನರ ಹಿತಕ್ಕಾಗಿ ಅಗತ್ಯವಾದ ಎಲ್ಲ ಕಾರ್ಯಗಳನ್ನು ಅವರು ಮಾಡಿದ್ದರು.

ಪ್ರಾಚೀನ ರಾಜ್ಯ ವ್ಯವಸ್ಥೆಯಲ್ಲಿ ಯುವರಾಜ ಪದವಿಯೂ ಒಂದು ಹುದ್ದೆಯೇ ಆಗಿದ್ದಿತು ಅರಸನ ಹಿರಿಯ ಮಗನೇ ಯುವರಾಜ ಅಂದರೆ ಚಿಕ್ಕರಾಜ ಎಂದರ್ಥದಲ್ಲಿ. ಅದು ಕೇವಲ ಅಲಂಕಾರಿಕ ಸ್ಥಾನವಾಗಿರದೇ ಜವಾಬ್ದಾರಿಯುತ ಹುದ್ದೆಯೂ ಆಗಿದ್ದಿತು. ಅರಸನು ತನ್ನ ವಯಸ್ಸಿಗೆ ಬಂದ ಹಿರಿಯ ಮಗನನ್ನು ಮುಂದಿನ ಅರಸನಾಗಲು ತರಬೇತಿ ಪಡೆಯುವುದಕ್ಕಾಗಿ ಮತ್ತು ಅಗತ್ಯವಾದ ಅನುಭವವನ್ನು ಪಡೆಯುವುದಕ್ಕಾಗಿ ಈ ರೀತಿ ಯುವರಾಜ ಪದವಿಯನ್ನು ಕೊಡಲಾಗುತ್ತಿದ್ದಿತು. ಚಾಲುಕ್ಯ ೧ನೇ ಸೋಮೇಶ್ವರನು ತನ್ನ ಮಗನನ್ನು ಯುವರಾಜನನ್ನಾಗಿ ನೇಮಿಸಿದ್ದನು. ೬ನೇ ವಿಕ್ರಮಾದಿತ್ಯನು ತನ್ನ ತಮ್ಮನಾದ ಜಯಸಿಂಹನನ್ನು ಯುವರಾಜನೆಂದು ನೇಮಿಸಿದ್ದನು.[೪೧] ಯಲಬುರ್ಗಿ ಸಿಂದ ಮನೆತನದಲ್ಲಿಯೂ ಇಂತಹ ಉದಾಹರಣೆ ಇದೆ. ಈ ಮನೆತನದ ಚಾವುಂಡರಸನು ಕಿಸುಕಾಡು-೭೦, ಬಾಗಡಗೆ-೭೦ ಮತ್ತು ಕೆಳವಡಿ-೩೦೦ ಪ್ರದೇಶಗಳನ್ನು ಆಳುತ್ತಿದ್ದಾಗ ಅವನ ಹೆಂಡತಿ ದೇಮಲದೇವಿ ಮತ್ತು ಅವರ ಮಗ ಕುಮಾರ ಆಚಿದೇವನು ಕಿಸುವೊಳಲ್ ಪಟ್ಟಣವನ್ನು ಕುಮಾರ ವೃತ್ತಿಯಾಗಿ ಆಳುತ್ತಿದ್ದನೆಂದು ಹೇಳಿದೆ. ಇದು ಯುವರಾಜ ಪದವಿ ಎಂಬುದು ನಿಶ್ಚಿತವಾಗಿ ಹೇಳಬಹುದು.[೪೨] ರಾಣಿಯರೂ ಚಿಕ್ಕ ದೊಡ್ಡ

ಪ್ರಾಂತಗಳನ್ನು ಆಳುತ್ತಿದ್ದ ಉದಾಹರಣೆಗಳು ಕರ್ನಾಟಕದ ಇತಿಹಾಸಕ್ಕೆ ಹೊಸತೆನಲ್ಲ. ಚಾಲುಕ್ಯರ ಇತಿಹಾಸದಲ್ಲಿ ಅನೇಕ ಇಂತಹ ಉದಾಹರಣೆಗಳಿವೆ. ೬ನೇ ವಿಕ್ರಮಾದಿತ್ಯನ ರಾಣಿ ಚಂದಲದೇವಿಯು ಅಲಂದೆಸಾಸಿರ ಮತ್ತು ಇತರ ಪ್ರಾಂತಗಳನ್ನು ಆಳುತ್ತಿದ್ದಳು. ೧ನೇ ಸೋಮೇಶ್ವರನ ರಾಣಿ ಕೇತಲದೇವಿಯೂ ಬನ್ನಿವೊಳ್ ಅಗ್ರಹಾರವನ್ನು ಆಳುತ್ತಿದ್ದಳು. ವಿಕ್ರಮಾದಿತ್ಯನ ಇತರ ರಾಣಿಯರಾದ ಪಿರಿಯಕೇತಲದೇವಿ, ಪದ್ಮಲದೇವಿ, ಅಚ್ಚಲದೇವಿ ಮತ್ತು ತಾರಾದೇವಿಯರು ಬೇರೆ ಬೇರೆ ಪ್ರದೇಶಗಳಲ್ಲಿ ಆಳುತ್ತಿದ್ದರೆಂಬ ಬಗ್ಗೆ ಉಲ್ಲೇಖವಿದೆ.[೪೩]

ರಾಜ್ಯದ ಆಡಳಿತದಲ್ಲಿ ಅರಸನ ನಂತರ ಪ್ರಧಾನಿ ಅಥವಾ ಮಹಾಪ್ರಧಾನಿಗೆ ಅತ್ಯುಚ್ಚ ಸ್ಥಾನ. ಶಾಸನಗಳಲ್ಲಿಯ ವರ್ಣನೆಯನ್ನು ಗಮನಿಸಿದರೆ ರಾಜ್ಯ ನಿರ್ವಹಣೆಯಲ್ಲಿ ಇವರದು ಜವಾಬ್ದಾರಿಯುತ ಕಾರ್ಯ ಎಂಬುದು ಸ್ಪಷ್ಟವಾಗುತ್ತದೆ. ಅರಸರಿಗೆ ಸಂಬಂಧಿಸಿದಂತೆ ಚಾಲುಕ್ಯ ೬ನೇ ವಿಕ್ರಮಾದಿತ್ಯನ ಪ್ರಧಾನಿಗಳಾದ ಅನಂತಪಾಲ ದಂಡನಾಯಕ, ಗೋವಿಂದ ದಂಡನಾಯಕ, ಚಾವುಂಡ ದಂಡನಾಯಕ ಉದಾಹರಣೆಗಳನ್ನು ಕೊಡಬಹುದು. ಮಂತ್ರಿಗಳ ಕರ್ತವ್ಯಗಳನ್ನು ಸ್ಪಷ್ಟವಾಗಿ ನಮೂದಿಸುವ ಶಾಸನದ ಪದ್ಯವೊಂದು ಈ ರೀತಿ ಹೇಳಿದೆ.[೪೪]

॥ ಕೆರೆಯಂ ಕಟ್ಟಿಸು, ಬಾವಿಯನ್ನು ಸವೆಸು, ದೇವಾಗಾರಮಮಂ ಮಾಡಿಸ<br>
ಜ್ಜೆರೆಯೊಳ್ ಸಿಲ್ಕಿದನಾಥರುಂ ಬಿಡಿಸು, ಮಿತ್ರರ್ಗ್ಗಿಂಬುಕೆಯ ನಂಬಿದ<br>
ರ್ಗಟ್ಟಿರು ಶಿಷ್ಯರನ್ನು ಪೊರೆ ಏನಿತ್ತಿಂತ್ತಲಂ ಪಿಂದೆ ತಾಂ<br>
ಲಕ್ಷ್ಮೀಧರಾ ಯರದಳ್ಗ ಪಾಲೆರವೊಂದುತೊಟ್ಟ ಕಿವಿಯೊಳ್ ಮಾತ್ಯನ ॥

ಶಾಸನವು ಕ್ರಿ.ಶ. ೧೪೧೦ಕ್ಕೆ ಸೇರಿದ್ದರು, ಈ ಮಾತುಗಳು ಎಲ್ಲ ಕಾಲಕ್ಕೂ ಅನ್ವಯವಾಗುತ್ತವೆ. ಎಂಬುದುಕ್ಕೆ ಸಂದೇಹವಿಲ್ಲ. ಕೆರೆಯನ್ನು ಕಟ್ಟಿಸುವುದು, ಬಾವಿಯನ್ನು ತೋಡಿಸುವುದು, ಅನಾಥರನ್ನು ಎತ್ತಿಹಿಡಿಯುವುದು, ಸಂಕಷ್ಟದಲ್ಲಿ ಸಿಲುಕಿದವರನ್ನು ಸಲಹವುದು ಹೀಗೆ ಒಟ್ಟು ಜನರ ಹಿತರಕ್ಷಣೆಯ ಜವಾಬ್ದಾರಿ ಮಂತ್ರಿಗಳದ್ದಾಗಿದ್ದಿತು. ಇವೆಲ್ಲಕ್ಕೂ ಉದಾಹರಣೆಗಳು ಸೀಮಿತ ಸಂಖ್ಯೆಯ ಸಿಂದ ಮನೆತನಗಳ ಶಾಸನಗಳಲ್ಲಿ ದೊರೆಯದಿದ್ದರೂ ಇವುಗಳ ಛಾಯೆ ಸ್ಪಷ್ಟವಾಗಿ ಕಂಡು ಬರುತ್ತದೆ.

ಆಳರಸರಂತೆ ಸಾಮಂತರಿಗೂ ಮಂತ್ರಿಗಳಿರುತ್ತಿದ್ದರೆಂಬುದು ಸ್ಪಷ್ಟ. ಕುರುಗೋಡು ಸಿಂದರ ೨ನೇ ರಾಚಮಲ್ಲನ ಮಂತ್ರಿಯಾದ ರೆಚೀರಾಜನ ಉದಾಹರಣೆಯನ್ನು ನೋಡಿದ್ದೇವೆ. ಬೆಳಗುತ್ತಿ ಸಿಂದ ಮನೆತನದ ೨ನೇ ಈಶ್ವರದೇವನ ಮಂತ್ರಿಯಾದ ಮಹಾದೇವನ ಉಲ್ಲೇಖ

ಹಳೆನಿಡುನೇಗಿಲು ಶಾಸನದಲ್ಲಿ ಬರುತ್ತದೆ.[೪೫] ಇಲ್ಲಿ ಅವನು ದಂಡನಾಯಕನೆಂದು ಕರೆಯಲ್ಪಟ್ಟಿದ್ದನ್ನು ಗಮನಿಸಬೇಕು. ಇದು ಅಂದಿನ ಕಾಲದಲ್ಲಿ ಸಾಮಾನ್ಯವಾಗಿತ್ತು ಏಕೆಂದರೆ ಮಂತ್ರಿಯಾದವನಿಗೆ ರಕ್ಷಣೆಯ ಕಾರ್ಯದಲ್ಲಿ, ಯುದ್ಧದಲ್ಲಿ ಭಾಗವಗಹಿಸುವುದು ಅವಶ್ಯವಿತ್ತು. ಪ್ರಧಾನಿಗಳು ಸಾಮಾನ್ಯವಾಗಿ ಸೈನ್ಯದ ದಂಡನಾಯಕರು ಆಗಿರುತ್ತಿದ್ದರೆಂಬುದನ್ನು ತೋರಿಸುವ ಅಸಂಖ್ಯೆ ಉದಾಹರಣೆಗಳಿವೆ. ಬೆಳಗುತ್ತಿಯ ಒಂದು ಶಾಸನದಲ್ಲಿ[೪೬] ಆ ಮನೆತನದ ಮಲ್ಲಿದೇವನ ಪ್ರಧಾನರೆಂದು ಹೆಗ್ಗಡೆ ನಾಯಣ್ಣ, ಹೆಗ್ಗಡೆ ಸೋಮಣ್ಣ, ಹೆಗ್ಗಡೆ ಮಾಳ್ಳಯ್ಯ, ಹೆಗ್ಗಡೆ ಬೊಮ್ಮಯ್ಯ ಎಂಬ ನಾಲ್ವರು ಪ್ರಧಾನರ ಹೆಸರುಗಳು ಉಕ್ತವಾಗಿವೆ. ಇವರೆಲ್ಲರೂ ಹೆಗ್ಗಡೆ ಎಂಬುದನ್ನು ಗಮನಿಸಬೇಕು. ಹೀಗೆ ಸಿಂದ ಸಾಮಂತರು ಪ್ರಧಾನಿಗಳನ್ನು ನೇಮಿಸಿಕೊಳ್ಳುತ್ತಿದ್ದ ಬಗ್ಗೆ ಇನ್ನು ಅನೇಕ ಉದಾಹರಣೆಗಳನ್ನು ಕೊಡಬಹುದು.

ಇಲ್ಲಿ ಗಮನಿಸಬೇಕಾದ ಇನ್ನೊಂದು ಅಂಶವೆಂದರೆ, ಪ್ರಧಾನಿಗಳಂತಹ ಅಧಿಕಾರಿ ವರ್ಗಗಳ ಆನುವಂಶಿಕತೆ. ಅರಸೊತ್ತಿಗೆಯ ಆನುವಂಶಿಕತೆ ಸಾರ್ವತ್ರಿಕ ವಿಷಯ. ಆದರೆ ಪ್ರಧಾನಿ ಅಥವಾ ಅಂತಹ ಇತರ ಹುದ್ದೆಗಳು ಸಹ ವಂಶಪಾರಂಪರೆಯಾಗಿ ಬಂದಿರಬೇಕೆಂಬುದು ಕಡ್ಡಾಯವಿರಲಿಲ್ಲ. ಒಬ್ಬ ವ್ಯಕ್ತಿಯ ಯೋಗ್ಯತೆ, ಅವನ ವಿದ್ವತ್ತು, ಅವನ ಸಾಹಸ ಇತ್ಯಾದಿಗಳನ್ನು ನೋಡಿ ಅವನನ್ನು ಪ್ರಧಾನಿಯನ್ನಾಗಿ ನೇಮಿಸಿಕೊಳ್ಳುತ್ತಿದ್ದರು. ಆದರೆ ಈ ಹುದ್ದೆಯು ಸಾಹಸ, ಯೋಗ್ಯತೆಯ ಆಧಾರದ ಮೇಲೆಯೇ ಆನುವಂಶಿಕವಾಗಿರಲು ಸಾಕು.

ಸರ್ವಾಧಿಕಾರಿ ಎಂಬುದು ಇನ್ನೊಂದು ಉನ್ನತ ಹುದ್ದೆ. ಈ ಹುದ್ದೆಯ ಉಲ್ಲೇಖ ಬಹಳಷ್ಟು ಸಿಗುವುದಿಲ್ಲ. ಕುರುಗೋಡು ಸಿಂದರ ೨ನೇ ರಾಚಮಲ್ಲನ ಮಂತ್ರಿಯಾದ ರೇಚಿರಾಜನು ಸರ್ವಾಧಿಕಾರಿ ಮಹಾಪ್ರಧಾನ, ಮಂತ್ರಿ ಚೂಡಾಮಣಿ ಎಂದು ಕರೆಯಲ್ಪಟ್ಟಿದ್ದಲ್ಲದೇ "ಅಭಿನವ ಯೌಗಂಧರಾಯಣ" ಎಂದು ಕರೆಯಲ್ಪಟ್ಟಿದ್ದಾನೆ.[೪೭] ನಮಗೆಲ್ಲ ತಿಳಿದಂತೆ ಯೌಗಂಧರಾಯಣನನು ಪುರಾಣ ಪ್ರಸಿದ್ಧ ಆವಂತಿ ರಾಜ್ಯದ ಉದಯ ಎಂಬ ರಾಜ್ಯ ಮಂತ್ರಿ, ರಾಜಕಾರಣದಲ್ಲಿ ಚಾಣಾಕ್ಷತೆಗೆ ಹೆಸರಾದವನು. ಪ್ರಸ್ತುತ ರೇಚಿರಾಜನು ಅವನಷ್ಟೇ ಚಾಣಾಕ್ಷನೆಂದು ಹೋಲಿಸಲ್ಪಟ್ಟಿದ್ದಾನೆ.

ಸೈನ್ಯದ ಆಡಳಿತವು ರಾಜ್ಯದ ಆಡಳಿತದ ಒಂದು ಮಹತ್ವದ ಭಾಗವಾಗಿದ್ದಿತು. ಸಾಮಂತರೂ ತಮ್ಮದೇ ಆದ ಸೈನ್ಯವನ್ನು ಇಟ್ಟುಕೊಳ್ಳುತ್ತಿದ್ದರು ಎಂಬುದನ್ನು ಹಿಂದೆಯೇ ಹೇಳಲಾಗಿದೆ. ಸೈನ್ಯಾಧಿಕಾರಿಗಳ ಹೆಸರುಗಳು, ಹುದ್ದೆಗಳು ಬಹಳಷ್ಟು ಸಿಗುತ್ತವೆ. ಸಿಂದ ಶಾಸನಗಳಿಗೆ ಸೀಮಿತವಾಗಿ ಸೈನ್ಯಾಧಿಕಾರಿಗಳನ್ನು ಹೆಸರಿಸಬಹುದು. ಯಲಬುರ್ಗಿ ಸಿಂದರ

ವೀರಬಿಜ್ಜಳನ ಸೈನ್ಯಾಧಿಕಾರಿಯಾದ ಮಾಧವದಂಡನಾಥನು ಹಿರಿಯ ದಂಡನಾಯಕ, ಭುಜಬಲ ದಂಡನಾಯಕ, ಸಾಹಸೋತ್ತುಂಗ ಎಂದು ವೀರಬಿಜ್ಜಳದೇವನ ಬಲಗೈ ಎಂದೂ ವರ್ಣಿಸಲ್ಪಟ್ಟಿದ್ದಾನೆ. ಸಿಂದಾನ್ವಯ ರಾಜ್ಯ ಸಮುದ್ಧರಣ ಎಂಬ ಬಿರುದು ಪಡೆದಿದ್ದಾನೆ. ಇವನ ಬಿರುದಾವಳಿಗಳನ್ನು ನೋಡಿದರೆ ಇವನು ವೀರಬಿಜ್ಜಳನ ಉಚ್ಛ ಸೈನ್ಯಾಧಿಕಾರಿ ಎಂಬುದು ಸ್ಪಷ್ಟವಾಗುತ್ತದೆ.[೪೮]

ಬೆಳಗುತ್ತಿ ಸಿಂದ ಈಶ್ವರದೇವನ ಸೈನ್ಯಾಧಿಕಾರಿ ಚೆಣ್ಣಯ್ಯಸಹಾಣಿ ತನ್ನ ಒಡೆಯನ ಆಣತಿಯಂತೆ ಮಾದನಬಾಗಿಯ ಬೇಡರ ಪಡೆಯನ್ನು ಎದುರಿಸಿ ಯುದ್ಧದಲ್ಲಿ ಮೃತನಾದನು.[೪೯] ಇಲ್ಲಿ ಸಾಹಣಿ ಎಂಬ ಪದ ಸೈನ್ಯಾಧಿಕಾರಿಯನ್ನು ಸೂಚಿಸುತ್ತದೆ. ಸಂಸ್ಕೃತದಲ್ಲಿ ಹಸ್ತಸಾಧನಿಕ, ಅಶ್ವಸಾಧನಿಕ ಎಂಬ ಪದಗಳು ಸಿಗುತ್ತಿದ್ದು, ಆನೆಗಳ ಅಥವಾ ಅಶ್ವಪಡೆಗಳ ಮುಖ್ಯಸ್ಥರೆಂದು ಅರ್ಥವಾಗುತ್ತದೆ. ಈ ಚೆಣ್ಣಯ್ಯಸಹಾಣಿ ಯುದ್ಧದಲ್ಲಿ ಮೃತನಾದಾಗ ಈಶ್ವರದೇವನು ಪರಿಹಾರವೆಂದು ಅವನ ಮಗ ಮತ್ತು ತಮ್ಮನ ಮಕ್ಕಳಿಗೆ ವಂಶಪಾರಂಪರ್ಯವಾಗಿ ಸಲ್ಲುವಂತೆ ಭೂಮಿಯನ್ನು ಹಾಕಿಕೊಟ್ಟನೆಂದು ಶಾಸನ ಹೇಳುತ್ತದೆ. ನಾಳ್ಪ್ರಭು ಎಂಬ ಹುದ್ದೆಯು ನಾಡಿನ ಉಚ್ಛ ಅಧಿಕಾರಿಯನ್ನು ಸೂಚಿಸಿದರೂ, ಇಂತಹ ಹುದ್ದೆಗಳ ನಿಜವಾದ ಸ್ವರೂಪವೇನು ಅದರ ಅಧಿಕಾರದ ವ್ಯಾಪ್ತಿ ಏನು ಎಂದು ಸ್ಪಷ್ಟವಾಗಿ ಗೊತ್ತಾಗುವುದಿಲ್ಲ.

ಬೆಳಗುತ್ತಿ ಸಿಂದ ೨ನೇ ಈಶ್ವರದೇವನ ಶಾಸನವೊಂದು ಗಂಗನಾಡಿನ ಪ್ರಭು ಕಾಳಯ್ಯನೆಂಬುವನನ್ನು ಹೆಸರಿಸುತ್ತದೆ.[೫೦]

ಶಾಸನಗಳಲ್ಲಿ ಅನೇಕ ಹುದ್ದೆಗಳ ಹೆಸರುಗಳು ಅವುಗಳ ಸರಿಯಾದ ನಿಖರವಾದ ಸ್ವರೂಪವನ್ನು ಕಂಡುಹಿಡಿಯುವುದು ಕಷ್ಟವೇ. ಒಟ್ಟಿನಲ್ಲಿ ರಾಜ್ಯದ ಆಡಳಿತದಲ್ಲಿ ಅನೇಕ ವಿಧದ ಅಧಿಕಾರಿಗಳು ಇರುತ್ತಿದ್ದರು ಎಂದು ಸ್ಪಷ್ಟವಿದೆ. ಅಂತಹ ಕೆಲವು ಶಾಸನೋಕ್ತ ಹುದ್ದೆಗಳನ್ನು ಕೆಳಗೆ ಕೊಡಲಾಗಿದೆ.

೧) ಮೇಲಾಳಿಕೆಯ ದಂಡನಾಯಕ–ದಂಡನಾಯಕ– ಬಹುಶಃ ಆಡಳಿತದ ಒಟ್ಟು ಮೇಲ್ವಿಚಾರಕ– ಉದಾಹರಣೆ ಮೇಲಾಳಿಕೆಯ ದಂಡನಾಯಕ ಮಹದೇವ[೫೧]

೨) ಹಡಪವಳ–ಸಾಂಪ್ರದಾಯಿಕವಾಗಿ ಅರಸನ ವೀಳ್ಯದ ಪೆಟ್ಟಿಗೆಯ ಅಧಿಕಾರಿ. ಅರಸನಿಗೆ ಎಲೆ ಅಡಿಕೆ ಕೊಡುವುದಕ್ಕೆ ಓರ್ವ ಅಧಿಕಾರಿ ಇರುತ್ತಿದ್ದ. ಹಡಪದ ಎಂದರೆ ಚೀಲ ಅಥವಾ ಪೆಟ್ಟಿಗೆಯ ಅಧಿಕಾರಿ– ಹಡಪವಳ ರೇಚಿರಾಜ.[೫೨]

೩) ಶ್ರೀಕರಣ–ಬಹುಶಃ ಲೆಕ್ಕಪತ್ರ ಅಧಿಕಾರಿ– ಶ್ರೀಕರಣಿಕ ರೇಚಿರಾಜ.[೫೩]

೪) ಜಿನಸಾಲೆ ಅಧಿಷ್ಠಾಯಕ – ಬಹುಶಃ ಜೈನ ದೇವಾಲಯಗಳ ಮೇಲಾಧಿಕಾರಿ–ಜಿನಸಾಲೆ ಅಧಿಷ್ಠಾಯಕ ದಾಸಬೊಮ್ಮ.[೫೪]

೫) ಪೆರ್ಗಡೆ–ಹೆಗ್ಗಡೆ, ಮುಖ್ಯಸ್ಥ – ಈ ಹುದ್ದೆಯು ಒಂದು ಊರಿನಿಂದ ಹಿಡಿದು ರಾಜ್ಯದವರಿಗೂ ಬೇರೆ ಬೇರೆ ಹಂತಗಳಲ್ಲಿ ಬೇರೆ ಬೇರೆ ಅಧಿಕಾರ ವ್ಯಾಪ್ತಿಯನ್ನು ಹೊಂದಿದಂತೆ ತೋರುತ್ತದೆ. ಹೀಗೆ ಆಡಳಿತ ವ್ಯವಸ್ಥೆಗಳನ್ನು ನೋಡಿಕೊಳ್ಳಲು ಬೇರೆ ಬೇರೆ ಹಂತಗಳಲ್ಲಿ ಹಿರಿ ಕಿರಿಯ ಅಧಿಕಾರಿಗಳು ಇರುತ್ತಿದ್ದರೆಂಬುದು ಸ್ಪಷ್ಟವಾಗುತ್ತದೆ.

## ಅರ್ಥ ವ್ಯವಸ್ಥೆ

ಯಾವುದೇ ಸರ್ಕಾರಕ್ಕಾಗಲಿ ಆರ್ಥಿಕ ಸಧೃಡತೆಯೇ ಅದರ ಬೆನ್ನೆಲವು ಎಂಬುದು ಸರ್ವವಿದಿತ. ಪ್ರಾಚೀನ ಸಾಮ್ರಾಜ್ಯಗಳ ಕಾಲದಲ್ಲಿಯೂ ಅಷ್ಟೇ, ಸರ್ಕಾರಗಳ ಮೂಲ ಆದಾಯಗಳೆಂದರೆ, ಪ್ರಮುಖವಾಗಿ ಕರಗಳು. ಉದಾಹರಣೆಗೆ ಒಕ್ಕಲುತನದ ಮೇಲಿನ ಕರ, ವ್ಯಾಪಾರದ ಮೇಲಿನ ಕರ, ಸರಕು ಸಾಗಾಣಿಕೆಗಳ ಮೇಲಿನ ಕರ ಇತ್ಯಾದಿ ಇವುಗಳಲ್ಲಿ ಮುಖ್ಯವಾದ ಆದಾಯವೆಂದರೆ ಒಕ್ಕಲತನದ ಮೇಲಿನ ಕರ.

ಈ ಕರದ ಸ್ವರೂಪವನ್ನು ಚರ್ಚಿಸುವಾಗ ಭೂಮಿಯ ಒಡೆತನದ ಬಗ್ಗೆ ವಿವರಿಸಬೇಕಾಗುತ್ತದೆ. ಅರಸನು ಸಾಮ್ರಜ್ಯದ ಒಡೆಯನಾದುದರಿಂದ ಭೂಮಿಯ ಎಲ್ಲ ಒಡೆತನವು ಅವನಿಗೆ ಸೇರಿದ್ದು, ಖಾಸಗಿ ಒಡೆತನಕ್ಕೆ ಆಸ್ಪದವಿರಲಿಲ್ಲ ಎಂಬ ಒಂದು ಅಭಿಪ್ರಾಯವಿದೆ. ಆದರೆ ನಮ್ಮ ಆಕರಗಳನ್ನು ಅಭ್ಯಸಿಸಿದಾಗ ಇಂಥ ಅಭಿಪ್ರಾಯ ಸರಿಯಲ್ಲ ಎಂದು ಅನಿಸುತ್ತದೆ. ತಾತ್ವಿಕವಾಗಿ ಅರಸನೇ ಎಲ್ಲ ಭೂಮಿಯ ಒಡೆಯ ಎಂಬುದು ಸರಿಯಿದ್ದರೂ, ಖಾಸಗಿ ಜನರು ಅಂದರೆ ಪ್ರಜೆಗಳು ಆಸ್ತಿಯ ಮಾಲೀಕತ್ವವನ್ನು ಹೊಂದಿರುತ್ತಿದ್ದರು. ಈ ಮಾತಿಗೆ ಒಂದು ಪ್ರಮುಖ ಆಧಾರವೆಂದರೆ, ಅರಸನು ದೇವಾಲಯಗಳಿಗಾಗಲಿ ಅಥವಾ ಇತರ ಕಾರ್ಯಗಳಿಗಾಗಲಿ ಭೂಮಿದಾನ ಮಾಡುವಾಗ ಖಾಸಗಿ ಜನರಿಗೆ ಸೇರಿದ ಭೂಮಿಯನ್ನು ಹಣ ಕೊಟ್ಟು ಪಡೆದು ಅದನ್ನು ದಾನವಾಗಿ ಕೊಡುತ್ತಿದ್ದನು ಎಂದು ತೋರಿಸುವ ಬಹಳಷ್ಟು ಉದಾಹರಣೆಗಳು ನಮ್ಮ ಶಾಸನದಲ್ಲಿ ದೊರೆಯುತ್ತವೆ. ಹೀಗೆ

ಮಾಡಿದ ದಾನಕ್ಕೆ 'ಕ್ರಯದಾನ' ಎಂಬ ಹೆಸರಿದ್ದಿತು. ಖಾಸಗಿ ಒಡೆತನಕ್ಕೆ ಅವಕಾಶವಿತ್ತೆಂದಾಗ ಭೂಮಿಯ ಮೇಲೆ ಕರವನ್ನು ಕೊಡುವುದು ಅಷ್ಟೇ ಅಗತ್ಯವಾಗಿತ್ತು ಎನ್ನಬಹುದು.

**ಒಕ್ಕಲತನದ ಮೇಲೆ ಕರ :**

ಒಕ್ಕಲತನದ ಭೂಮಿಯ ಮೇಲೆ ಕರಾಕರಣೆಯು ಮಣ್ಣಿನ ಸ್ವರೂಪ, ಫಲವತ್ತತೆ, ನೀರಾವರಿ ಸೌಲಭ್ಯಗಳು ಇತ್ಯಾದಿಗಳನ್ನು ಅವಲಂಬಿಸಿರುತ್ತಿದ್ದಿತು. ನಮಗೆ ದೊರೆಯುವ ಅಸಂಖ್ಯೆ ಶಾಸನಗಳಲ್ಲಿ ಗದ್ಯೆ, ಬೆದ್ದಲೆ, ಮಕ್ಕಿ, ಕಿಸುಕಾಡು, ಕೆರೆ ಎಂದು ಮುಂತಾಗಿ ಭೂಮಿಯ ಪ್ರಬೇಧಗಳನ್ನು ನಾವು ಕಾಣುತ್ತೇವೆ. ಸಿಂದರ ಶಾಸನಗಳಲ್ಲಿಯೂ ಇಂಥ ಹಲವಾರು ಪ್ರಬೇಧಗಳ ಉಲ್ಲೇಖ ಬರುತ್ತದೆ. ಉದಾಹರಣೆಗೆ ಕುರುಗೋಡಿನ ಸಿಂದರ ಒಂದು ಶಾಸನದಲ್ಲಿ ತೆಕ್ಕಿಲು ಮತ್ತರು, ಕಿಸುಮತ್ತರು ಎಂಬ ಉಲ್ಲೇಖ ಬರುತ್ತದೆ. ತೆಕ್ಕಲು, ಮತ್ತರು ಎಂಬುದು ಭೂಮಾನದ ಒಂದು ಘಟಕ. ತೆಕ್ಕಲು, ಮತ್ತರು ಅಂದರೆ ಸವಳು ಭೂಮಿ ಎಂದು ಹೇಳಲಾಗುತ್ತದೆ.[೫೫] ಕಿಸು ಅಂದರೆ ಕೆಂಪು ಭೂಮಿ. ಇದಕ್ಕೆ ಮಸಾರಿ ಭೂಮಿ ಎಂಬ ಪದವೂ ಉತ್ತರ ಕರ್ನಾಟಕದಲ್ಲಿ ಪ್ರಚಲಿತವಿದೆ.[೫೬] ಎಷ್ಟೋ ಸಲ ಇದನ್ನು ಕೆಂಗಾಡು ಎಂದು ಶಾಸನಗಳಲ್ಲಿ ಕರೆದಿದೆ.[೫೭] ಇನ್ನೊಂದಡೆ ಕರಿಯ ಭೂಮಿಯ ಉಲ್ಲೇಖವಿದೆ. ಇದು ಇಂದಿನ ಎರೆಯಭೂಮಿ[೫೮] ಗದ್ದೆ ಎಂಬುದು ನೀರಾವರಿ ಭೂಮಿ ಇದರ ಉಲ್ಲೇಖ ಅಸಂಖ್ಯ ಶಾಸನಗಳಲ್ಲಿ ಬರುತ್ತದೆ. ಇನ್ನೊಂದಡೆ ನವಣೆಕಮ್ಮ ಎಂಬ ಉಲ್ಲೇಖ ಬರುತ್ತದೆ. ಇದು ನವಣೆ ಬೆಳೆಯುವ ಭೂಮಿ ಎಂದು ಇರಬಹುದು.[೫೯] ಸಿಂದಗೆರೆಯ ಒಂದು ಶಾಸನದಲ್ಲಿ ಕಾಶ್ಮೀರ ಭೂಮಿ ಎಂಬ ಉಲ್ಲೇಖವಿದೆ. ಬಹುಶಃ ಈ ಭೂಮಿ ಕುಂಕುಮ ಬಣ್ಣದ ಭೂಮಿಯನ್ನು ಸೂಚಿಸುತ್ತದೆ.[೬೦] ಬೆದ್ದಲು ಎಂಬ ಭೂಮಿಯು, ನೀರಿಗಾಗಿ ಮಳೆಯ ಆಶ್ರಿತ ಭೂಮಿ ಎನ್ನಬಹುದು.[೬೧] ನೀರಾರಂಭ, ಕಾಡಾರಂಭ ಎಂಬ ಎರಡು ಪದಗಳು ಸಾಮಾನ್ಯವಾಗಿ ಶಾಸನದಲ್ಲಿ ದೊರೆಯುತ್ತವೆ.[೬೨] ನೀರಾರಂಭ ಎಂದರೆ[೬೩] ನೀರಾವರಿಯನ್ನು ಅವಲಂಬಿಸಿದ ಕೃಷಿ ಭೂಮಿ ಹಾಗೆಯೇ ಕಾಡಾರಂಭ ಎಂದರೆ ಮಳೆಯನ್ನೇ ಆಶ್ರಯಿಸಿ ಮಾಡುವ ಒಕ್ಕಲುತನ.

ಭೂಮಿಯ ಮೇಲೆ ಕರಾಕರಣೆ ಮಾಡುವಾಗ ನಿರ್ದಿಷ್ಠ ಅಳತೆಯ ಒಂದು ಘಟಕವನ್ನು ನಿರ್ಧರಿಸುವ ಅಗತ್ಯವಿದ್ದಿತು. ಹೀಗಾಗಿ ಭೂಮಿಯನ್ನು ಅಳೆಯುವ ಪದ್ಧತಿಯು ಪ್ರಚಲಿತವಿತ್ತು. ಭೂಮಿಯನ್ನು ಅಳೆಯಲು ಕಾಲು ಅಥವಾ ಪಾದ ಒಂದು ವಿಧಾನವಾಗಿದ್ದರೆ, ಕೈ ಅಥವಾ ಮೊಳ ಮತ್ತು ಮಾರು ಇನ್ನೊಂದು ವಿಧಾನವಾಗಿತ್ತು. ಆದರೆ ಹೆಚ್ಚು ಪ್ರಚಲಿತ ವಿಧಾನವೆಂದರೆ

ವಿವಿಧ ಅಳತೆಯ ಕೋಲುಗಳು. ಶಾಸನಗಳಲ್ಲಿ ಹದಿನೆಂಟರ ಗೇಣುಕೋಲು, ನಾಲವತ್ತೇರಡರ ಗೇಣು ಕೋಲು ಎಂಬ ಉಲ್ಲೇಖ ಬರುತ್ತದೆ.[೧೪] ಎಷ್ಟೋ ಸಲ ಇಂಥ ಅಳತೆ ಗೋಲುಗಳಿಗೆ ವ್ಯಕ್ತಿಗಳ ಅಥವಾ ಊರಿಗಳ ಹೆಸರುಗಳು ಹೊಂದಿರುತ್ತಿದ್ದವು. ಉದಾಹರಣೆಗೆ : ಗಂಗನಗಳೆ,[೧೫] ಕಳವಿನಗಳೆ[೧೬], ಕೂಗಳಿಗಳೆ.[೧೭] ಈಗಿನ ಎಕರೆ ಅಥವಾ ಗುಂಠೆ ಇದ್ದಂತೆ ಹಿಂದಿನ ಕಾಲದಲ್ಲಿ ಮತ್ತರ್ ಅಥವಾ ಮತ್ತಲ್ ಎಂಬುದು ದೊಡ್ಡ ಭೂ ಅಳತೆಯಾಗಿದ್ದಿತು. ಕಮ್ಮ ಅಥವಾ ಕಂಭ ಅಳತೆಯು ಕೂಡ ಇನ್ನೊಂದು ಘಟಕ. ಇದು ಮತ್ತರಗಿಂತ ಚಿಕ್ಕದಾಗಿದ್ದು, ೧೦೦ ಕಮ್ಮಗಳನ್ನು ಸೇರಿಸಿದರೆ ಒಂದು ಮತ್ತರ್ ಆಗುತಿತ್ತು ಎಂದು ನಿರ್ಧರಿಸಲಾಗಿದೆ.[೧೮] ಹಾದ ಎಂಬುದು ಇನ್ನೊಂದು ಭೂಮಾಪನ. ಮತ್ತರ್ ಅಥವಾ ಮತ್ತಲ್ ಈ ಶಬ್ದದ ಅರ್ಥ ತಿಳಿಯಲಾಗಿಲ್ಲ. ಆದರೆ ಇದಕ್ಕೆ ಸಂವಾದಿಯಾಗಿ ಸಂಸ್ಕೃತ ಶಾಸನಗಳಲ್ಲಿ ನಿವರ್ತನ ಎಂಬ ಪದ ಸಿಗುತ್ತದೆ.[೧೯] ಇದು ಅತೀ ಹಿಂದಿನ ಕಾಲದ ಭೂಮಿ ಅಳತೆಯ ಪದ್ಧತಿಯನ್ನೇ ಸೂಚಿಸುತ್ತದೆ. ನಿವರ್ತನ ಶಬ್ದಾರ್ಥ ಎಂದರೆ ತಿರುಗಿ ಬರುವುದು. ಒಬ್ಬ ವ್ಯಕ್ತಿ ನಿರ್ದಿಷ್ಟ ಅವಧಿಯಲ್ಲಿ, ಎಲ್ಲಿಯವರೆಗೆ ಹೋಗಿ ಅದೇ ಸ್ಥಾನಕ್ಕೆ ತಿರುಗಿ ಬರಲು ಶಕ್ಯವೋ ಅಷ್ಟೂ ಭೂಮಿಗೆ ನಿವರ್ತನ ಎಂದು ಹೆಸರು. ಇದೇ ಪ್ರಕಾರ ಗೋಪ್ರಚಾರ ಎಂಬ ಶಬ್ದವು ಭೂಮಿಯ ಅಳತೆಯನ್ನು ಸೂಚಿಸುತ್ತದೆ. ಗೋಪ್ರಚಾರ ಅಂದರೆ ಒಂದು ನಿರ್ದಿಷ್ಟ ಅವಧಿಯಲ್ಲಿ ಒಂದು ಹಸುವು ಎಷ್ಟು ಭೂಮಿಯನ್ನು ಮೇಯುತ್ತಾ ತಿರುಗತ್ತದೆಯೋ ಅಷ್ಟೂ ಭೂಮಿಯನ್ನು ಒಂದು ಘಟಕವಾಗಿ ಪರಿಗಣಿಸಿದ್ದರು.[೨೦]

ಒಕ್ಕುಲತನದ ಭೂಮಿ ಅಳೆಯಲು ವಿವಿಧ ಅಳತೆಯ ಕೋಲು ಉಪಯೋಗಿಸುತ್ತಿದ್ದರೆ, ಮನೆಯ ನಿವೇಶನಗಳನ್ನು ಅಳೆಯಲು ಕೈ ಮತ್ತು ಮೊಳ ಅಳತೆಯನ್ನು ಉಪಯೋಗಿಸುತ್ತಿದ್ದರು.[೨೧] ಒಂದು ಶಾಸನದಲ್ಲಿ ೧೨ ಕೈಯ ಮನೆ ಎಂಬ ಉಲ್ಲೇಖ ಬರುತ್ತದೆ.[೨೨] ಹೀಗೆ ಅಳೆದ ಭೂಮಿಯ ಗಡಿಯನ್ನು ಗುರುತಿಸಲು ಕಲ್ಲುಗಳನ್ನು ನಿಲ್ಲಿಸುತ್ತಿದ್ದರು. ಇಂತಹ ಕಲ್ಲುಗಳ ಮೇಲೆ ಶಿವಲಿಂಗ ಚಿತ್ರ ಕೊರೆಯುತ್ತಿದ್ದರು. ಹೀಗಾಗಿ ಅದಕ್ಕೆ ಲಿಂಗಮುದ್ರೆ ಕಲ್ಲು ಎಂಬ ಹೆಸರು ಬಂದಿತು. ವಾಮನಮುದ್ರೆಯ ಕಲ್ಲು ಎಂಬುದು ಸಾಮಾನ್ಯವಾಗಿ ಎಲ್ಲ ಶಾಸನಗಳಲ್ಲಿ ಬರುವ ಶಬ್ದ ಇಂತಹ ಕಲ್ಲುಗಳ ಮೇಲೆ ವಾಮನಾವತಾರದ ಚಿತ್ರವಿರುದ್ದಿತು. ನೇಗಿಲ ಕಲ್ಲು ಎಂಬುದು ಇನ್ನೊಂದು ಬಗೆಯ ಗಡಿಯ ಕಲ್ಲು. ಇದರ ಮೇಲೆ ನೇಗಿಲ ಚಿತ್ರವಿರುತ್ತಿದ್ದಿತು.[೨೩] ಈ ರೀತಿಯ ನಿರ್ದಿಷ್ಟ ಅಳತೆಯ ಭೂಮಿಯ ಘಟಕಗಳ ಮೇಲೆ ಕರಾಕರಣೆಯನ್ನು ಮಾಡಲಾಗುತ್ತಿತ್ತು. ಸಾಮಾನ್ಯವಾಗಿ ಒಕ್ಕುಲತನ ಭೂಮಿಯ ಕರಾಕರಣೆಗೆ

ಅರುವಣ ಸಿದ್ಧಾಯ ಎಂಬ ಹೆಸರಿದ್ದಿತು. ಅರುವಣ ಎಂದರೆ ಆರುಹಣ ಅಂದರೆ, ಮೂಲತಃ ಆರು ಹಣ ಅಥವಾ ಪಣಗಳು ತೆರಿಗೆದರವೆಂದು ನಿರ್ಧರಿಸಲ್ಪಟ್ಟಿತ್ತೆಂದು ತೋರುತ್ತದೆ.[೭೪]

ಅದೇ ರೀತಿಯ ವ್ಯಾಪರಕ್ಕೆ ಸಂಬಂಧಿಸಿದಂತೆ, ವಸ್ತುಗಳ ಘಟಕಗಳನ್ನು ಹೇರು, ಹೊರೆ ಎಂಬ ಮುಂತಾಗಿ ನಿರ್ಧರಿಸಿ, ಕರಾಕರಣೆಯನ್ನು ಮಾಡಲಾಗುತ್ತಿತ್ತು. ಘನ ವಸ್ತುಗಳ ಅಳತೆ, ದ್ರವ ಪದಾರ್ಥಗಳ ಅಳತೆ ಇವೆಲ್ಲವುಗಳಿಗೂ ಬೇರೆ ಬೇರೆ ವ್ಯವಸ್ಥೆಗಳಿದ್ದವು. ದ್ರವವನ್ನು ಅಳೆಯಲು ನಿಶ್ಚಿತ ಅಳತೆ ಪಾತ್ರೆಗಳು ಉಪಯೋಗಿಸಲ್ಪಡುತ್ತಿದ್ದವು. ಇಂತಹ ಒಂದು ಪಾತ್ರೆಗೆ ಮಾನ ಎನ್ನುತ್ತಿದ್ದರು. ಸೊಳಸ, ಕೊಳಗ ಇವು ದ್ರವ ಅಳತೆಯ ಸಾಧನಗಳಾಗಿದ್ದವು. ಕೊಳಗವನ್ನು ಜೋಳವನ್ನು ಅಳೆಯಲು ಸಹ ಉಪಯೋಗಿಸುತ್ತಿದ್ದ ಬಗ್ಗೆ ಉಲ್ಲೇಖವಿದೆ.[೭೫] ಕಾಳನ್ನು ಅಳೆಯಲು ಸೊಳಸ ಅಳತೆ ಉಪಯೋಗಿಸಲ್ಪಡುತ್ತಿದ್ದ ಉಲ್ಲೇಖವಿದೆ.[೭೬] ಸೊಂಟಿಗೆ ಅಥವಾ ಇಂದಿನ ಸೌಟು ಕೂಡಾ ಅಳತೆಯ ಇನ್ನೊಂದು ಘಟಕವಾಗಿದ್ದಿತು.[೭೭] ಅದರಂತೆ ಆಸ್ತಿಯ ಮೇಲಿನ ಕರ, ವಸ್ತು ವಾಹನಗಳ ಮೇಲಿನ ಕರ, ವೃತ್ತಿ ತೆರಿಗೆ, ಮದುವೆ ಮುಂತಾದ ಆಚರಣೆಗಳ ಮೇಲಿನ ಕರ ಇತ್ಯಾದಿ ಅನೇಕ ವಿಧದ ಕರಗಳ ಉಲ್ಲೇಖ ಶಾಸನಗಳಲ್ಲಿ ದೊರೆಯುತ್ತವೆ. ಸಾಮಾನ್ಯವಾಗಿ ಇಂತಹ ತೆರಿಗೆಗಳಿಗೆ ತೆರೆ, ಸುಂಕ ಎಂಬ ಪದಗಳು ಉಪಯೋಗಿಸಲ್ಪಡುತ್ತಿದ್ದವು. ಪೆರ್ಜುಂಕ, ಹೆಜ್ಜುಂಕ ಎಂಬ ಸಾಮಾನ್ಯ ಸುಂಕದ ಪದಗಳು ಸಿಗುತ್ತವೆ.[೭೮]. ಹೆಚ್ಚು ಆದಾಯ ತರುವ ತೆರಿಗೆಯನ್ನು ಸುಂಕ ಎಂದು ಸೂಚಿಸಲಾಗುತ್ತಿತ್ತು. ಸಿಂದ ಶಾಸನಗಳಲ್ಲಿ ಬರುವ ಹಲವು ಸುಂಕಗಳ ಹೆಸರು ಈ ರೀತಿಯಾಗಿವೆ. ಹುದುಂಕದೆರೆ,[೭೯] ಬಿರವಣ[೮೦] ತಿಪ್ಪೆ ಸುಂಕ[೮೧] (ಗೊಬ್ಬರದ ಗುಣಿಗಳ ಮೇಲಿನ ಸುಂಕ), ಗಾಣದೆರೆ (ಎಣ್ಣೆಯ ಗಾಣಗಳ ಮೇಲಿನ ಸುಂಕ), ಮನೆದೆರೆ[೮೨] (ವಾಸಿಸುವ ಮನೆಗಳ ಮೇಲಿನ ಸುಂಕ), ಕಪ್ಪಡದ ಸುಂಕ[೮೩] (ಬಟ್ಟೆಯ ಮೇಲಿನ ಸುಂಕ), ಪನ್ನಾಯ (ವಿಳ್ಯದೆಲೆ ಮೇಲಿನ ಸುಂಕ), ಒಕ್ಕುಲದೆರೆ (ಒಕ್ಕುಲತನ ಕುಟುಂಬಗಳ ಮೇಲಿನ ಅವರ ಹುಟ್ಟುವಳಿ ಆಧರಿಸಿ ಹಾಕುವ ಕರ.[೮೪]

ತೆರಿಗೆಗಳನ್ನು ವಸ್ತು ಅಥವಾ ಹಣದ ರೂಪದಲ್ಲಿ ಪಡೆಯಲಾಗುತ್ತಿತ್ತು. ವೀಳ್ಯದೆಲೆ ಕಟ್ಟಿಗೆ ಹೇರು ಎನ್ನುತ್ತಿದ್ದರು. ಕೊಯ್ದು ಹೇರು[೮೫] ಉದಾಹರಣೆಗೆ ಕೊಯ್ದು ಹೇರಿಂಗೆ ವಿಸಮಂ ಬಿಟ್ಟರು ; ಎಂಬ ಉಲ್ಲೇಖದಲ್ಲಿ ಒಂದು ವಿಸದ ಕರವನ್ನು ಕೊಡಬೇಕಾಗಿತ್ತು ಎಂದು ಅರ್ಥವಾಗುತ್ತದೆ.[೮೬] ವಸ್ತುಗಳ ಮೇಲೆ ಮಾರಾಟದ ತೆರಿಗೆ ಹಾಗೂ ಖರೀದಿ ತೆರಿಗೆ, ಎರಡನ್ನೂ ಆಕರಿಸುತ್ತಿದ್ದರೆಂದು ತೋರುತ್ತದೆ. ಕುರುಗೋಡು ಸಿಂದರ ಶಾಸನದಲ್ಲಿ "ಕೊಟ್ಟಲ್ಲಿ ಭತ್ತ ; ಸೊಳಸ ಎರಡು, ಕೊಂಡಲ್ಲಿ

ಸೊಳಸ ಎರಡು ಮತ್ತು ಕೊಟ್ಟಲ್ಲಿ ಕಾಣಿ ಒಂದು, ಕೊಂಡಲ್ಲಿ ಕಾಣಿ ಒಂದು" ಎಂದು ಉಕ್ತವಾಗಿದೆ.[೮೭]

ತೆರಿಗೆಯನ್ನು ಹಣದ ರೂಪದಲ್ಲಿ ಪಡೆಯುತ್ತಿದ್ದಾಗ, ಹಣ ಅಥವಾ ನಾಣ್ಯಗಳು ಇದ್ದಿರಲೇಬೇಕು. ಚಾಲುಕ್ಯ ಶಾಸನಗಳಲ್ಲಿ ಈ ಬಗ್ಗೆ ವಿಪುಲವಾದ ಮಾಹಿತಿ ದೊರೆಯುತ್ತದೆ. ಚಾಲುಕ್ಯರ ಶಾಸನದಲ್ಲಿ ಬೇರೆ ಬೇರೆ ತರಹದ ನಾಣ್ಯಗಳ ಕುರಿತು ಮಾಹಿತಿ ಸಿಗುತ್ತದೆ. ಆದರೆ ಸಾಮಂತ ಅರಸರಿಗೆ ಸಾಕಷ್ಟು ಸ್ವಾತಂತ್ರ್ಯವಿದ್ದರೂ ನಾಣ್ಯಗಳನ್ನು ಟಂಕಿಸುವ ಅಧಿಕಾರ ಇರಲಿಲ್ಲ ಎಂದು ತೋರುತ್ತದೆ. ಚಾಲುಕ್ಯ ಸಾಮ್ರಾಜ್ಯದಲ್ಲಿಯ ಪ್ರಚಲಿತ ನಾಣ್ಯಗಳೇ ಇವರ ಪ್ರದೇಶಗಳಲ್ಲಿಯೂ ಪ್ರಚಲಿತವಿದ್ದವೆಂಬುದು ಸ್ಪಷ್ಟ. ಚಾಲುಕ್ಯ ಸಾಮ್ರಾಜ್ಯದಲ್ಲಿ ಹಣವನ್ನು ಟಂಕಿಸುವ ಎರಡು ಪ್ರಮುಖ ಟಂಕಸಾಲಿಗಳು ಮೇಲಿಂದ ಮೇಲೆ ಸಿಗುತ್ತವೆ. ೧) ಲೊಕ್ಕಿಗುಂಡಿ ಅಥವಾ ಇಂದಿನ ಲಕ್ಕುಂಡಿ (ಗದಗ ಜಿಲ್ಲೆ), ಲೊಕ್ಕಿ ಗದ್ಯಾಣ, ಲೊಕ್ಕಿಯ ಪೊನ್ನ ಇತ್ಯಾದಿಯಾಗಿ ಲೊಕ್ಕಿಗುಂಡಿ ಟಂಕಸಾಲೆಯಲ್ಲಿ ಟಂಕಿಸಿದ ಮುದ್ರಿತ ನಾಣ್ಯಗಳ ಉಲ್ಲೇಖ ಬಹಳಷ್ಟು ದೊರೆಯುತ್ತವೆ. ಇನ್ನೊಂದು ಟಂಕಸಾಲೆಯೆಂದರೆ ಬಳ್ಳಾರಿ ಜಿಲ್ಲೆಯ ಸೊಂಡೂರು ಸಮೀಪದ ಕಾರ್ತಿಕೇಯ ತಪೋವನ. ಇದು ಕಾರ್ತಿಕೇಯ ಸ್ವಾಮಿಯ ಪ್ರಮುಖ ನೆಲೆ. ಇಲ್ಲಿ ಮುದ್ರಿತ ನಾಣ್ಯಗಳಲ್ಲಿ ಒಂದು ವಿಶಿಷ್ಟವಾದ ಹೆಸರಿದ್ದಿತು. ಅದು "ನವಿಲಚ್ಚಿನ ಪೊನ್ನು" ಅಂದರೆ ನವಿಲಿನ ಗುರುತು ಉಳ್ಳ ಬಂಗಾರದ ನಾಣ್ಯ. ನವಿಲು ಕಾರ್ತಿಕೇಯನ ಸಂಕೇತ ಎಂಬುದು ತಿಳಿದ ವಿಷಯ.[೮೮] ಸಿಂದರ ಶಾಸನಗಳಲ್ಲಿ ಹಲವಾರು ತರಹ ನಾಣ್ಯಗಳ ಉಲ್ಲೇಖ ಬರುತ್ತದೆ.[೮೯] ಅದರಲ್ಲಿ ಮುಖ್ಯವಾಗಿ ಗದ್ಯಾಣ ಎಂಬುದು ಬಹಳಷ್ಟು ಪ್ರಚಾರದಲ್ಲಿದ್ದ ಬಂಗಾರದ ನಾಣ್ಯ. ಅದಕ್ಕೆ ಇನ್ನೊಂದು ಹೆಸರು ಹೊನ್ನ ಅಥವಾ ಹೊನ್ನು ಪೊಂಗದ್ಯಾಣ, ಹೊಂಗದ್ಯಾಣ, ಗದ್ಯಾಣ, ಹೊನ್ನು, ಹೊನ್ನ ಇತ್ಯಾದಿಯಾಗಿ ಗುರುತಿಸಲ್ಪಡುತ್ತಿತ್ತು.[೯೦] ಪಣ ಎಂಬುದು ಗದ್ಯಾಣಕ್ಕಿಂತ ಚಿಕ್ಕದು.[೯೧] ಹತ್ತು ಪಣ ಎಂದರೆ ಒಂದು ಗದ್ಯಾಣ ಆಗುತ್ತಿತ್ತು ಎಂದು ವಿದ್ವಾಂಸರು ನಿರ್ಧರಿಸಿದ್ದಾರೆ.[೯೨] ಅದಕ್ಕೂ ಚಿಕ್ಕ ನಾಣ್ಯಗಳು ಎಂದರೆ ಹಾಗ[೯೩] ಕಾಣಿ ಮತ್ತು ವೀಸ.[೯೪]

ಕರ ಸಂಗ್ರಹಣೆಗಾಗಿ ವಿವಿಧ ಹಂತಗಳಲ್ಲಿ ಹಿರಿಯ, ಕಿರಿಯ ಅಧಿಕಾರಿಗಳು ಇರುತ್ತಿದ್ದರು. ಸುಂಕದ ಅಧಿಕಾರಿ ಎಂಬುವನು ಕರ ಸಂಗ್ರಹಣೆಯ ಅತ್ಯುಚ್ಚ ಅಧಿಕಾರಿಯಾಗಿದ್ದ. "ಬೆಳಗುತ್ತಿಯ ಸುಂಕದ ದೇವರಸನು ವಿರುಪಯ್ಯನು ನಾ ಕಣ್ಣುನಂ, ಎಡವಟ್ಟೆ, ಬಳ್ಳಿವೆನಾಡ ಸುಂಕವನ್ನಳುರ್ತಿದ್ದು" ಎಂದು ಒಂದು ಶಾಸನದಲ್ಲಿ ಹೇಳಿದೆ.[೯೫] ಕಿಸುಕಾಡು ನಾಡ ಸುಂಕದವೆರ್ಗಡೆ ಆಯುಕ್ತ ದೇವರಸ ಎಂಬ ಅಧಿಕಾರಿಯ ಉಲ್ಲೇಖ ಸೂಳೆಭಾವಿ

ಶಾಸನದಲ್ಲಿದೆ.[೧೬] (ಆಯುಕ್ತ ಪದ ಅಧಿಕಾರ ವಾಚಕವಾಗಿ ನಮ್ಮ ರಾಜ್ಯದಲ್ಲಿ ಈಗ ಮತ್ತೆ ಉಪಯೋಗಿಸಲ್ಪಡುತ್ತಿದೆ ಎಂಬುದು ಗಮನಿಸಬೇಕು). ಆಯಾ ವಿಶಿಷ್ಟ ತೆರಿಗೆಗಳಿಗೆ ಸಂಬಂಧಿಸಿದಂತೆ ಪ್ರತ್ಯೇಕ ಅಧಿಕಾರಿಗಳು ಇರುತ್ತಿದ್ದರು. ಪೆರ್ಜುಂಕದ ಹೆಗ್ಗಡೆ ಪೆರ್ಜುಂಕದ ದೇವಣ್ಣ ಎಂಬ ಅಧಿಕಾರಿಗಳ ಉಲ್ಲೇಖ ಶಾಸನದಲ್ಲಿ ಕಂಡು ಬರುತ್ತದೆ.[೧೭] ಪೊನ್ನಾಯಧಿಷ್ಟಾಯಕ ಎಂಬುವನು ವೀಳ್ಯೆದೆಲೆಗಳ ಮೇಲಿನ ಸುಂಕಾಧಿಕಾರಿ[೧೮] ಇರುತ್ತಿದ್ದುದನ್ನು ಗುರುತಿಸಬಹುದು.

ಸಿಂದ ಮನೆತನಗಳ ಅರ್ಥವ್ಯವಸ್ಥೆಯು ಚಾಲುಕ್ಯ ಸಾಮ್ರಾಜ್ಯದ ಅರ್ಥವ್ಯವಸ್ಥೆಗೆ ಹೊರತಾಗಿಲ್ಲ ಎಂಬುದು ಮುಖ್ಯವಾಗಿದೆ. ಚಾಲುಕ್ಯರ ಅರ್ಥವ್ಯವಸ್ಥೆಯನ್ನು ಕುರಿತು ವಿಪುಲವಾದ ಮಾಹಿತಿ ದೊರೆಯುತ್ತದೆ. ಈ ಸಿಂದ ಮನೆತನಗಳು ಆ ಸಾಮ್ರಾಜ್ಯದ ಭಾಗವೇ ಆಗಿದುದ್ದರಿಂದ ಅದೇ ಅರ್ಥವ್ಯವಸ್ಥೆಯೇ ಇಲ್ಲಿಯೂ ಇದ್ದಿತು ಎಂದು ಬೇರೆ ಹೇಳಬೇಕಾಗಿಲ್ಲ. ಸಿಂದ ಶಾಸನಗಳಲ್ಲಿ ಇಂತಹ ಎಲ್ಲ ವಿವರ ದೊರೆಯದಿದ್ದರೂ ಇದ್ದ ಅಲ್ಪ ಸ್ವಲ್ಪ ದೊರೆತ ವಿವರಗಳು ವಸ್ತುಸ್ಥಿತಿಯನ್ನು ಬಿಂಬಿಸುತ್ತವೆ. ಅಂತಹ ಕೆಲ ವಿವರಗಳನ್ನು ಸಿಂದ ಶಾಸನಗಳಿಂದ ಸಂಗ್ರಹಿಸಿ ಮಾತ್ರ ನೀಡಲಾಗಿದೆ.

ಹಿಂದಿನ ಕಾಲದ ಕರ ವ್ಯವಸ್ಥೆಯಲ್ಲಿ ಒಂದು ವಿಶಿಷ್ಟವಾದ ಅಂಶವೆಂದರೆ ಕರಗಳು ನಾನಾ ರೀತಿಯವು ಬಹು ಸಂಖ್ಯೆಯಲ್ಲಿ ಇದ್ದರೂ ಕರ ವಿಮುಕ್ತಿ ಅಥವಾ ಕರ ವಿನಾಯತಿಗಳು ಕೂಡ ಅನೇಕ ಇದ್ದವು ಬಹುತೇಕವಾಗಿ ಬಹಳಷ್ಟು ಕರಗಳಿಂದ ಬರುವ ಉತ್ಪನ್ನವನ್ನು ದೇವಾಲಯಗಳ ಬಳಕೆಗಾಗಿ ಅಥವಾ ಧರ್ಮ, ಶಿಕ್ಷಣ ಇತರ ಸಾರ್ವಜನಿಕ ಕಾರ್ಯಗಳಿಗೆ ಸಂಬಂಧಿಸಿದಂತೆ ವಿನಿಯೋಗಿಸಲ್ಪಡುತ್ತಿತ್ತು ಎಂದು ಹೇಳಬಹುದು. ಈ ಮೇಲಿನ ವಿವರಗಳನ್ನು ಸಿಂದರಿಗೆ ಸಂಬಂಧಿಸಿದ ಶಾಸನಗಳಿಂದ ಮಾತ್ರ ಸಂಗ್ರಹಿಸಲಾಗಿದೆ.

## ಉಲ್ಲೇಖಗಳು ಮತ್ತು ಟಿಪ್ಪಣಿಗಳು :


೧ ಎಪಿಗ್ರಾಫಿಯಾ ಇಂಡಿಕಾ ಸಂ. ೬, ಪುಟ ೬

೨ ಎ.ಎಸ್. ಅಳ್ತೆಕರ, ರಾಷ್ಟ್ರಕೂಟ ಆ್ಯಂಡ್ ದೇರ್ ಟೈಮ್ಸ ಪು.ಸಂ. ೧೩೯

೩ ಜೆ.ಎಫ್ ಫ್ಲೀಟ್, ಡಯಾನಾಸ್ಟೀಜ್ ಆಫ್ ಕೆನರಿಸ್ ಡಿಸ್ಟ್ರಿಕ್ಟ್ಸ (ಪರಿಷ್ಕೃತ), ಬಾಂಬೆ ಗೆಝಿಟಿಯರ್, ಸಂ. ೧ ಭಾಗ ೨, ಪು.ಸಂ. ೨೯೮, ನೋಟ್ಸ ೨

೪ ಎಸ್.ಎಚ್. ರಿತ್ತಿಯವರ, ಈ ವಿಷಯದ ಕುರಿತು ಚರ್ಚೆಗೆ, ಸೇವುಣಸ್, ಪು. ೨೧೯ ನೋಡಿರಿ

೫ ಇಂಡಿಯನ್ ಆಂಟಿಕ್ವರಿ ೩೦, ಪು.ಸಂ. ೨೫೭ ರಿಂದ ೨೫೯

೬ ಎಪಿಗ್ರಾಫಿಯಾ ಕರ್ನಾಟಿಕಾ ಸಂ. ೭, ಎಚ್.ಎಲ್. ೪೩

೭ ಎ.ಕ, ಸಂ. ೭, ಎಸ್.ಕೆ ೩೧೬

೮ ಕರ್ನಾಟಕ ಇನಸ್ಕ್ರಿಪ್ಸನ್ಸ್, ಸಂ. ೬, ಶಾ.ಸಂ. ೨೩.

೯ ಅದೇ, ಸಂ. ೬, ಶಾ.ಸಂ. ೨೫

೧೦ ಎ.ಕ, ಸಂ. ೭, ಡಿ.ಜಿ. ೪೩

೧೧ ಜೆ.ಬಿ.ಬಿ.ಆರ್.ಎ.ಎಸ್. ಸಂ ೧೧, ನಂ.೧, ಪು. ೨೨೪

೧೨ ಈ ಎಲ್ಲ ವಿವರಗಳನ್ನು ಫ್ಲೀಟರವರ ಲೇಖನದಲ್ಲಿ ನೋಡಬಹುದು (ಇಂಡಿಯನ್ ಎಂಟಿಕ್ವಯರಿ ನಂ. ೩೦, ಪು.ಸಂ. ೨೬೫)

೧೩ ಜೆ.ಬಿ.ಬಿ.ಆರ್.ಎ.ಎಸ್.ಸಂ. ೧೧, ಶಾ.ಸಂ. ೫

೧೪ ಅದೇ, ಸಂ ೧೧, ಶಾ.ಸಂ. ೫

೧೫ ಸೌಥ ಇಂಡಿಯನ್ ಇನಸ್ಕ್ರಿಪ್ಸನ್ಸ್, ಸಂ ೧೫, ಶಾ.ಸಂ. ೨೪

೧೬ ಅದೇ, ಸಂ ೧೫, ಶಾ.ಸಂ. ೨೪೧

೧೭ ಅದೇ, ಸಂ ೧೫, ಶಾ.ಸಂ. ೧೩೪

೧೮ ಕಿಸುಕಾಡು-೭೦ ಈಗಿನ ಧಾರವಾಡ ಜಿಲ್ಲೆ, ಗದಗ ಜಿಲ್ಲೆ, ನವಲಗುಂದ, ನರಗುಂದ, ಹುಬ್ಬಳ್ಳಿ, ಕುಂದಗೋಳ ಸವದತ್ತಿ ಬಾದಾಮಿ, ಯಲಬುರ್ಗಿ ತಾಲೂಕಿನ ಕೆಲಭಾಗಗಳನ್ನೊಳಗೊಂಡು, ಇವುಗಳು ಬೆಳ್ವೊಲಮೂನೂರು ವಿಭಾಗದಲ್ಲಿ ಸೇರ್ಪಡೆಯಾಗಿತ್ತೆಂಬ ಅಭಿಪ್ರಾಯವಿದೆ

೧೯ ಬಿ.ಆರ್. ಗೋಪಾಲ, ಎ ಹಿಸ್ಟರಿ ಆಫ್ ಕರ್ನಾಟಕ ಪು.ಸಂ. ೧೨೪

೨೦ ಇಶಿಕವಾಕನ್ನ, ಹಿಸ್ಟಾರಿಕಲ್ ಜಿಯಾಗ್ರಾಫಿ ಆಫ್ ದಿ ವೆಸ್ಟರ್ನ ಡೆಕ್ಕನ್, ಕ.ವಿ.ವಿ. ಅಪ್ರಕಟಿತ ಮಹಾಪ್ರಬಂಧ

೨೧ ಇಂಡಿಯನ್ ಆಂಟಿಕ್ವರಿ ೩೦, ಪು.ಸಂ. ೨೫೮

೨೨ ಎಸ್.ಐ.ಐ, ಸಂ. ೯, ಭಾಗ ೧, ಶಾ.ಸಂ ೧೫೯

೨೩ ಅದೇ, ಸಂ. ೯, ಭಾಗ ೧, ಶಾ.ಸಂ ೨೪೯

೨೪ ಚನ್ನಬಸವಯ್ಯ ಹಿರೇಮಠ, ಕುರುಗೋಡಿನ ಸಿಂದರು ಒಂದು ಅಧ್ಯಯನ, ಪು. ಸಂ. ೧೦೦

೨೫ ಎಸ್.ಐ.ಐ, ಸಂ ೪, ಶಾ.ಸಂ. ೨೬೦
೨೬ ಅದೇ, ಸಂ. ೯, ಭಾಗ ೧, ಶಾ.ಸಂ. ೫೧೪
೨೭ ಚನ್ನಬಸವಯ್ಯ ಹಿರೇಮಠ, ಮೂರ್ವೋಲ್ಲಿಖಿತ, ಪು. ೧೦೦
೨೮ ಎಸ್.ಐ.ಐ, ಸಂ. ೯, ಭಾಗ ೧, ಶಾ.ಸಂ. ೧೫೯
೨೯ ಅದೇ, ಸಂ ೯, ಭಾಗ ೧, ಶಾ.ಸಂ. ೨೯೭
೩೦ ಅದೇ, ಸಂ ೯, ಭಾಗ ೧, ಶಾ.ಸಂ. ೨೯೭
೩೧ ಎ.ಇ, ಸಂ ೩, ಶಾ.ಸಂ. ೪೩
೩೨ ಎಸ್.ಎಚ್. ರಿತ್ತಿ, ಸೇವುಣ್ಣ, ಪು.ಸಂ. ೩೩೩
೩೩ ಬಿ.ಆರ್ ಗೋಪಾಲ, ಮೈನರ್ ಡಯಾನಾಸ್ಟೀಜ ಆಫ್ ಸೌಥ್ ಇಂಡಿಯಾ, ಕರ್ನಾಟಕ, ಸಂ–೧, ಪು.ಸಂ. ೧೧೮
೩೪ ಎಸ್.ಎಚ್ ರಿತ್ತಿ (ಸಂ), ಗ್ರಾಮ ಸೂಚಿ, ೧೫೭, ೧೫೯
೩೫ ಮಾನವೀಕ ಕರ್ಣಾಟಕ ಸಂ. ೪, ಪು.ಸಂ. ೩೩
೩೬ ವ್ಹಿ.ಎಸ್. ಕುಲಕರ್ಣಿ ಮಹಾಪ್ರಬಂಧದಿಂದ ಸಾದರಪೂರ್ವಕವಾಗಿ ಪಡೆಯಲಾಗಿದೆ.
೩೭ ಎ.ಕ.ಸಂ. ೭, ಶಾ.ಸಂ. ಎಚ್.ಎಲ್.೫೦
೩೮ ಜೆ.ಬಿ.ಬಿ.ಆರ್.ಎ.ಎಸ್. ಸಂ. ೧೧, ಶಾ.ಸಂ. ೪
೩೯ ಎಸ್.ಐ.ಐ, ಸಂ. ನಂ. ೯, ಭಾಗ ೧, ಶಾ. ಸಂ. ೨೯೬
೪೦ ಎ. ಇ, ಸಂ. ೧೪, ಪು.ಸಂ. ೨೮೧
೪೧ ಬಿ.ಆರ್. ಗೋಪಾಲ, ಪೂರ್ವೋಲ್ಲಿಖಿತ ಪು.ಸಂ. ೩೮೯
೪೨ ಜೆ.ಬಿ.ಬಿ.ಆರ್.ಎ.ಎಸ್. ಸಂ. ೧೧, ಶಾ.ಸಂ.೫
೪೩ ಬಿ.ಆರ್.ಗೋಪಾಲ, ಪೂರ್ವೋಲ್ಲಿಖಿತ, ಪು.ಸಂ. ೩೯೧–೩೯೨
೪೪ ಎಸ್.ಎಚ್. ರಿತ್ತಿ, ಗೋಪಾಲ್ ಬಿ.ಆರ್. ಇನ್‌ಸ್ಕ್ರಿಪನ್ಸ ಆಫ್ ವಿಜಯನಗರ ರೂಲರ್, ಸಂ. ೧, ಶಾ.ಸಂ. ೪೨೨, ಸಾಲು, ೪೪, ೪೫
೪೫ ಕ.ಇ, ಸಂ. ೪, ಶಾ.ಸಂ. ೧೩
೪೬ ಎ.ಕ, ಸಂ. ೭, ಶಾ.ಸಂ. ಎಚ್.ಎಲ್. ೫೦
೪೭ ಎ.ಇ, ಸಂ. ೧೪, ಶಾ.ಸಂ. ೨೭೨
೪೮ ಎಸ್.ಐ.ಐ, ಸಂ. ೧೫, ಶಾ.ಸಂ. ೨೪೧
೪೯ ಎಪಿಗ್ರಾಫಿಯಾ ಕರ್ನಾಟಿಕಾ ಸಂ. ೭ (ಹಳೆಯ) ಎಚ್.ಎಲ್. ೪೮
೫೦ ಎ.ಕ, ಸಂ. ೭, ಎಚ್.ಎಲ್. ೭
೫೧ ಎ.ಇ, ೭, ಎಚ್.ಎಲ್. ೫೦
೫೨ ಎ.ಇ, ೧೪, ಪು.ಸಂ. ೨೭೬

೫೩ ಇ.ಐ, ೧೪, ಪು.ಸಂ. ೨೭೬
೫೪ ಎಸ್.ಐ.ಐ. ೧೫, ಶಾ.ಸಂ. ೨೩೮
೫೫ ಕನ್ನಡ ವಿ.ವಿ. ಶಾ.ಸಂ. ೧ (ಬಳ್ಳಾರಿ) ಶಾ. ನಂ. ೭
೫೬ ಅದೇ, ಶಾ.ನಂ. ೭
೫೭ ಎಪಿಗ್ರಾಫಿಯಾ ಕರ್ನಾಟಿಕಾ, ೭ (ಹಳೆಯ), ಎಚ್.ಎಲ್, ೨೫
೫೮ ಕನ್ನಡ ವಿ.ವಿ, ಶಾ.ಸಂ. ೧, ಶಾ.ನಂ. ೬೪
೫೯ ಎ.ಕ. ೭, ಎಚ್.ಎಲ್, ೩೫
೬೦ ಎಸ್.ಎಚ್. ರಿತ್ತಿ, ಪ್ರಾಚೀನ ಕರ್ನಾಟಕ ಆಡಳಿತ ಪರಿಭಾಷೆ ಕೋಶ, ಪು.ಸಂ. ೬೫
೬೧ ಎ.ಕ. ೭, ಎಚ್.ಎಲ್, ೩೭
೬೨ ಎಸ್.ಎಚ್. ರಿತ್ತಿ, ಪೂರ್ವೋಲ್ಲಿಖಿತ, ಪು.ಸಂ. ೬೫
೬೩ ಎಸ್.ಎಚ್. ರಿತ್ತಿ, ಪೂರ್ವೋಲ್ಲಿಖಿತ, ಪು.ಸಂ. ೬೬
೬೪ ಕನ್ನಡ ವಿ.ವಿ. ಶಾ.ಸಂ. ೧ (ಬಳ್ಳಾರಿ), ಶಾ.ನಂ. ೧೮
೬೫ ಎ.ಕ. ಸಂ ೭, ಎಚ್.ಎಲ್, ೫೦
೬೬ ಎ.ಕ. ೭, ಎಸ್.ಕೆ. ೩೧೬
೬೭ ಕನ್ನಡ ವಿ.ವಿ. ಶಾ.ಸಂ. ೧ (ಬಳ್ಳಾರಿ), ಶಾ.ನಂ. ೨೭
೬೮ ಎಸ್.ಎಚ್.ರಿತ್ತಿ, ಸೇವುಣ್ಸ, ಪು.ಸಂ. ೨೩
೬೯ ಎಸ್.ಎಚ್. ರಿತ್ತಿ, ಪೂರ್ವೋಲ್ಲಿಖಿತ, ಪು.ಸಂ. ೯೩
೭೦ ಎಸ್.ಎಚ್. ರಿತ್ತಿ, ಪೂರ್ವೋಲ್ಲಿಖಿತ, ಪು.ಸಂ. ೯೨
೭೧ ಎಸ್.ಐ.ಐ, ಸಂ. ೯, ಭಾಗ ೧, ಶಾ.ಸಂ. ೬೫
೭೨ ಅದೇ, ಸಂ ೧೫, ಶಾ.ಸಂ. ೧೬೫
೭೩ ಎ.ಕ, ಸಂ. ೭, ಎಚ್.ಎಲ್. ೨೫
೭೪ ಜೆ.ಬಿ.ಬಿ.ಆರ್.ಎ.ಎಸ್. ಸಂ. ೧೧, ಶಾ.ಸಂ. ೨
೭೫ ಎಫಿಗ್ರಾಫಿಯಾ ಇಂಡಿಕಾ, ಬೆಂಚಮಟ್ಟಿ ಶಾಸನ, ಪು.ಸಂ. ೧೧೭
೭೬ ಕನ್ನಡ ವಿ.ವಿ, ಶಾ.ಸಂ. ೧ (ಬಳ್ಳಾರಿ ಜಿಲ್ಲೆ), ಶಾ. ನಂ. ೭೧
೭೭ ಎಸ್.ಐ.ಐ, ಸಂ. ೧೫, ಶಾ. ಸಂ. ೨೮
೭೮ ಎ. ಕ, ಸಂ. ೭, ಎಚ್.ಎಲ್. ೪೭
೭೯ ಎ. ಕ, ಸಂ ೭, ಎಚ್.ಎಲ್. ೨೫
೮೦ ಎಸ್.ಐ.ಐ, ಸಂ. ೧೫, ಶಾ. ಸಂ. ೨೩೪
೮೧ ಕನ್ನಡ ವಿ.ವಿ. ಶಾ. ಸಂ ೧ (ಬಳ್ಳಾರಿ ಜಿಲ್ಲೆ), ಶಾ. ನಂ. ೬೧
೮೨ ಎ. ಕ, ಸಂ. ೭, ಎಚ್.ಎಲ್. ೭

೮೩ ಎಸ್.ಐ.ಐ, ಸಂ. ೧೫, ಶಾ. ಸಂ. ೨೪೨

೮೪ ಎ. ಕ, ಸಂ. ೭, ಎಚ್.ಎಲ್. ೨೫

೮೫ ಎಸ್.ಐ.ಐ ಸಂ. ೧೫, ಶಾ. ಸಂ. ೧೬೫

೮೬ ಎಸ್.ಐ.ಐ ಸಂ. ೧೫, ಶಾ. ಸಂ. ೧೬೫

೮೭ ಕನ್ನಡ ವಿ.ವಿ, ಶಾ. ಸಂ. ೧ (ಬಳ್ಳಾರಿ ಜಿಲ್ಲೆ), ಶಾ. ನಂ. ೭

೮೮ ಕನ್ನಡ ವಿ.ವಿ, ಶಾ. ಸಂ. ೧, ಶಾ.ನಂ. ೭೦

೮೯ ಎ.ಕ, ಸಂ. ೭, ಹೆಚ್.ಎಲ್. ೭

೯೦ ಎಸ್.ಐ.ಐ ಸಂ. ೧೫, ಶಾ. ಸಂ. ೧೦೬

೯೧ ಅದೇ, ಸಂ. ೧೫, ಶಾ. ಸಂ. ೨೮

೯೨ ಎಸ್.ಎಚ್. ರಿತ್ತಿ, ಸೇವುಣ್ಣ ಮ.ಸಂ. ೨೪೦

೯೩ ಎಸ್.ಐ.ಐ ಸಂ. ೧೫, ಶಾ. ಸಂ. ೧೬೫

೯೪ ಜೆ.ಬಿ.ಬಿ.ಆರ್.ಎ.ಎಸ್. ಸಂ ೧೧, ಶಾ.ಸಂ.೪

೯೫ ಎ.ಕ. ೭, ಎಚ್.ಎಲ್. ೭

೯೬ ಎಸ್.ಐ.ಐ ಸಂ. ೧೫, ಶಾ.ಸಂ. ೨೪೨

೯೭ ಎ.ಕ. ೭, ಎಚ್.ಎಲ್ ೪೭

೯೮ ಎಸ್.ಐ.ಐ ಸಂ. ೧೫, ಶಾ.ಸಂ. ೨೪೨

# ಅಧ್ಯಾಯ ೬

## ಸಿಂದ ಮನೆತನಗಳ ಕಾಲದ ಧರ್ಮ ಮತ್ತು ಸಾಹಿತ್ಯ ಸ್ಥಿತಿಗತಿಗಳು

# ಅಧ್ಯಾಯ ೬

## ಸಿಂದ ಮನೆತನಗಳ ಕಾಲದ ಧರ್ಮ ಮತ್ತು ಸಾಹಿತ್ಯ ಸ್ಥಿತಿಗತಿಗಳು

### ಧರ್ಮ

ಸಿಂದ ಮನೆತನಗಳ ಆಳರಸರಾದ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಧರ್ಮ ಮತ್ತು ಸಾಹಿತ್ಯದ ಬೆಳವಣಿಗೆಗೆ ಯಥೇಚ್ಛವಾದ ಪ್ರೋತ್ಸಾಹವಿದ್ದಿತು. ವಿವಿಧ ಧರ್ಮಪಂಥಗಳು ಇಲ್ಲಿ ನೆಲೆಯೂರಿದ್ದವು. ಧರ್ಮದ ಪ್ರತೀಕವಾದ ದೇವಾಲಯಗಳು ಬಹು ಸಂಖ್ಯೆಯಲ್ಲಿ ನಿರ್ಮಿತವಾದವು. ಅಗ್ರಹಾರಗಳು, ಘಟಿಕಾಸ್ಥಾನಗಳು ಬಹುಸಂಖ್ಯೆಯಲ್ಲಿ ತಲೆ ಎತ್ತಿದವು. ವಿದ್ವಾಂಸರಿಗೆ, ಕವಿಗಳಿಗೆ ಅಮಿತವಾದ ಪ್ರೋತ್ಸಾಹ ದೊರೆಯಿತು. ಈ ಎಲ್ಲ ವಿವರಗಳನ್ನು ವಿಶದವಾಗಿ ಇಲ್ಲಿ ಚರ್ಚಿಸುವುದು ಅನವಶ್ಯಕ. ಈ ಕ್ಷೇತ್ರಗಳಲ್ಲಿ ಸಿಂದ ಮನೆತನಗಳ ಕೊಡುಗೆ ಏನು ಎಂಬುದನ್ನು ವಿವರಿಸುವುದು ಸೂಕ್ತ. ಆದ್ದರಿಂದ ಇಲ್ಲಿ ಸಿಂದ ಮನೆತನಗಳಿಗೆ ಸಂಬಂಧಿಸಿದಂತೆ ಶಾಸನಗಳ ಹಾಗೂ ಇತರ ಆಧಾರಗಳಿಂದ ವಿವಿಧ ಸಿಂದ ಆಳಿಕೆ ಪ್ರದೇಶಗಳಲ್ಲಿ ಇವು ಹೇಗೆ ಬೆಳೆದು ಬಂದವು ಎಂಬುದನ್ನು ಸ್ಥೂಲವಾಗಿ ಸಮೀಕ್ಷಿಸಲಾಗುವುದು.

ಇಲ್ಲಿ ಗಮನಿಸಬೇಕಾದ ಅಂಶವೆಂದರೆ, ಆಳರಸರಾಗಲಿ, ಸಾಮಂತರಾಗಲಿ ಎಲ್ಲ ಧರ್ಮಗಳನ್ನು ಗೌರವಿಸಿ ಪ್ರೋತ್ಸಾಹಿಸುತ್ತಿದ್ದರು. ತಮ್ಮ ವೈಯಕ್ತಿಕ ಒಲವುಗಳು ಏನೇ ಇದ್ದರೂ ಎಲ್ಲ ಧಾರ್ಮಿಕ ಸಂಸ್ಥೆಗಳನ್ನು ಮಾನ್ಯ ಮಾಡುತ್ತಿದ್ದರು. ಎಲ್ಲ ಧರ್ಮ ಗುರುಗಳನ್ನು ಗೌರವಿಸಿ ಅವರ ನಿರ್ವಹಣೆಗೆ ಭೂಮಿ ದಾನ, ದ್ರವ್ಯ ದಾನ ಮಾಡುತ್ತಿದ್ದರು. ವಿವಿಧ ಧರ್ಮ ಪಂಥಗಳ ದೇವಾಲಯಗಳನ್ನು ಕಟ್ಟಿಸುವುದಲ್ಲದೇ ಎಲ್ಲ ದೇವಾಲಯಗಳ ನಿರ್ವಹಣೆಗೆ ಹೇರಳವಾದ ದತ್ತಿದಾನಗಳನ್ನು ಕೊಡುತ್ತಿದ್ದನ್ನು ಹೆಜ್ಜೆ ಹೆಜ್ಜೆಗೂ ಕಾಣುತ್ತೇವೆ. ಹೀಗಾಗಿ ಆಳರಸರ ಅಥವಾ ಸಾಮಂತರ ವೈಯಕ್ತಿಕ ಧರ್ಮ ಯಾವುದು ಎಂಬುದೂ ಕೂಡ ತಿಳಿಯುತ್ತಿರಲಿಲ್ಲ. ಇದು ರಾಜಧರ್ಮದ ಒಂದು ಅತ್ಯವಶ್ಯಕ ಸೂತ್ರವಾಗಿದ್ದಿತು.

ಉಳಿದೆಲ್ಲ ಆಡಳಿತಗಾರರಂತೆ ಸಿಂದ ಮನೆತನದವರೂ ಸಹ ತಮ್ಮ ಆಡಳಿತದ ಪ್ರದೇಶಗಳಲ್ಲಿ ಪ್ರಚಲಿತವಿದ್ದ ಎಲ್ಲ ಧರ್ಮಗಳನ್ನು ಪ್ರೋತ್ಸಾಹಿಸುತ್ತಿದ್ದರು. ಭಾರತದ ಪ್ರಾಚೀನವಾದ ಧರ್ಮವೆನಿಸಿದ ಬೌದ್ಧ ಧರ್ಮವು ಈ ಕಾಲದಲ್ಲಿ ತನ್ನ ಅಸ್ತಿತ್ವವನ್ನು ಕಳೆದುಕೊಂಡಿದ್ದಿತು. ಆದರೂ ಚಾಲುಕ್ಯ ಸಾಮ್ರಾಜ್ಯದಲ್ಲಿ ಅಲ್ಲಲ್ಲಿ ಈ ಧರ್ಮ ಉಳಿದುಕೊಂಡಿದ್ದನ್ನು ನಾವು ನೋಡುತ್ತೇವೆ. ಉದಾ: ಗದಗ ಜಿಲ್ಲೆಯ ಡಂಬಳ, ಕೋಳಿವಾಡ ಮುಂತಾದ ಊರುಗಳನ್ನು ಈ

ಸಂದರ್ಭದಲ್ಲಿ ಹೆಸರಿಸಬಹುದು. ಬಳ್ಳಿಗಾವಿಯಲ್ಲಿ ಬೌದ್ಧ ಧರ್ಮದ ಅವಶೇಷದ ಕುರುಹುಗಳನ್ನು ವಿದ್ವಾಂಸರು ಎತ್ತಿ ತೋರಿಸಿದ್ದಾರೆ.[೧] ಸಿಂದ ಮನೆತನಗಳ ಪ್ರದೇಶಗಳಲ್ಲಿ ಮಾತ್ರ ಅಂತಹ ಯಾವ ಕುರುಹುಗಳೂ ದೊರೆತಿಲ್ಲ. ಚಾಲುಕ್ಯ ಸಾಮ್ರಾಜ್ಯದಲ್ಲಿ ಜೈನ ಮತ್ತು ಶೈವ ಪಂಥಗಳು ಉಚ್ಛ್ರಾಯ ಕಾಲದಲ್ಲಿ ಇದ್ದವೆಂಬುದು ಸರ್ವವಿದಿತ. ಯಲಬುರ್ಗಿ ಸಿಂದರ ಶಾಸನಗಳಲ್ಲಿ ಜೈನ ಧರ್ಮದ ಅಸ್ತಿತ್ವದ ಬಗ್ಗೆ ಅಷ್ಟಾಗಿ ಉಲ್ಲೇಖಗಳು ದೊರೆಯದಿದ್ದರೂ, ಕೆಲವಾದರೂ ಇವೆ. ಮಾದನಭಾವಿಯ ಶಾಸನದಲ್ಲಿ ಬಸದಿಯ ಉಲ್ಲೇಖವಿದೆ. ಆದರೆ ದುರ್ದೈವದಿಂದ ಶಾಸನದ ಕಲ್ಲು ಒಡೆದಿದ್ದರಿಂದ ಬಸದಿ ಶಬ್ದ ಹೊರತಾಗಿ ಶಾಸನದ ಕಲ್ಲಿನ ಮೇಲೆ ಬೇರೆ ಯಾವ ಮಾಹಿತಿ ಸಿಗುವುದಿಲ್ಲ.[೨]

ಈ ಕಾಲದಲ್ಲಿ ಅತೀ ಹೆಚ್ಚು ಪ್ರಚಲಿತವಿದ್ದ ಧರ್ಮವೆಂದರೆ, ಪಾಶುಪತ ಅಥವಾ ಕಾಳಾಮುಖ; ಶೈವಮತ. ಚಾಲುಕ್ಯ ಸಾಮ್ರಾಜ್ಯದಲ್ಲಿ ಈ ಮತದ ದೇವಾಲಯಗಳು ಇಲ್ಲದೇ ಇದ್ದ ಊರುಗಳೇ ಇದ್ದಿಲ್ಲವೆಂದು ಸಿಂದರ ಪ್ರದೇಶಗಳ ಬಗ್ಗೆಯೂ ಇದೇ ಮಾತನ್ನು ಹೇಳಬಹುದು. ಆದರೆ ಶಾಸನಗಳ ಕೊರತೆ ಮತ್ತು ಒಡೆದು ಹೋದ ಶಾಸನಗಳು ಇತ್ಯಾದಿ ಕಾರಣದಿಂದ ಬಹಳಷ್ಟು ಮಾಹಿತಿ ದೊರೆಯುವುದಿಲ್ಲ.

ಹೊನ್ನಾಳಿ ತಾಲೂಕಿನ ಕುರುವರದಗದ್ದೆ ಎಂಬಲ್ಲಿ ಪ್ರಸಿದ್ಧವಾದ ರಾಮನಾಥ ಅಥವಾ ರಾಮೇಶ್ವರ ದೇವಾಲಯವಿದ್ದಿತು ಎಂದು ಹೇಳಲು ಆಧಾರವಿದೆ. ಅಲ್ಲಿಯ ಒಂದು ಶಾಸನವು ರಾಮನಾಥನ ಸ್ತುತಿಯಿಂದಲೇ ಪ್ರಾರಂಭವಾಗುತ್ತದೆ.[೩] ಬೆಳಗುತ್ತಿ ಸಿಂದರ ಮಲ್ಲಿದೇವನ ಅಧಿಕಾರಿಯಾದ ನಾಳ್‌ಪ್ರಭು ಬೋವಯ್ಯನು ಅಥವಾ ಬೋವಿಸೆಟ್ಟಿಯು ಈ ರಾಮೇಶ್ವರದೇವರ ಪ್ರತಿಷ್ಠಾಪನಾಚಾರ್ಯ ಅಂದರೆ, ಮುಖ್ಯಸ್ಥರಾದ ಪದ್ಮಶಿವಾಂಕನೆಂಬವನಿಗೆ ದೇವಾಲಯದ ಉಪಯೋಗಕ್ಕಾಗಿ ಭೂಮಿದಾನ ಮಾಡಿದ ವಿಷಯವನ್ನು ಶಾಸನ ಹೇಳುತ್ತದೆ. ಇಂತಹ ದೇವಾಲಯಗಳಿಗೆ ಮುಖ್ಯಸ್ಥರು ಮತ್ತು ಮೇಲ್ವಿಚಾರಕರನ್ನಾಗಿ ವಿದ್ವಾಂಸರೂ, ತಪೋನಿಷ್ಠರಾದ ಯತಿಗಳನ್ನು ನೇಮಿಸುತ್ತಿದ್ದರು. ಎಷ್ಟೋ ಸಲ ಕೆಲವು ದೇವಾಲಯಗಳಿಗೆ ಸಂಬಂಧಿಸಿದಂತೆ ಯತಿ ಪರಂಪರೆಯ ಉಲ್ಲೇಖಗಳು ಸಿಗುತ್ತವೆ. ಪ್ರಸ್ತುತ ದೇವಾಲಯದ ಸ್ಥಾಪನಾಚಾರ್ಯರಾದ ಪದ್ಮಶಿವಾಂಕನು ಆಗಮ ಜ್ಞಾನದಲ್ಲಿ, ಮಂತ್ರಶಕ್ತಿಯಲ್ಲಿ, ತಪಸ್ಸಿನ ಪ್ರಭಾವದಲ್ಲಿ, ಎಲ್ಲ ಶಾಸ್ತ್ರಗಳ ಪರಿಣಿತಿಯಲ್ಲಿ ಉನ್ನತನಾಗಿದ್ದ ಎಂದು ಶಾಸನ ಹೇಳುತ್ತದೆ. ವಿಶೇಷವೆಂದರೆ, ಈ ದೇವಾಲಯಕ್ಕೆ ಅಗ್ರಹಾರವಾದ ನೆಲವತ್ತಿಯ (ಇದು ಇಂದಿನ ಹೊನ್ನಾಳಿ ತಾಲೂಕಿನ ನೆಲಹೊನ್ನೆ ಆಗಿದ್ದಿರಬಹುದು). ಎಲ್ಲ ಮಹಾಜನರು ದೇವರ ನೈವೇದ್ಯಕ್ಕೆ ಭೂಮಿದಾನವನ್ನು ಮಾಡಿದ

ವಿಷಯವನ್ನು ಗಮನಿಸಿದರೆ, ಈ ದೇವಾಲಯವು ಸುತ್ತಮುತ್ತಲಿನ ಪ್ರದೇಶದಲ್ಲಿ ಹೆಚ್ಚು ಪ್ರಸಿದ್ಧಿ ಪಡೆದಿದ್ದಿತ್ತೆಂದು ಹೇಳಬಹುದು. ಬೆಳಗವರ್ತಿಯ ಹೆಜ್ಜುಂಕದ ಅಧಿಕಾರಿ ದೇವರಸನು ದೇವಾಲಯದ ದೇವತಾಭವನದ ಜೀರ್ಣೋದ್ಧಾರವನ್ನು ಮಾಡಿ, ಭೂಮಿದಾನವನ್ನು ಮಾಡಿದನು. ಕುರುವ ಅಂದರೆ ಈಗಿನ ಕುರುವರದಗದ್ದೆಯಲ್ಲಿ ರಾಯೇಶ್ವರ, ಸಂಗಮೇಶ್ವರ, ಮಲ್ಲಿಕಾರ್ಜುನ ಎಂಬ ದೇವಾಲಯಗಳು ಇದ್ದ ಬಗ್ಗೆ ಉಲ್ಲೇಖವಿದೆ. ಎಡವಟ್ಟೆ, ಬಳ್ಳವೆ ನಾಡಿನ ಸುಂಕದ ಅಧಿಕಾರಿಗಳು ಮತ್ತು ಸುತ್ತಮುತ್ತಲಿನ ಹಳ್ಳಿಗಳಾದ ಮಾದನಬಾಗಿ, ಬೇಗೂರು, ಬಳ್ಳವೆ ಗ್ರಾಮಗಳ ನಾಳ್ಪ್ರಭುಗಳು, ಸಮಸ್ತ ಗೌಡುಗಳು ಯಥೇಚ್ಛವಾಗಿ ಭೂಮಿದಾನ ಮಾಡಿದ ಬಗ್ಗೆ ಶಾಸನದಲ್ಲಿ ಉಲ್ಲೇಖವಿದೆ. ಇದೇ ಮಲ್ಲಿದೇವನೇ ತನ್ನ ಅಧಿಕಾರಿಯಾದ ಹೆಜ್ಜುಂಕದ ದೇವಣ್ಣನನ್ನು ಕರೆದು (ಬೆಳಗುತ್ತಿಯಲ್ಲಿ) ಸಿದ್ದೇಶ್ವರ ದೇವರ ಪೂಜೆ ಪುನಸ್ಕಾರಗಳಿಗೆಂದು ಆ ಪ್ರದೇಶದಲ್ಲಿ ಸುಂಕದಿಂದ ಬರುವ ಉತ್ಪನ್ನಗಳನ್ನು ದಾನವಾಗಿ ಕೊಡಿಸಿದ ರೋಚಕ ಘಟನೆಯ ವಿವರಗಳು ಶಾಸನದಲ್ಲಿವೆ.[೪] ಬೆಳಗುತ್ತಿಯ ಈ ಶಾಸನದ ಕಾಲ ಕ್ರಿ.ಶ. ೧೧೮೮. ಸಂಕರಾಶಿ ಪಂಡಿತರೆಂಬ ಯತಿಗಳು ಈ ದತ್ತಿಯನ್ನು ಸ್ವೀಕರಿಸಿದರು. ಇದೇ ಮಲ್ಲಿದೇವನ ಅಧಿಕಾರಿಯು, ಮಹಾದೇವ ದಂಡನಾಯಕ ಹೆಗ್ಗಡೆ ಶಾಯಣ್ಣ ಮುಂತಾದ ಗೌಡುಗಳು, ಇತರ ಅಧಿಕಾರಿಗಳು, ಪೃಥ್ವೀಶ್ವರದೇವ, ಸಿದ್ದೇಶ್ವರದೇವ, ದಾಸೇಶ್ವರ ದೇವಾಲಯಗಳ ಪೂಜೆ ಪುನಸ್ಕಾರಗಳಿಗೆ ಭೂಮಿದಾನ ಕೊಟ್ಟ ವಿಷಯವು ಕ್ರಿ.ಶ. ೧೧೮೦ ರ ಬೆಳಗುತ್ತಿ ಶಾಸನದಲ್ಲಿದೆ.[೫] ಇದಲ್ಲದೇ ಮಲ್ಲಿದೇವನ ತಳಾರನಾದ ಬೂಪಯ್ಯನಾಯಕನು ತನ್ನ ಒಡೆಯನ ಕೈಯಿಂದ ಪಡೆದುಕೊಂಡ ಭೂಮಿಯನ್ನು ಕೇಶವ ದೇವಾಲಯಕ್ಕೆ ದಾನ ಮಾಡಿದನೆಂದು ಇದೇ ಶಾಸನದಲ್ಲಿ ಹೇಳಿದೆ. ಈ ಎಲ್ಲ ದಾನಗಳನ್ನು ಪಡೆದವರು ಮೇಲೆ ಉಲ್ಲೇಖಿಸಲಾದ ಸಂಕರಾಶಿ ಪಂಡಿತರು. ಇವರು ಎಲ್ಲ ದೇವಾಲಯಗಳ ಸ್ಥಾನಪತಿಗಳಾಗಿರಬಹುದು ಬೆಳಗುತ್ತಿ ಸಿಂದ ಶಾಸನಗಳಲ್ಲಿ ವೈಷ್ಣವ ದೇವಾಲಯಗಳ ಉಲ್ಲೇಖ ಕಡಿಮೆ. ಈ ದೃಷ್ಟಿಯಿಂದ ಇಲ್ಲಿ ಕೇಶವ ದೇವಾಲಯದ ಹೆಸರು ಗಮನಾರ್ಹವಾಗಿದೆ. ಮಾದನಬಾವಿಯಲ್ಲಿಯ ತ್ರುಟಿತ ಶಾಸನವೊಂದು ಮಲ್ಲಿಕಾರ್ಜುನ ದೇವರನ್ನು ಉಲ್ಲೇಖಿಸುತ್ತದೆ. ಸಿಂದ ಈಶ್ವರದೇವನ ಮಂತ್ರಿಯಾದ ಸಿಂಘ ಎಂಬವನು ಮತ್ತು ನೆಲವತ್ತಿಯ ಎಲ್ಲ ಮಹಾಜನರು ಹಾಗೂ ಬೆಳಗುತ್ತಿಯ ಬೊಮ್ಮಗೌಡ, ಮಾಳಗೌಡ ಮತ್ತು ಕೊಡಮಗ್ಗೆ (ಇಂದಿನ ಹಿರೇಕೆರೂರು ತಾಲೂಕಿನ ಕೊಡಮಗ್ಗಿ), ಬಿಡುತೂರಿನ ಕೇತಗೌಡ, ಒನ್ನಾಳಿ (ಇಂದಿನ ಹೊನ್ನಾಳಿ) ಬೊಮ್ಮಗೌಡ, ಹತ್ತಿವೂರಿನ ಚಿಮ್ಮಗೌಡ (ಹೊನ್ನಾಳಿ ಹತ್ತಿರ) ಮೇದೂರಿನ ಕಾಳಗೌಡ ಇವರೆಲ್ಲ ಸೇರಿ ಈಶ್ವರದೇವನ ಅಪ್ಪಣೆಯಿಂದ ಮಲ್ಲಿಕಾರ್ಜುನದೇವನಿಗೆ ದಾನವನ್ನು ಮಾಡಿದ (ಬಹುಶಃ ಭೂಮಿದಾನ) ಉಲ್ಲೇಖವಿದೆ.[೬] ಈಶ್ವರದೇವನ ಅಧಿಕಾರಿಯು

ಹತ್ತಿವೂರಿನ (ಹೊನ್ನಾಳಿ ತಾಲೂಕಿನ ಇಂದಿನ ಹತ್ತೂರು) ನಾಳ್‌ಪ್ರಭುವಾಗಿದ್ದ ಕೇತಗೌಡನು ತನ್ನೆಲ್ಲ ಜನರ ಜತೆಗೂಡಿ ಬೆಳಗುತ್ತಿ ರಾಮನಾಥ ದೇವರ ಪೂಜೆ, ಪುನಸ್ಕಾರ, ಅಲಂಕಾರಗಳಿಗೆ ಮತ್ತು ದೇವಸ್ಥಾನದ ಜೀರ್ಣೋದ್ಧಾರಕ್ಕೆಂದು ಭೂಮಿಯನ್ನು ದಾನ ಮಾಡಿದನು. ಶಾಸನದಲ್ಲಿ ಹತ್ತಿವೂರಿನ ವರ್ಣನೆ ಇದೆ ಅಲ್ಲದೇ ಕೇತಗೌಡನ ಸುಧೀರ್ಘವಾದ ವರ್ಣನಾತ್ಮಕವಾದ ವಂಶಾವಳಿಯೂ ಇದೆ. ಇದೇ ಶಾಸನದಲ್ಲಿ ಅವನ ಧರ್ಮಭೀರುತ್ವವನ್ನು ಕೊಂಡಾಡಿದೆ. ಈ ದೇವಾಲಯದ ಸ್ಥಾಪನೆಯ ವರ್ಣನೆಯೂ ಇದೆ. ಆದರೆ ಅವನ ಹೆಸರು ಮಾತ್ರ ಅಳಿಸಿ ಹೋಗಿದೆ. ರಾಮನಾಥನ ಅರ್ಚಕನೆಂದು ಅವನನ್ನು ಹೊಗಳಲಾಗಿದೆ. ಈ ಎಲ್ಲ ವರ್ಣನೆ ನೋಡಿದರೆ ಬೆಳಗುತ್ತಿಯು ಒಂದು ವಿಖ್ಯಾತ ಯಾತ್ರಾಸ್ಥಳವೇ ಆಗಿತ್ತೆಂದು ತೋರುತ್ತದೆ.[೭]

ಬೆಳಗುತ್ತಿಯ ಒಂದು ಶಾಸನವು ಈಶ್ವರದೇವ ಮತ್ತು ಮಾವ ಅಲ್ಲಮರಸ ಹಾಗೂ ಅಧಿಕಾರಿಯಾದ ಮಲ್ಲಗೌಡನು ಅಲ್ಲಿಯ ಬ್ರಹ್ಮಪುರಿಗೆ ದಾನ ಮಾಡಿದನೆಂದು ಹೇಳಿರುವ ವಿಷಯವಿದೆ. ಬ್ರಹ್ಮಪುರಿ ಎಂದರೆ ಒಂದು ಗ್ರಾಮದಲ್ಲಿ ಧಾರ್ಮಿಕ ಮತ್ತು ಶೈಕ್ಷಣಿಕ ಕಾರ್ಯದಲ್ಲಿ ತೊಡಗಿದ ಬ್ರಾಹ್ಮಣ ವಿದ್ವಾಂಸರು ವಾಸಿಸುತ್ತಿದ್ದ ಪ್ರದೇಶ. ಅವರು ತಮ್ಮ ದೈನಂದಿನ ಕಾರ್ಯಗಳನ್ನು ಸುಸೂತ್ರವಾಗಿ ನಿರ್ವಹಿಸುವುದಕ್ಕಾಗಿ ಮತ್ತು ಉಪಜೀವನಕ್ಕಾಗಿ ಭೂಮಿಗಳನ್ನು ಹಾಕಿಕೊಡುವುದು ವಾಡಿಕೆಯಾಗಿದ್ದಿತ್ತು.[೮] ಅಂತಹ ಒಂದು ಬ್ರಹ್ಮಪುರಿಯಲ್ಲಿಯ ೨೨ ಜನ ಬ್ರಾಹ್ಮಣರಿಗೆ ಪ್ರತಿಯೊಬ್ಬರಿಗೆ ೨೦ ಕಂಬದಂತೆ ಭೂಮಿಯನ್ನು ದಾನವಾಗಿ ಇತ್ತ ವಿಷಯವು ಈ ಶಾಸನದಲ್ಲಿದೆ.[೯]

ಯಲಬುರ್ಗಿ ಸಿಂದ ಆಳಿಕೆ ಪ್ರದೇಶಗಳಲ್ಲಿ ಶಾಸನಗಳು ಕಡಿಮೆ ಇದ್ದರೂ, ಇದ್ದ ಕೆಲವಾದರೂ ವಿಶೇಷ ಮಾಹಿತಿಯನ್ನು ಒದಗಿಸುತ್ತವೆ. ಜೈನಧರ್ಮ ವಿಷಯವಾಗಿ ಒಂದು ಉತ್ತಮ ಉಲ್ಲೇಖ ಇಲ್ಲಿದೆ. ಈ ಮನೆತನದ ೨ನೇ ಚಾವುಂಡರಸನು ಚಾವುಂಡರಸನ ಅರಸಿಬೀಡಿ ಶಾಸನದಲ್ಲಿ ಅವನ ಹೆಂಡತಿ ಪಟ್ಟಮಹಾದೇವಿ, ದೇಮಲದೇವಿಯು ಕುಂದ ಕುಂದಾನ್ವಯ ದೇಶಿಯ ಗಣದ ಪುಸ್ತಕ ಗಚ್ಛದ ಈ ನೇಮಿಚಂದ್ರಪಂಡಿತರಿಗೆ ದತ್ತಿಯನ್ನು ಕೊಟ್ಟ ವಿಷಯವಿದೆ. ನೇಮಿಚಂದ್ರ ಪಂಡಿತರ ಗುರು ಪರಂಪರೆಯು ಶಾಸನದಲ್ಲಿ ಹೀಗೆ ಕೊಡಲ್ಪಟ್ಟಿದೆ.[೧೦]

ಜೈನಯತಿಗಳ ಒಂದು ಪರಂಪರೆಯೇ ಇಲ್ಲಿ ಇದ್ದ ಮೇಲೆ, ಈ ಭಾಗದಲ್ಲಿ ಒಂದಾದರೂ ಬಸದಿ ಇದ್ದಿರಬಹುದು. ಆದರೆ ಶಾಸನ ಅರ್ಧಕ್ಕೆ ಒಡೆದಿದ್ದರಿಂದ ಯಾವ ವಿವರ ಸಿಗುವುದಿಲ್ಲ. ದೇಮಲದೇವಿಯು ಚಾವುಂಡರಸನನ್ನು ಬಿನ್ನಪಿಸಿ ಕ್ರಿ.ಶ. ೧೧೫೧ ರಲ್ಲಿ ಈ ದತ್ತಿಯನ್ನು

ಬಿಟ್ಟಳೆಂದು ಶಾಸನ ಹೇಳುತ್ತದೆ. ಇದೇ ಚಾವುಂಡರಸನ ಕ್ರಿಶ. ೧೧೬೯ ರ ಹಿರೇಮಲ್ಲೂರ ಶಾಸನದಲ್ಲಿ ಅವನ ಅಧಿಕಾರಿಯಾದ ದಾಸಬೋವನೆಂಬವನ, ಹಿರಿಯ ಮಣಿಯೂರಿನ ಕೆರೆಗೆ ಭೂಮಿ ದಾನ ಮಾಡಿದ ವಿಷಯವಿದೆ. ಇದರಲ್ಲಿಯ ವಿಶೇಷವೆನೆಂದರೆ ಇವನನ್ನು "ಜಿನಸಾಲೆ ಅಧಿಷ್ಠಾಯಕ" ಎಂದು ಕರೆಯಲಾಗಿದೆ. ಹೆಚ್ಚಿನ ವಿವರಗಳು ದೊರೆಯದಿದ್ದರೂ, ಅವನು ಈ ಭಾಗದಲ್ಲಿಯ ಜೈನ ಬಸದಿಗಳ ಮೇಲಾಧಿಕಾರಿಯಾಗಿದ್ದನೆಂದು ಹೇಳಲು ಆಸ್ಪದವಿದೆ. ಅಧಿಷ್ಠಾಯಕ ಎಂಬ ಪದವು ಯಾವುದೊಂದು ಪ್ರದೇಶದ, ಊರಿನ ಅಥವಾ ಖಾತೆಯ ಮುಖ್ಯಸ್ಥನು ಎಂದು ಸೂಚಿಸುವ ಉಲ್ಲೇಖಗಳು ಶಾಸನಗಳಲ್ಲಿ ಹೇರಳವಾಗಿ ಸಿಗುತ್ತವೆ. ಉದಾಹರಣೆಗೆ ಪನ್ನಾಯಧಿಷ್ಠಾಯಕ[೧೧] ೨ನೇ ಚಾವುಂಡನ ಆಳಿಕೆಯಲ್ಲಿ ಅವನ ಹೆಂಡತಿ ಪಟ್ಟದ ರಾಣಿ ದೇಮಲದೇವಿಯು ಯರಂಬರಿಗೆ ಪಟ್ಟಣದ ಜೈನಯತಿಗಳಾದ ನೇಮಿಚಂದ್ರ ಪಂಡಿತರಿಗೆ ದತ್ತಿ ಕೊಟ್ಟ ಉಲ್ಲೇಖವಿದೆ. ಈ ಶಾಸನವು ಹೆಚ್ಚಿನ ಭಾಗ ಒಡೆದು ಹೋಗಿದ್ದು ವಿವರ ದೊರೆಯದಿದ್ದರೂ ಶಾಸನ ಲಭ್ಯವಾದದ್ದೇ ಜೈನ ಬಸದಿಯಲ್ಲಿ ಅಂದಾಗ ಈ ಪ್ರದೇಶದಲ್ಲಿ ಜೈನ ಧರ್ಮದ ಅಸ್ತಿತ್ವದ ಬಗ್ಗೆ ಸಂದೇಹಪಡುವ ಕಾರಣವಿಲ್ಲ. ಉಲ್ಲೇಖಗಳು ಕಡಿಮೆ ಇವೆ. ಇಂದಿನ ಅರಸೀಬೀಡಿಯಲ್ಲಿನ ಜೈನಬಸದಿಯು ಜೀವಂತ ಸಾಕ್ಷಿಯಾಗಿದೆ. ಇಲ್ಲಿ ನೆಲೆಸಿದ್ದ ಜೈನ ಯತಿಗಳ ಮೂಲಸಂಘ ಕುಂದ ಕುಂದಾನ್ವಯ ದೇಶಿಯ ಗಣ ಮತ್ತು ಪುಸ್ತಕ ಗಚ್ಚಕ್ಕೆ ಸೇರಿದವರು. ಆ ಯತಿ ಪರಂಪರೆ ಹೀಗಿತ್ತು.




ಈ ಪ್ರದೇಶದಲ್ಲಿ ಕಾಳಮುಖ ಶೈವ ಧರ್ಮವು ಹೆಚ್ಚು ಪ್ರಚಲಿತವಿದ್ದಿತು ಎಂಬ ಬಗ್ಗೆ ಅನೇಕ ಉದಾಹರಣೆಗಳು ಸಿಗುತ್ತವೆ. ಈ ಮನೆತನದ ಪೆರ್ಮಾಡಿದೇವನಂತೂ ಅತಿಶಯ ಶಿವಭಕ್ತನೆಂದು ವರ್ಣಿನಾಗಿದ್ದಾನೆ. (ಶಿವಾಗಮ ಸಮಾಕರಣನ ಕರ್ಣಪೂರ) ಅಲ್ಲದೇ ಶಾಸ್ತ್ರಗಳಲ್ಲಿ

ನಿಪುಣನು ಕಾವ್ಯ, ಗೀತ, ರಸಾನುಭವ ವಿನೋದನೂ ಎಂದು ವರ್ಣಿತನಾಗಿದ್ದಾನೆ. ಅವನು ಬಾಗದೂರು ಎಂಬಲ್ಲಿ ಮೂಲಸ್ಥಾನ ದೇವರ ದೇವಾಲಯ ಕಟ್ಟಿಸಿ ಆ ದೇವಾಲಯಕ್ಕೆ ನಿರ್ವಹಣೆಗೆ ಭೂಮಿಯನ್ನು ದಾನ ಮಾಡಿದನು. ಆ ಭೂಮಿಯನ್ನು ದೇವಾಲಯದ ಅಧಿಪತಿಗಳಾದ ನೀಲಕಂಠಪಂಡಿತ ದೇವರಿಗೆ ಒಪ್ಪಿಸಿದನು.[೧೨] ಕಣಗಿನಹಾಳದ ಒಂದು ಶಾಸನದಲ್ಲಿ ಪೆರ್ಮಾಡಿಯು ಇದೇ ರೀತಿಯಾಗಿ ಸ್ತುತಿಸಲ್ಪಟ್ಟಿದ್ದಾನೆ.[೧೩] ಶಾಸನ ಅರ್ಧಕ್ಕೆ ಒಡೆದು ಹೋಗಿದ್ದು ಹೆಚ್ಚಿನ ವಿವರ ಸಿಗುವುದಿಲ್ಲ. ಅವನು ದಕ್ಷ ಆಡಳಿತಗಾರನಾಗಿದ್ದನ್ನಲ್ಲದೇ ಒಬ್ಬ ಶಿವಭಕ್ತನೂ, ಶಾಸ್ತ್ರಗಳಲ್ಲಿ, ಸಾಹಿತ್ಯದಲ್ಲಿ ಆಸಕ್ತಿವುಳ್ಳವನೂ, ನಿಪುಣನೂ ಆಗಿದ್ದನು.[೧೪] ರೋಣ ತಾಲೂಕಿನ ಕೊಡಿಕೊಪ್ಪದಲ್ಲಿಯ ಮೂಲ ಬಹ್ಮೇಶ್ವರ ದೇವಾಲಯ ಪ್ರಸಿದ್ಧವೆನಿಸಿತ್ತು, ಇದನ್ನು ಕಟ್ಟಿಸಿದವನು ೧ನೇ ಆಚುಗಿಯ ಮಗ ಬಮ್ಮರಸ. ಆದ್ದರಿಂದ ಈ ದೇವಾಲಯಕ್ಕೆ ಬ್ರಹ್ಮೇಶ್ವರ ಎಂಬ ಹೆಸರು ಬಂದಿತು. ಈ ದೇವಾಲಯವನ್ನು ನರೇಗಲ್ಲಿನಿಂದ ದಕ್ಷಿಣಕ್ಕೆ ಬಾಗದೂರು ಎಂಬಲ್ಲಿ ಕಟ್ಟಿಸಿದಂತೆ ಶಾಸನದಲ್ಲಿ ನಿರೂಪಿತವಾಗಿದೆ.[೧೫] ಪೆರ್ಮಾಡಿಯು ಇದೇ ಬಾಗದೂರದಲ್ಲಿ ಇನ್ನೊಂದು ದೇವಾಲಯ ನಿರ್ಮಿಸಿದನೆಂದು ಶಾಸನದಲ್ಲಿ ಉಲ್ಲೇಖವಿದೆ. ಇದನ್ನು ಮೂಲಸ್ಥಾನ ದೇವರೆಂದು ಹೆಸರಿಸಲಾಗಿದೆ.[೧೬] ಪೆರ್ಮಾಡಿಯ ಅಧಿಕಾರಿಯಾದ ಹಿರಿಯಹನ್ನಸಿನ ತಿಪ್ಪಣ್ಣಯ್ಯನಾಯಕನೆಂಬವನು ತಿಪ್ಪಣ್ಣೇಶ್ವರ ದೇವಸ್ಥಾನ ಕಟ್ಟಿಸಿ ಅದರ ನಿರ್ವಹಣೆಗಾಗಿ ಭೂಮಿದಾನವನ್ನು ಮಾಡಿ ಅದನ್ನು ತಿಲೋಚನಪಂಡಿತ ಯತಿಗೆ ಒಪ್ಪಿಸಿದನೆಂದು ನರೇಗಲ್ಲಿನ ಇನ್ನೊಂದು ಶಾಸನದಲ್ಲಿ ಹೇಳಿದೆ. ಈ ತಿಲೋಚನಪಂಡಿತನು ಆ ದೇವಾಲಯದ ಮುಖ್ಯಸ್ಥನೆಂದು ಹೇಳಬಹುದು.[೧೭] ಕೊಡಿಕೊಪ್ಪದ ಜಗದೇಕಮಲ್ಲ ಪೆರ್ಮಾಡಿಯ ಒಂದು ಶಾಸನದಲ್ಲಿ ಬ್ರಹ್ಮೇಶ್ವರ ದೇವಾಲಯ ಹೆಸರಿಸಿದೆ. ಅದು ಬಮ್ಮರಸನು ಕಟ್ಟಿಸಿದ ದೇವಾಲಯವೇ ಎಂಬುದು ಸ್ಪಷ್ಟ. ಬಮ್ಮರಸನು ಅದನ್ನು ಕಟ್ಟಿದಾಗ (ಕ್ರಿ.ಶ. ೧೧೦೪–೧೧೦೫) ವಿಪ್ರೇಶ್ವರದೇವ ಪಂಡಿತ ಎಂಬ ಯತಿಗಳಿಗೆ ದಾನ ಒಪ್ಪಿಸಿದನೆಂದು ಹೇಳಿದೆ.[೧೮] ಇದೇ ದೇವಾಲಯಕ್ಕೆ ಕ್ರಿ.ಶ. ೧೧೪೪ ರಲ್ಲಿ ಜಗದೇಕಮಲ್ಲ ಪೆರ್ಮಾಡಿದೇವನ ಕಾಲದಲ್ಲಿ, ಆಗ ದೇವಾಲಯದ ಯತಿಗಳಾದ ವಾಮಶಕ್ತಿ ವ್ರತಿಶ್ವರರಿಗೆ ಈ ದೇವಾಲಯದ ನಿರ್ವಹಣೆಗಾಗಿ ನರೇಗಲ್ಲಿನ ವೀಳ್ಯದೆಲೆಯ ವಹಿವಾಟಿನ ಸಂಘದವರು (ತಂಬುಲಿಗಸಾಸಿರ್ವರು, ಉಗುರ ಮೂನೂರುರ್ವರು, ಎಲೆಯ ಭೂಜಂಗ ಐನೂರನಾಲ್ವರು) ದಾನ ಮಾಡಿದ ವಿವರಣೆಗಳಿವೆ. ಇನ್ನೂ ಹಲವಾರು ದತ್ತಿಗಳನ್ನು ಬಿಟ್ಟ ವಿಷಯ ಈ ಶಾಸನದಲ್ಲಿವೆ.[೧೯] ಕ್ರಿ.ಶ. ೧೧೭೮ ರ ಬಾದಾಮಿ ತಾಲೂಕಿನ ಕಟಗೇರಿ ಒಂದು ಶಾಸನದಲ್ಲಿ ತ್ರೈಪುರುಷ ದೇವಾಲಯದ ಉಲ್ಲೇಖವಿದೆ.[೨೦] ಮಾರೀಚಾಸೂರನಿಂದ ಪ್ರತಿಷ್ಠಾಪಿಸಲ್ಪಟ್ಟ ದೇವಾಲಯ ಎಂದು ಅದರಲ್ಲಿ ಹೇಳಿದೆ. ಶಾಸನವು ಬಹಳಷ್ಟು ಒಡೆದು

ಹೋದದ್ದರಿಂದ ಪೂರ್ಣ ವಿವರ ದೊರೆಯುವುದಿಲ್ಲ. ಈ ಶಾಸನವು ಸಿಂದ ವೀರಬಿಜ್ಜಳನ ಮತ್ತು ವಿಕ್ರಮಾದಿತ್ಯನ ಆಳಿಕೆಯ ಕಾಲಕ್ಕೆ ಸೇರಿದೆ.

ತ್ರೈಪುರಷ ದೇವಾಲಯವೆಂದರೆ, ಮೂರು ದೇವತೆಗಳನ್ನು ಪ್ರತಿಷ್ಠಾಪಿಸಿದ ದೇವಾಲಯವು. ಈ ಮೂರು ದೇವತೆಗಳು ಸಾಮಾನ್ಯವಾಗಿ ಬ್ರಹ್ಮ, ವಿಷ್ಣು, ಮಹೇಶ್ವರ. ಎಷ್ಟೋ ಸಲ ಈ ಮೂರರಲ್ಲಿ ಒಂದರ ಬದಲಾಗಿ ಸರಸ್ವತಿಯನ್ನು ಪ್ರತಿಷ್ಠಾಪಿಸಿದ ಉದಾಹರಣೆ ಇದೆ. ವಿಶೇಷವೆಂದರೆ, ತ್ರೈಪುರಷ ದೇವಾಲಯಗಳು, ಶಾಲೆ ಅಥವಾ ವಿದ್ಯಾಕೇಂದ್ರದ ಸ್ಥಳಗಳಲ್ಲಿ ವಿಶೇಷವಾಗಿ ಅಗ್ರಹಾರಗಳಲ್ಲಿ ಇರುತ್ತಿದ್ದವು. ಇಂತಹ ಅನೇಕ ಉದಾಹರಣೆಗಳು ಶಾಸನಗಳಲ್ಲಿ ದೊರೆಯುತ್ತವೆ. ಪ್ರಸ್ತುತ ತ್ರೈಪುರಷ ದೇವಾಲಯವೊಂದು ಕಟಗೇರಿ ಎಂಬ ಅಗ್ರಹಾರದಲ್ಲಿ ಸ್ಥಾಪಿತವಾಗಿತ್ತೆಂಬುದು ಗಮನಾರ್ಹವಾಗಿದೆ.

ಇದೇ ಸಿಂದ ವಿಕ್ರಮಾದಿತ್ಯನ ಕಾಲದಲ್ಲಿ ಸಾಯಿಮಗಾವುಂಡ ಎಂಬ ಅಧಿಕಾರಿಯು ಕಳಕಳೇಶ್ವರ ದೇವರ ಪೂಜೆ ಪುನಸ್ಕಾರಗಳಿಗೆ ದಾನ ಮಾಡಿದ ವಿಷಯವನ್ನು ಈ ಊರಿನ ಒಂದು ಶಾಸನ ಹೇಳುತ್ತದೆ.[೨೧] ಸಾಯಿಮಗಾವುಂಡನಷ್ಟೇ ಅಲ್ಲದೇ ರಾಜೂರಿನ ಉಗರಮೂನೂರ್ವರು, ಎಲೆಯಬೋಜಂಗ, ಐನೂರುನಾಲ್ವರು, ತಂಬೂಲಿಗಸಾಸಿರ್ವರು ವೀಳ್ಯ-ದೆಲೆಯ ವ್ಯವಹಾರದಿಂದ ಬಂದ ಹಣವನ್ನು ದೇವಾಲಯಕ್ಕೆ ಬಿಟ್ಟ ವಿಷಯವು ವರ್ಣಿತವಾಗಿದೆ. ರೋಣ ತಾಲೂಕಿನ ಕಳಕಪ್ಪನ ಗುಡ್ಡ ಎಂಬಲ್ಲಿಯ ಒಂದು ಶಾಸನದಲ್ಲಿ ವರ್ಣಿತವಾಗಿದೆ. ಇದರ ಕಾಲ ಕ್ರಿ.ಶ. ೧೧೨೦. ಕ್ರಿ.ಶ. ೧೦೮೩ ರಲ್ಲಿ ಸಿಂದ ಭೂಲೋಕಮಲ್ಲ ಪೆರ್ಮಾಡಿ ಆಳಿಕೆ ಕಾಲದಲ್ಲಿ ಸೈಯಡಿ (ಇಂದಿನ ರೋಣ ತಾಲೂಕಿನ ಸವಡಿ) ಯಲ್ಲಿಯ ಮೂಲಸ್ಥಾನ ದೇವರ ದೇವಾಲಯಕ್ಕೆ ಸೈಯಡಿಯ ಮ್ಹಹಾಜನರು ಭೂದಾನ ಮಾಡಿ ಚಂದ್ರಭೂಷಣ ಪಂಡಿತರ ಕೈಗೆ ಒಪ್ಪಿಸಿದರು ಎಂದು ಸವಡಿಯ ಒಂದು ಶಾಸನ ಹೇಳುತ್ತದೆ. ಸಿಂದ ಚಾವುಂಡನ ಮಗನಾದ ಯುವರಾಜ ಆಚಿದೇವ ಮತ್ತು ಅವನ ತಾಯಿ ದೆಮಲದೇವಿಯರು ಪಟ್ಟದಕಿಸುವೊಳಲ್ ಅಂದರೆ ಇಂದಿನ ಪಟ್ಟದಕಲ್ಲು ಕುಮಾರವೃತ್ತಿಯಾಗಿ ಆಳುತ್ತಿದ್ದಾಗ ಅವರಿಗೆ ಒಂದು ವಿಷಯವು ತಿಳಿಯುತ್ತದೆ. ಹಿಂದಿನ ಅರಸರು (ಪೂರ್ವದರಸುಗಳ್) ಮಾಡಿದ ಧರ್ಮ ಕಾರ್ಯಗಳು "ದೇಶಕಾಲ ಸ್ಥಿತಿಯಿಂ" ನಡೆಯದೆ ನಿಂತು ಹೋದುದು, ದಕ್ಷಿಣ ವಾರಣಾಸಿ ಎನಿಸಿದ ಕಿಸುವೊಳಲ್ ಅಥವಾ ಪಟ್ಟದಕಲ್ಲಿನ ವಿಜಯೇಶ್ವರ ಎಂಬ ದೇವಾಲಯಕ್ಕೆ ಹಿಂದಿನ ಅರಸರು ಮಾಡಿದ ದಾನದತ್ತಿಗಳು ನಿಂತು ಹೋದದ್ದು ಅಂದರೆ ಇವರ ಗಮನಕ್ಕೆ ಬರುತ್ತದೆ. ಆಗ ಅವರು ಆ ದೇವರ ಪೂಜೆ ಪುನಸ್ಕಾರಗಳಿಗೆ, ಆಚಾರ್ಯರ ಊಟ, ವಸತಿಗಳಿಗೆ,

ಭೂಮಿಯನ್ನು ಸೂರ್ಯಭರಣ ಪಂಡಿತರಿಗೆ ದಾನ ಕೊಟ್ಟು, ಅನುಕೂಲವಾಗುವಂತೆ ಭೂಮಿಯನ್ನು ಆಚಾರ್ಯರ ವಶಕ್ಕೆ ಒಪ್ಪಿಸುತ್ತಾರೆ. ವಿಶೇಷವಾಗಿ ಗಮನಿಸಬೇಕಾದ ಅಂಶವೆಂದರೆ ಈ ವಿಜಯೇಶ್ವರ ದೇವಾಲಯವು ಬಹಳ ಹಿಂದೆ ಕ್ರಿ.ಶ. ೬೯೬ ರಿಂದ ೭೩೩ ರ ವರೆಗೆ ಆಳಿದ ಬಾದಾಮಿ ಚಾಲುಕ್ಯರ ಮನೆತನದ ವಿಜಯಾದಿತ್ಯನು ಈ ದೇವಾಲಯವನ್ನು ಕಟ್ಟಿಸಿದ್ದನು.[೨೨] ೧೦ ನೇ ಶತಮಾನದಷ್ಟು ಹಿಂದೆಯೇ ಕಟ್ಟಲಾದ ದೇವಾಲಯದ ವಿವರಗಳು ಇವೆ ಮತ್ತು ಸಿಂದರಾಜಕುಮಾರನು ಪುನುರುಜ್ಜೀವನಗೊಳಿಸಿದ ಉಲ್ಲೇಖವು ಪಟ್ಟದಕಲ್ಲಿನ ಶಾಸನದಲ್ಲಿ ಇದ್ದುದನ್ನು ಮತ್ತು ೨೦೦ ವರ್ಷಗಳ ನಂತರ ಕ್ರಿ.ಶ. ೧೧೬೨ ರಲ್ಲಿ ಸಿಂದ ರಾಜಕುಮಾರನಿಗೆ ತಿಳಿದು ಅವನು ಅವಶ್ಯಕ ಕ್ರಮಗಳನ್ನು ಕೈಗೊಂಡಿದ್ದನ್ನು ನೋಡಿದಾಗ ಆಶ್ಚರ್ಯವೆನಿಸುತ್ತದೆ[೨೩] ಅಂದೂ ಸಹ ದಾನದತ್ತಿಗಳ ದಾಖಲೆಗಳನ್ನು ಕಾದಿಡಲ್ಪಡುತ್ತಿದ್ದವು ಎಂಬುದು ಸ್ಪಷ್ಟವಾಗುತ್ತದೆ. ಈ ವಿಜಯೇಶ್ವರ ದೇವಾಲಯವನ್ನು ಇಂದು ಸಂಗಮೇಶ್ವರ ದೇವಾಲಯ ಎಂದು ಕರೆಯಲಾಗುತ್ತಿದೆ.

ಈ ಮೇಲೆ ವೀಳ್ಯದೆಲೆ ವ್ಯಾಪಾರ ಸಂಘದವರು ದೇವಾಲಯಗಳಿಗೆ ಕೊಟ್ಟ ದಾನದತ್ತಿಗಳನ್ನು ನೋಡಿದ್ದೇವೆ ಅದೇ ರೀತಿ ಇನ್ನೊಂದು ಉದಾಹರಣೆಯಲ್ಲಿ ಎಣ್ಣೆ ವ್ಯಾಪಾರಿ ಸಂಘದವರು ದೇವಾಲಯ ಕಟ್ಟಿಸಿದ ಉದಾಹರಣೆಯೊಂದು ಬೆಂಚಮಟ್ಟಿ ಶಾಸನದಲ್ಲಿ ಕಾಣಸಿಗುತ್ತದೆ.[೨೪] ಸಿಂದ ಚಾವುಂಡನ ಕಾಲದಲ್ಲಿ ತೆಲ್ಲಿಗ ಸಮುದಾಯದ ೫೦ ಕುಟುಂಬದವರು ಯರಂಬರಾಪುರ ಅಥವಾ ಯಲಬುರ್ಗಿಯಲ್ಲಿ ಈಶ್ವರದೇವಸ್ಥಾನವನ್ನು ಕಟ್ಟಿಸಿ ಅದಕ್ಕೆ ತೆಲಗೇಶ್ವರ ಎಂದು ತಮ್ಮದೇ ಹೆಸರನ್ನು ಇಡುತ್ತಾರೆ. ಈ ದೇವಾಲಯದ ನಿರ್ವಹಣೆಗೆ ತಮ್ಮ ತಮ್ಮ ಎಣ್ಣೆ ಗಾಣಗಳಲ್ಲಿಯ ನಿರ್ದಿಷ್ಟ ಭಾಗವನ್ನು ಕೊಡುತ್ತಾರೆ. ಮಠಕ್ಕೆ ಬರುವ ಅತಿಥಿಗಳ ಆಹಾರಕ್ಕೆಂದು ಕೂಡ ನೀಡಿದ ದಾನದಲ್ಲಿ ತಿಂಗಳು ತಿಂಗಳು ನಿರ್ದಿಷ್ಟ ಪ್ರಮಾಣದ ಜೋಳವನ್ನು (ತಿಂಗಳಿಂಗೆ ಒಕ್ಕಲ್ಗಳೋಳ್ ಜೋಳ ಕೊಳಗ ಒಂದು) ಕೊಡುವ ವ್ಯವಸ್ಥೆ ಮಾಡುತ್ತಾರೆ ಮತ್ತು ಇಂತಿಷ್ಟು ಭೂಮಿಯನ್ನು ದಾನವಾಗಿ ಕೊಡುತ್ತಾರೆ. ಇದೆಲ್ಲ ದಾನವನ್ನು ಆ ದೇವಾಲಯದ ಸ್ಥಾನದ ಆಚಾರ್ಯರಾದ ಕಾಳಾಮುಖ ಪಂಥದ ಚಂದ್ರಮೌಳಿದೇವ ಎಂಬ ಯತಿಗಳಿಗೆ ಒಪ್ಪಿಸುತ್ತಾರೆ. ಅವರ ವಂಶಾವಳಿ ಹೀಗಿದೆ.

ವಿಗ್ರಹೇಶ್ವರ ಯತಿ
|
ಯೋಗೇಶ್ವರ ಯತಿ
|
ಚಂದ್ರಮೌಳಿ ಯತಿ

ಆಳರಸರು, ಅಧಿಕಾರಿಗಳು ಅಲ್ಲದೇ ವ್ಯಾಪಾರಸ್ಥರು, ವ್ಯಾಪಾರ ಸಂಘದವರು, ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ ಕಾರ್ಯದಲ್ಲಿ ಭಾಗವಹಿಸುತ್ತಿದ್ದುದು ಅಂದಿನ ಸಮಾಜದ ವ್ಯವಸ್ಥೆಯ ಮೇಲೆ ಬೆಳಕನ್ನು ಬೀರುತ್ತದೆ.

ಯಲಬುರ್ಗಿ ಸಿಂದರ ಕಾಲದಲ್ಲಿ ಮತ್ತು ಅವರ ಪ್ರದೇಶದಲ್ಲಿ ಇನ್ನೂ ಅನೇಕ ದೇವಾಲಯಗಳ ಉಲ್ಲೇಖ ಸಿಗುತ್ತವೆ. ಬನವಾಸಿ ನಾಡಿನ ಎಡವಟ್ಟೆ ಕಂಪಣದ ನಿಡುನೇಗಿಲುದಲ್ಲಿ ಊರೊಡೆಯ ಮಹಾದೇವಣ್ಣನು ಕಟ್ಟಿಸಿದ ಮಲ್ಲಿಕಾರ್ಜುನ ದೇವಸ್ಥಾನಕ್ಕೆ ಸಿಂದೇಶ್ವರದೇವನು ಹಲವಾರು ಕರಗಳಿಂದ ಬಂದ ಆದಾಯವನ್ನು ದಾನವಾಗಿ ಕೊಡುತ್ತಾನೆ. ಬನವಾಸಿ ನಾಡಿನ ಮೇಲಾಳಿಕೆಯ ದಂಡನಾಯಕನಾದ ಬೊಮ್ಮಯ್ಯ ಹಾಗೂ ಇತರ ನಾಯಕರು ಸಹ ಭೂಮಿದಾನ ಮಾಡುತ್ತಾರೆ. ಈ ಎಲ್ಲ ದಾನಗಳನ್ನು ವಾಮಶಕ್ತಿ ಪಂಡಿತ ಎಂಬ ಯತಿಗಳಿಗೆ ಒಪ್ಪಿಸುತ್ತಾರೆ.[೨೫] ಮೇಜವೂರ ಅಂದರೆ ಇಂದಿನ ಹಿರೇಕೆರೂರು ತಾಲೂಕಿನ ಮೆದೂರ ಶಾಸನದಲ್ಲಿ ಬರುವ ಮಾಕಳೇಶ್ವರ ದೇವಾಲಯ ಮತ್ತು ಅದರ ಸ್ಥಾನಪತಿಗಳಾದ ಲಕುಳೇಶ್ವರ ಪಂಡಿತ[೨೬] ಅದೇ ಊರಿನ ಯೋಗಾತ್ಮಭಟ್ಟಾರಕ[೨೭] ಇವರು ಇನ್ನಷ್ಟು ದಾನಗಳನ್ನು ಪಡೆದ ಉದಾಹರಣೆಗಳು ಸಿಗುತ್ತವೆ. ಮೇದೂರಿನ ಇನ್ನೊಂದು ಶಾಸನದಲ್ಲಿ ಮಾಕಳೇಶ್ವರ ದೇವಾಲಯಕ್ಕೆ ಸಂಬಂಧಿಸಿದಂತೆ, ಯೋಗಾತ್ಮನನ್ನಿಭಟ್ಟಾರಕನ ಉಲ್ಲೇಖ ಬರುತ್ತದೆ. ಬಹುಶಃ ಅಗ್ನಿಭಟ್ಟಾರಕ ಹೆಸರೇ ನನ್ನೀಯ ಭಟ್ಟಾರಕ ಎಂದು ತಪ್ಪಾಗಿ ಮುದ್ರಿತವಾಗಿರಬಹುದಾದ ಸಾಧ್ಯತೆಗಳು ಇದೆ. ಮೇದೂರಿನ ಮತ್ತೊಂದು ಶಾಸನದಲ್ಲಿ ಎಡವಟ್ಟೆ-೭೦ರೊಳಗಿನ ನಾಗಾರ್ಜುನ ಎಂಬಲ್ಲಿನ ಬ್ರಹ್ಮೇಶ್ವರ ದೇವಾಲಯ ಉಲ್ಲೇಖವಿದೆ. ಈ[೨೮] ಪ್ರದೇಶದಲ್ಲಿ ಕಾಳಾಮುಖ ಶೈವಪಂಥ ಭದ್ರವಾಗಿ ನೆಲೆವೂರಿತ್ತು ಎಂಬುದಕ್ಕೆ ಇವೆಲ್ಲ ಸ್ಪಷ್ಟ ಸಾಕ್ಷಿಗಳಾಗಿವೆ.[೨೯]

ಕುರುಗೋಡು ಸಿಂದ ಆಳಿಕೆಯ ಪ್ರದೇಶದಲ್ಲಿಯೂ ಲಾಕುಳ ಅಥವಾ ಕಾಳಾಮುಖ ಶೈವಪಂಥವೇ ಪ್ರಮುಖ ಧರ್ಮವಾಗಿದ್ದಿತು. ಜೈನಧರ್ಮದ ಕುರುಹುಗಳು ಈ ಪ್ರದೇಶದಲ್ಲಿ ದೊರೆತಿಲ್ಲ. ಕಾಳಮುಖ ಶೈವ ಸಂಪ್ರದಾಯ ಮಾತ್ರ ಊರ್ಜಿತ ಸ್ಥಿತಿಯಲ್ಲಿದ್ದಿತು. ಈ ಮನೆತನದ ಮೊದಲ ಪ್ರಸಿದ್ಧ ಸಾಮಂತನಾದ ೧ನೇ ರಾಚಮಲ್ಲ ಹಾಗೂ ಹೆಂಡತಿ ಮಾಕಲದೇವಿಯು ಕೂಡಿಯೇ ರಾಜ್ಯಭಾರ ನಡೆಸುತ್ತಿರುವಾಗ ಆನೆವರಿಯಲ್ಲಿಯ ಭೈರವ ದೇವರಿಗೆ ಭೂಮಿದಾನ ಮಾಡಿದ ವಿಷಯವು ಕೊಂಚಗೆರೆ ಶಾಸನದಲ್ಲಿ ನಮೂದಿತವಾಗಿದೆ.[೩೦] ಅವನು ಪರಾಕ್ರಮಿ ಇದ್ದುದರ ಜೊತೆಗೆ "ಶ್ರೀ ಪಾರ್ವತೀಶಾಂಘ್ರಿ ನಿರ್ಭರ ಭಕ್ತರ ವಿಭು" ಎಂದು ಬಣ್ಣಿಸಲ್ಪಟ್ಟಿದ್ದಾನೆ.[೩೧] ಇವನು ಅಪ್ಪಟ ಶಿವಭಕ್ತನೆಂದು ಸೂಚಿಸಲು 'ಶಿವೈಕ್ಯ ಚೂಡಾಮಣಿ' ಅರ್ಚಿತಶಿವಪಾದ ಎಂದೂ

ಶಾಸನದಲ್ಲಿ ವರ್ಣಿಸಲಾಗಿದೆ.[೩೨] ಇವನು ಪರಮಮಾಹೇಶ್ವರ ಎಂದು ಕರೆಯಲ್ಪಟ್ಟಿದ್ದು ಅರ್ಥಪೂರ್ಣವಾಗಿದೆ. ಸಾಹಿತ್ಯ ಗ್ರಂಥಗಳಲ್ಲಿಯೂ ಇವನು ಮಹಾಶಿವಭಕ್ತರ ಸಾಲಿನಲ್ಲಿ ಸ್ಥಾನ ಪಡೆದಿದ್ದಾನೆ.[೩೩]

ರಾಚಮಲ್ಲನು ಅಪ್ಪಟ ಶಿವಭಕ್ತನೆಂಬ ವರ್ಣನೆಯನ್ನು ಗಮನಿಸಿ "ಕುರುಗೋಡು ಸಿಂದರು ವೀರಶೈವರೆಂಬುವುದರಲ್ಲಿ ಯಾವ ಸಂಶಯವೂ ಇಲ್ಲ" ಎಂಬ ನಿರ್ಣಯಕ್ಕೆ ಬರಲಾಗಿದೆ.[೩೪] ಈ ವಿದ್ವಾಂಸರ ನಿರ್ಣಯವು ಪರಿಶೀಲನಾರ್ಹವಾಗಿದೆ. ೧ನೇ ರಾಚಮಲ್ಲನ ಕಾಲದಲ್ಲಿ ವೀರಶೈವ ಧರ್ಮವು ಇನ್ನೂ ಉದಯೋನ್ಮುಖ ಕಾಲದಲ್ಲಿದ್ದಿತು. ಶಿವಭಕ್ತಿಯು ವೀರಶೈವ ಧರ್ಮದ ಮುಖ್ಯ ಲಕ್ಷಣವಾದರೂ ಇಷ್ಟಲಿಂಗ ಪೂಜೆ ಅದರ ಅವಿಭಾಜ್ಯ ಅಂಗ, ಸ್ಥಾವರ ದೇವಾಲಯ ನಿರ್ಮಾಣವು ವೀರಶೈವ ಧರ್ಮಕ್ಕೆ ಗೌಣ ಅಲ್ಲದೇ ರಾಚಮಲ್ಲನ ಶಾಸನದಲ್ಲಿಯೇ ದೇವಾಲಯ ನಿರ್ಮಾಣದ ಮತ್ತು ಕಾಳಾಮುಖ ಪಂಥದ ಅಮೃತರಾಶಿ ಮುನಿಗಳ ಉಲ್ಲೇಖವಿದೆ.[೩೫] ಹೀಗಾಗಿ ರಾಚಮಲ್ಲನು ಮತ್ತು ತನ್ಮೂಲಕ ಕುರುಗೋಡಿನ ಸಿಂದರು ವೀರಶೈವರೇ ಎಂದು ಕಡಾಖಂಡಿತವಾಗಿ ಹೇಳುವುದು ಸರಿಯೆನಿಸುವುದಿಲ್ಲ. ಕುರುಗೋಡಿನ ಮುಮ್ಮರಿದಂಡಗಳಲ್ಲಿ ಪ್ರಮುಖನಾದ ಮಹಾವಿನಹಾಳ ಕಲ್ಲಸೆಟ್ಟಿಯು ಕಟ್ಟಿಸಿದ ಕಲಿದೇವ ದೇವಸ್ಥಾನಕ್ಕೆ ಭೂಮಿದಾನ ಮಾಡಿ ಕಾಳಾಮುಖ ಯತಿಗಳಾದ ಅಮೃತ ಕಾಶಿದೇವರಿಗೆ ಒಪ್ಪಿಸಿದ ವಿಷಯವು ಕುರುಗೋಡಿನ ಶಾಸನದಲ್ಲಿದೆ.[೩೬] ಈ ಕಲ್ಲಿಸೆಟ್ಟಿಯು ಮಹಾಶಿವಭಕ್ತನೇ ಇವನು ವ್ಯಾಪಾರಿ ಆದರೂ ಇವನ ಭಂಡವಲು ಭಕ್ತಿ ಇವನು ಕೋಟಿ ಕೋಟಿ ಲಾಭ ಗಳಿಸುವುದು ಶಿವಭಕ್ತಿಯಿಂದ ಬೆಳೆಸಿನಿಂದ ಇದೇ ಮಾತನ್ನು ಶಾಸನವು ಸುಂದರವಾಗಿ ಹೇಳಿದೆ.[೩೭]

> "ಭಕ್ತಿಯ ಭಂಡ ಮೊದಲ್ ನಿಜ
> ಭಕ್ತಿಯೇ ಕೋಟಾನುಕೋಟಿ ಲಾಭಂ ಶಿವಸದ್
> ಭಕ್ತಿಯೇ ಬೆಳೆಸಿ -----
> ಭಕ್ತ ಕಲಿದೇವಸೆಟ್ಟಿ ನೆಗಳ್ದಮ್ ಧರೆಯೊಳ್"

ಇವನ ಮೇಲೆ ಶಿವನ ಅಪಾರ ಕರುಣೆ, ಅವನೇ ಶ್ರೀ ರಕ್ಷೆ

> "ಚಿಂತಾಮಣಿ ಲಿಂಗಂ ಹೃದ
> ಯಾಂತರ್ದೊಳ್ ನಿಂದು ಕಲ್ಲಸೆಟ್ಟಿಗೆ ದಯೆಯಿಂ
> ದಿಂತು ನಡೆ ಇಂತು ನುಡಿಯೆಂ
> ದಿಂತು ಸದಾ ಶಿಕ್ಷಿಸುತ್ತಿ ರಕ್ಷಿಸುತಿರ್ಪಂ"

ಒಂದು ಶಾಸನವಂತೂ ರಾಚಮಲ್ಲನ ಶಿವಭಕ್ತಿಯನ್ನು ಮೆಚ್ಚಿ ಶಿವನು ತನ್ನ ಪರಿವಾರದೊಡನೆ ಇತನಡೆಗೆ ಬರಲು, ಇವನು ಮಹಾಪ್ರಸಾದವೆಂದು ಶಿವಾರ್ಚನೆ ಮಾಡಿ "ಶಂಕರನೊಳ್ ಸಾಲೊಕ್ಯಮುಂ ಪೊರ್ದಿ"ದನು[೩೮] ಎಂದು ಹೇಳುತ್ತದೆ. ಅವನೇ ಸ್ವಯಂಭೂದೇವಾಲಯದ ಪಶ್ಚಿಮದಲ್ಲಿ ಲಿಂಗೋದ್ಭವನಾಗಲು ಅದು ಉದ್ಭವ ರಾಚಮಲ್ಲದೇವರೆಂಬ ಹೆಸರಿನಿಂದ ಪ್ರಸಿದ್ಧವಾಯಿತೆಂದು ವರ್ಣಿಸುತ್ತದೆ. ಕುರುಗೋಡಿನಲ್ಲಿ ಇಂದಿಗೂ ರಾಚಮಲ್ಲ ದೇವಾಲಯವಿದೆ ಎಂದು ಹೇಳಲಾಗಿದೆ.[೩೯]

ಇಲ್ಲಿಯ ಮುಮ್ಮರಿದಂಡಗಳು ಮೇಲೆ ಉಲ್ಲೇಖಿಸಿದ ಕಲ್ಲಿನಾಥ ದೇವಾಲಯವಲ್ಲದೇ ಗೌರೇಶ್ವರದೇವ ಎಂಬ ತ್ರಿಕೂಟದ ದೇವಾಲಯದ ನಿರ್ಮಿಸಿದರು. ದೇವಾಲಯಕ್ಕೆ ೨ನೇ ರಾಚಮಲ್ಲ ಆದಿಯಾಗಿ ಎಲ್ಲ ಗವರೆಗಳು ಅಂದರೆ ವೀಳ್ಯದೆಲೆ ವ್ಯಾಪಾರಿಗಳು, ಹೂದೋಟಗಳ ವ್ಯಾಪಾರಿಗಳು, ತಮ್ಮ ವ್ಯಾಪಾರದ ಕರಗಳಿಂದ ಬಂದ ಉತ್ಪನ್ನವನ್ನು ದಾನವಾಗಿ ಕೊಟ್ಟರು. ಈ ತ್ರಿಕೂಟದಲ್ಲಿ ವಡ್ಡೆವ್ಯವಹಾರಿ ಮಲ್ಲಿಸೆಟ್ಟಿಯು ಮಲ್ಲಿಕಾರ್ಜುನದೇವರನ್ನು ಪ್ರತಿಷ್ಠಾಪಿಸಿದನು. ಆ ದೇವರ ನಿತ್ಯ ಪೂಜೆ ನೈವೇದ್ಯ, ನಂದಾದೇವಿಗೆ ಇತ್ಯಾದಿಗಳಿಗಾಗಿ ಭೂಮಿದಾನ ಮಾಡಲಾಯಿತು. ಅದೇ ತ್ರಿಕೂಟದಲ್ಲಿ ಮುದ್ದರಾಜನು ಮುದ್ದೇಶ್ವರ ದೇವರನ್ನು ಪ್ರತಿಷ್ಠಾಪಿಸಿದನು. ಹೀಗೆ ಇದು ಗೌರೇಶ್ವರ ಮಲ್ಲಿಕಾರ್ಜುನ ಮತ್ತು ಮುದ್ದೇಶ್ವರ ದೇವರನ್ನೊಳಗೊಂಡ ತ್ರಿಕೂಟಾಚಲವಾಯಿತು.

ಇವನ ಮೊಮ್ಮಗನಾದ ೨ನೇ ರಾಚಮಲ್ಲನು ಶಿವಶರಣನೆಂದೇ ಖ್ಯಾತನಾಗಿದ್ದಾನೆ. ಅವನಿಗೆ ರಾಜ್ಯವನ್ನು ಸಾಕ್ಷಾತ್ ಶಿವನೇ ಪ್ರಸಾದವೆಂಬತೆ ದಯಪಾಲಿಸಿದನೆಂದು ಶಾಸನ ಹೇಳುತ್ತದೆ. [೪೦] ಅವನ ಮಹಾಪ್ರಧಾನನಾದ ಹಡಪವಳದ ಬೇಚಿರಾಜನು ಭೂಮಿದಾನ ಮಾಡಿ ಕಾಳಾಮುಖ ಶೈವಯತಿಗಳಾದ ಬಾಲಶಿವಾಚಾರ್ಯರಿಗೆ ಒಪ್ಪಿಸುತ್ತಾನೆ. ಈ ಯತಿಯು ಲಕುಲಿಶಾಗಮ ಮತ್ತು ಕಾಳಮುಖ ದರ್ಶನಗಳಲ್ಲಿ ನಿಷ್ಣಾತನೆಂದು ವರ್ಣಿಸಲ್ಪಟ್ಟಿದ್ದಾನೆ. ಕುರುಗೋಡು ಸಿಂದರ ಉತ್ಕಟ ಶಿವಭಕ್ತರಾದ ಕಾಳಾಮುಖಯತಿಗಳ ಅನುಯಾಯಿ- ಗಳಾಗಿದ್ದರೆಂದು ಶಾಸನಗಳು ಸ್ಪಷ್ಟಪಡಿಸುತ್ತವೆ.

ಸಮಕಾಲೀನ ಕರ್ನಾಟಕದಲ್ಲಿ ಧಾರ್ಮಿಕ, ಸಾಮಾಜಿಕ ಕ್ಷೇತ್ರಗಳಲ್ಲಿ ಅತ್ಯಂತ ಮಹತ್ವದ ಘಟನೆಯೊಂದು ನಡೆಯಿತು. ಅದೇನೆಂದರೆ *"ಕಲ್ಯಾಣಕ್ರಾಂತಿ"* ಎಂದು ಕರೆಯಲ್ಪಡುವ *"ಬಸವಕ್ರಾಂತಿ"*. ಮೂಲತಃ ಬ್ರಾಹ್ಮಣ ಕುಲದಲ್ಲಿ ಹುಟ್ಟಿದ ಬಸವಣ್ಣ ಅಥವಾ ಬಸವೇಶ್ವರ ಸಾಂಪ್ರಾದಾಯಿಕ ಧಾರ್ಮಿಕ ಹಾಗೂ ಸಾಮಾಜಿಕ ಪದ್ಧತಿಗಳನ್ನು ಧಿಕ್ಕರಿಸಿ ಶಿವಭಕ್ತಿಯ ಮುಖಾಂತರ ಜನರ ಧಾರ್ಮಿಕ, ಸಾಮಾಜಿಕ ಜೀವನದಲ್ಲಿ ಅಪಾರ ಬದಲಾವಣೆ ಉಂಟು

ಮಾಡಿದರು. ಅರ್ಥವಿಲ್ಲದ ಧಾರ್ಮಿಕ ಆಚಾರಣೆಗಳನ್ನು ಧಿಕ್ಕರಿಸಿದರು. ಜಾತಿ ಪದ್ಧತಿಯನ್ನು ಹೀಗಳೆದರು. ಸ್ತ್ರೀ ಪುರಷ ಸಮಾನತೆ ಸಾರಿದರು. ಧಾರ್ಮಿಕವಾಗಿ ಉತ್ಕಟ ಶಿವಭಕ್ತಿ ಮತ್ತು ಇಷ್ಟಲಿಂಗ ಪೂಜೆಗಳೇ ಮುಂದೆ "ವೀರಶೈವ" ಎಂದು ಹೆಸರಾದ ಬಸವಧರ್ಮದ ತತ್ವಗಳಾದವು. ಈ ವಿಚಾರಗಳು ಚಳುವಳಿ ಎಂಬಂತೆ ನಾಡಿನಲ್ಲೆಲ್ಲಾ ಹೊಸ ಪ್ರಭಾವಕ್ಕೊಳಗಾದರು ಎಂದು ಹೇಳಬಹುದು. ಅನೇಕರು ಈ ಪ್ರಭಾವಕ್ಕೆ ಒಳಗಾದರು. ಕುರುಗೋಡು ಸಿಂದ ಸಾಮಂತ ರಾಚಮಲ್ಲರೇ ಇದಕ್ಕೆ ಉದಾಹರಣೆ. ಕಾಳಾಮುಖ ಯತಿಗಳ ಅನುಯಾಯಿಯಾಗಿ ಅವರು ಶಿವಭಕ್ತನೆನಿದ್ದರೂ, ಬಸವಣ್ಣವರ ಶಿವಭಕ್ತಿಯಿಂದ ಅವರು ಪ್ರಭಾವಿತರಾಗಿದ್ದರೆಂಬುದು ಕುರುಗೋಡು ಶಾಸನಗಳಿಂದ ಸ್ಪಷ್ಟವಾಗುತ್ತದೆ. ತಲೆ ತಲಾಂತರದಿಂದ ಬಂದ ದೇವಾಲಯ ಸಂಸ್ಕೃತಿ ಮತ್ತು ಮೂರ್ತಿಪೂಜೆಗಳನ್ನು ತಕ್ಷಣವೇ ಅಲ್ಲಗಳೆಯಲಾಗದಿದ್ದರೂ, ಈ ಹೊಸ ಅಲೆಯ ಪ್ರಭಾವಕ್ಕೆ ಒಳಗಾದರೆಂದು ಹೇಳಬಹುದು. ರಾಚಮಲ್ಲನಿಗೆ ಶಿವನು ಪ್ರತ್ಯಕ್ಷನಾಗಿ ಅವನು ಕೈಲಾಸಕ್ಕೆ ಹೋದುದು, ಅವನೇ ಲಿಂಗೋದ್ಭವನಾಗಿ ಪೂಜಿಸಲ್ಪಟ್ಟಿದುದು ಇದಕ್ಕೆ ಉದಾಹರಣೆ. ಅದೇ ರೀತಿ ಕುರುಗೋಡಿನ ಪ್ರಮುಖ ಮುಮ್ಮುರಿ ದಂಡ ಕಲ್ಲಿಸೆಟ್ಟಿಯ ವ್ಯಾಪಾರಕ್ಕೆ ಭಕ್ತಿಯೇ ಭಂಡವಲು ಮತ್ತು ಭಕ್ತಿಯೇ ಲಾಭವು ಎಂಬ ಮಾತುಗಳು ಈ ಹೊಸ ಅಲೆಯ ಪ್ರಭಾವನ್ನು ಸ್ಪಷ್ಟವಾಗಿ ಸೂಚಿಸುತ್ತವೆ. ಕುರುಗೋಡಿನ ಒಂದು ಶಾಸನದ ಈ ಪದ್ಯವು ಈ ಹೊಸ ಭಕ್ತಿ ಮಾರ್ಗದ ಮೇಲ್ಮೆಯನ್ನು ಸುಂದರವಾಗಿ ವರ್ಣಿಸುತ್ತದೆ.[೪೧]

॥ ಭಕ್ತಿಯ ಮನೆ, ಭಕ್ತಿಯ ನೆಲೆ
ಭಕ್ತಿಯಾವತಿ, ಭಕ್ತಿಏಳ್ಗೆ ಭಕ್ತಿಯ ರಾಜ್ಯಂ,
ಭಕ್ತಿ ಭಂಡಾರಂ ಶಿವ
ಭಕ್ತಿಯ ಸಿರಿಬಂದು ನೆರೆಸಿತಿ ಕುರುಗೋಡಳ್ ॥

ಕುರುಗೋಡು ಪ್ರದೇಶದಲ್ಲಿ ಧಾರ್ಮಿಕ ಕ್ಷೇತ್ರದಲ್ಲಿಯ ಒಂದು ಮಹತ್ವದ ಅಂಶವೆಂದರೆ, ಕಾರ್ತಿಕೇಯನ ಆರಾಧನೆ. ಇಂದಿನ ಬಳ್ಳಾರಿ ಜಿಲ್ಲೆ ಸೊಂಡೂರು ಸಮೀಪದ ಕಾರ್ತಿಕೇಯ ಬೆಟ್ಟವು ಅಥವಾ ಕಾರ್ತಿಕೆ ತಪೋವನವು ಇತಿಹಾಸ ಪ್ರಸಿದ್ಧವಲ್ಲದೇ ಪುರಾಣ ಪ್ರಸಿದ್ಧವೂ ಆಗಿದ್ದಿತು. ರಾಮಾಯಾಣದ ಶ್ರೀರಾಮಚಂದ್ರನ ಬಾಣದ ತುದಿಗಳು ಕಾರ್ತಿಕೇಯ ತಪೋವನದ ಕಬ್ಬಿಣದಿಂದ ಮಾಡಲ್ಪಟ್ಟವು ಎಂದು ರಾಮಾಯಣದಲ್ಲಿ ಬರುತ್ತದೆ.[೪೨] ಸೊಂಡೂರು ಪ್ರದೇಶವು ಕಬ್ಬಿಣದ ಅದಿರಿಗೆ ಪ್ರಸಿದ್ಧವೆಂಬುದು ಸರ್ವವಿದಿತ. ಅದಿರಿನ ವ್ಯವಹಾರವಲ್ಲದೇ ಕಬ್ಬಿಣ ಕೈಗಾರಿಕೆಯೂ ಪ್ರಾಚೀನ ಕಾಲದಿಂದ ನಡೆಯುತ್ತಿತ್ತೆಂಬುದೇ ಒಂದು ವಿಶೇಷ. ಕಾರ್ತಿಕೇಯ

ಸ್ವಾಮಿ ಬಾದಾಮಿ ಚಾಲುಕ್ಯರ ಆರಾಧ್ಯದೈವ. "ಕಾರ್ತಿಕೇಯ ಪರಿರಕ್ಷಕ ಪ್ರಾಪ್ತ ಕಲ್ಯಾಣ ಪರಂಪರಾಣಾಂ" ಎಂಬ ಅವರ ಬಿರುದು ಹೆಚ್ಚು ಕಡಿಮೆ ಎಲ್ಲ ಚಾಲುಕ್ಯರ ಶಾಸನಗಳಲ್ಲಿ ದೊರೆಯುತ್ತದೆ.[೪೩] ಸಿಂದರು ಸಾಮಾನ್ಯವಾಗಿ ಮಾಳಚಿದೇವಿಲಬ್ಧ-ವರಪ್ರಸಾದರೆಂದು ಕರೆದುಕೊಂಡರು. ಕುರುಗೋಡು ಪ್ರದೇಶದ ಸಿಂದರು ಆ ಪ್ರದೇಶದ ಕಾರ್ತಿಕೇಯನ ಪ್ರಭಾವಕ್ಕೊಳಗಾದುದರಲ್ಲಿ ಆಶ್ಚರ್ಯವೇನಿಲ್ಲ. ೧ನೇ ರಾಚಮಲ್ಲನ ತಂದೆಯಾದ ಸೋವಿದೇವನು ಸ್ವಾಮಿ ಕಾರ್ತಿಕೇಯದೇವಲಬ್ಧವರಪ್ರಸಾದನೆಂದು ಕರೆದುಕೊಂಡುದುದು ಇಲ್ಲಿ ಗಮನಾರ್ಹ-ವಾಗಿದೆ.[೪೪]

ರಂಜೇರುಸಿಂದರ ಅಟ್ಟಳೆನಾಡು ಸಹ ಕಾಳಾಮುಖ ಶೈವ ಧರ್ಮದ ಪ್ರಭಾವಕ್ಕೊಳಗಾಗಿದಿದ್ದಿತು. ಈ ಮನೆತನದ ಸಾಮಂತರಾದ ಹಜ್ಜರಸ, ಭೈರವ, ಹೆಮ್ಮಾಡಿ, ಬರ್ಮದೇವ ಮುಂತಾದವರ ಹೆಸರಿನಲ್ಲಿ ದೇವಾಲಯಗಳು ಕಟ್ಟಿಸಲ್ಪಟ್ಟಿದ್ದು, ಅವುಗಳ ನಿರ್ವಹಣೆಗೆ ಭೂಮಿದಾನ ಮಾಡಿದ ಉಲ್ಲೇಖಗಳು ಶಾಸನಗಳಲ್ಲಿ ಸಿಗುತ್ತವೆ. ಈ ದಾನಗಳನ್ನು ಸ್ವೀಕರಿಸಿದ ಸ್ಥಾಪನಾಚಾರ್ಯರಾದ ಚಂದ್ರಾಭರಣ ಮುನೀಂದ್ರ ಮುಂತಾಗಿ ಹೆಸರುಗಳು ಸಿಗುತ್ತವೆ. ಆದರೆ ದುರ್ದೈವದಿಂದ ದೊರೆತ ಎಲ್ಲ ಶಾಸನಗಳು ತ್ರುಟಿತವಾದವುಗಳು, ಸವೆದು ಹೋದವುಗಳಾಗಿದ್ದರಿಂದ ವಿವರಗಳನ್ನು ಕೊಡುವುದು ಸಾಧ್ಯವಿಲ್ಲದಾಗಿದೆ.

ಒಟ್ಟಿನಲ್ಲಿ ಸಿಂದ ಸಾಮಂತರು ತಮ್ಮ ತಮ್ಮ ಪ್ರದೇಶಗಳಲ್ಲಿ ಪ್ರಚಲಿತವಿದ್ದ ಧರ್ಮಗಳನ್ನೇ ಪ್ರೋತ್ಸಾಹಿಸಿ ಬೆಳೆಸಿದರು. ಅಲ್ಲಲ್ಲಿಗೆ ದೇವಾಲಯಗಳನ್ನು ಕಟ್ಟಿಸಿ ಅವುಗಳ ಅಭಿವೃದ್ಧಿಯ ಜೊತೆಗೆ ಧಾರ್ಮಿಕ ಕಾರ್ಯಕ್ರಮಗಳಿಗೆ, ಶೈಕ್ಷಣಿಕ ಕಾರ್ಯಕ್ರಮಗಳಿಗೆ ಪೂರಕವಾಗುವಂತೆ ವಿದ್ವಾಂಸ ಯತಿಯರನ್ನು ನೇಮಿಸಿ ಪರಂಪರೆ ಮುಂದುವರೆಯುವಂತೆ ನೋಡಿಕೊಂಡರು.

## ಸಾಹಿತ್ಯ

೧೧-೧೨ ಶತಮಾನವು ಸಿಂದ ಸಾಮಂತರು ಆಳಿದ ಕಾಲ. ಕರ್ನಾಟಕದಲ್ಲಿ ಸಾಹಿತ್ಯಕ್ಕೆ ಸುಗ್ಗಿಯ ಕಾಲ. ಸಾಹಿತ್ಯದ ಸಕಲ ಪ್ರಕಾರಗಳ ವಿವಿಧ ಬಗೆಯ ಕಾವ್ಯಗಳು, ಶಾಸ್ತ್ರಗ್ರಂಥಗಳು ಈ ಕಾಲದಲ್ಲಿ ರಚಿತವಾದವು. ಚಾವುಂಡರಾಯ, ಶಾಂತಿನಾಥ, ನಾಗಚಂದ್ರ, ನಯಸೇನ, ರಾಘವಾಂಕ, ಕೆರೆಯ ಪದ್ಮರಸ, ನೇಮಿಚಂದ್ರ, ರುದ್ರಭಟ್ಟ, ಜನ್ನ, ಆಂಡಯ್ಯ, ಕೇಶಿರಾಜ ಇತ್ಯಾದಿ ಹೆಸರಾಂತ ಕವಿಗಳು, ಶಾಸ್ತ್ರಜ್ಞರು ಈ ಕಾಲದಲ್ಲಿ ಆಗಿ ಹೋದರು. ಇವರೆಲ್ಲರೂ ಸ್ಥೂಲವಾಗಿ ಸಿಂದರ ಕಾಲಕ್ಕೆ ಸೇರಿದ್ದರೂ ಅವರೆಲ್ಲರೂ ಈ ಪ್ರಬಂಧದ ವ್ಯಾಪ್ತಿಗೆ ಹೊರತಾದವರು ಎಂದು

ಹೇಳಬಹುದು. ಸಿಂದ ಸಾಮಂತರ ಪ್ರದೇಶಗಳಿಗೆ ಅನ್ವಯಿಸುವಂತೆ ಆದ ಸಾಹಿತ್ಯದ ಬೆಳವಣಿಗೆಯನ್ನು ಮಾತ್ರ ಇಲ್ಲಿ ಗುರುತಿಸಲು ಯತ್ನಿಸಿದೆ.

ಒಂದು ವಿಷಯವನ್ನು ಇಲ್ಲಿ ಗಮನಿಸಲೇಬೇಕು. ಕನ್ನಡ ಸಾಹಿತ್ಯ ಲೋಕಕ್ಕೆ ಅಪೂರ್ವವಾದ ಮತ್ತು ಶಾಶ್ವತವಾದ ಸಾಹಿತ್ಯ ಪ್ರಕಾರಗಳ ಕೊಡುಗೆ ಎಂದರೆ ವಚನ ಸಾಹಿತ್ಯ ಹಾಗೂ ರಗಳೆಗಳು. ಕರ್ನಾಟಕದ ಕ್ಷಿತಿಜದಲ್ಲಿ ಇದೇ ಕಾಲಕ್ಕೆ ಬಸವೇಶ್ವರರ ಉದಯದಿಂದ ಎಲ್ಲ ಕ್ಷೇತ್ರಗಳಲ್ಲಿ ಕ್ರಾಂತಿ ನಡೆಯಿತು. ಇವುಗಳು ಸಮಕಾಲೀನ ಸಮಾಜದ ಮೇಲೆ ಗಾಢವಾದ ಪರಿಣಾಮ ಬೀರಿದವು. ವೀರಶೈವ ಧರ್ಮ ಬಸವಣ್ಣನವರಿಗಿಂತ ಪೂರ್ವದಲ್ಲಿಯೇ ಇದ್ದಿತೆಂದು ಪ್ರತಿಪಾದಿಸಿದರೂ, ಅದಕ್ಕೊಂದು ನಿಶ್ಚಿತ ನೆಲೆ, ಸ್ವರೂಪ, ಗರಿಮೆಗಳನ್ನು ಕೊಟ್ಟವರು ಬಸವಣ್ಣನವರು ಇದರ ಜೊತೆಗೆ ಸಾಮಾಜಿಕ ಬದಲಾವಣೆಯ ಹರಿಕಾರರೂ ಕೂಡ ಅವರೇ. ಕಂದಾಚಾರಗಳ ನಿಷೇಧ, ಜಾತಿ ಪದ್ಧತಿಗಳ ತಿರಸ್ಕಾರ, ಸ್ತ್ರೀ ಸಮಾನತೆ ಪ್ರತಿಪಾದನೆ ಇವೆಲ್ಲ ಪ್ರಚಲಿತ ಸಮಾಜದಲ್ಲಿ ಕ್ರಾಂತಿಯನ್ನು ಉಂಟು ಮಾಡುವುದರ ಜೊತೆಗೆ ಅಗಾಧ ಬದಲಾವಣೆಯನ್ನು ತಂದವು. ಸಾಹಿತ್ಯ ಕ್ಷೇತ್ರಕ್ಕೆ ವಚನ ಸಾಹಿತ್ಯವೆಂಬ ಪ್ರಕಾರವೇ ಸೇರ್ಪಡೆಗೊಂಡಿತು. ಬಸವಣ್ಣನವರಿಗಿಂತ ಮೊದಲು ಕೆಲವು ವಚನಕಾರರು ವಚನಗಳನ್ನು ರಚಿಸಿದ್ದರೂ ಎಂದು ಗ್ರಹಿಸಬಹುದಾದರೂ ಬಸವಣ್ಣನವರು ಮಾತ್ರ ವಚನ ಸಾಹಿತ್ಯಕ್ಕೆ ಒಂದು ಮೂರ್ತ ಸ್ವರೂಪ ಕೊಟ್ಟರು. ಬಹುಸಂಖ್ಯೆ ವಚನಗಳನ್ನು ಸರಳ, ಸುಗಮ ಭಾಷೆಯಲ್ಲಿ ರಚಿಸಿ ಜಟಿಲವಾದ ಆಧ್ಯಾತ್ಮಿಕ ತತ್ವಗಳನ್ನು ಸಾಮಾನ್ಯ ಜನರಿಗೆ ತಿಳಿಯುವಂತೆ ಹೇಳಿದ ಹೆಗ್ಗಳಿಕೆ ಅವರದು. ಬಹುಶಃ ಅನ್ಯ ಭಾಷೆಗಳಲ್ಲಿ ಇಲ್ಲದ ಈ ಸಾಹಿತ್ಯದ ಪ್ರಕಾರವು ಕನ್ನಡಸಾಹಿತ್ಯಕ್ಷೇತ್ರವನ್ನು ಶ್ರೀಮಂತವಾಗಿಸಿದೆ ಎಂದರೆ ಅತಿಶಯೋಕ್ತಿ- ಯಾಗದು. ಸಮಕಾಲೀನ ಸಾಹಿತ್ಯದ ಮೇಲೆ, ಸಮಕಾಲೀನ ಜನಜೀವನದ ಮೇಲೆ ಈ ಸಾಹಿತ್ಯ ಬೀರಿದ ಪ್ರಭಾವ ಅಷ್ಟಿಷ್ಟಲ್ಲ. ಕುರುಗೋಡು ಸಿಂದರ ೧ ಹಾಗೂ ೨ ನೇ ರಾಚಮಲ್ಲರ ಉದಾಹರಣೆಯೇ ಸಾಕು ಇದನ್ನು ಖಚಿತಪಡಿಸಲು.

ರಗಳೆ, ಕನ್ನಡ ಛಂದಸ್ಸಿಗೆ ಕನ್ನಡ ಸಾಹಿತ್ಯಕ್ಕೆ ಅಪೂರ್ವವಾದ ಕೊಡುಗೆ. ರಗಳೆಯ ಸ್ವರೂಪ ಛಂದೋ ಪ್ರಕಾರ, ಪ್ರಾಚೀನತೆ ಏನೇ ಇರಲಿ ಈ ಸಾಹಿತ್ಯ ಪ್ರಕಾರಕ್ಕೆ ಒಂದು ಭದ್ರವಾದ ನೆಲೆಗಟ್ಟನ್ನು ಒದಗಿಸಿದವನು ಹರಿಹರ ಕವಿ. ತಾಂತ್ರಿಕ ಅಥವಾ ತಾತ್ವಿಕ ಪ್ರಬೇಧಗಳು ಏನೇ ಇರಲಿ ರಗಳೆಯ ಹಿರಿಮೆ ಎಂದರೆ ಛಂದಸ್ಸಿನ ಸಾಂಪ್ರದಾಯಿಕ ಬಿಗಿ ಕಟ್ಟು ಪಾಡುಗಳಿಂದ ಹೊರಬಂದು ಕನ್ನಡ ಗದ್ಯವನ್ನೇ ಲಯಬದ್ಧವಾಗಿ, ಸುಲಲಿತವಾಗಿ ಸಾದರಪಡಿಸಿದ್ದು. ಹರಿಹರನಿಗಿಂತ ಹಿಂದಿನ ಕವಿಗಳು ಈ ಸಾಹಿತ್ಯದ ಪ್ರಕಾರವನ್ನು ಬಳಸಿಕೊಂಡಿದ್ದಾದರೂ ರಗಳೆಯನ್ನು ಕಾವ್ಯಗಳ ರಚನೆಗೆ

ಬಳಸಿಕೊಳ್ಳಬಹುದೆಂಬುದನ್ನು ತೋರಿಸಿಕೊಟ್ಟವನು ಹರಿಹರ "ಕಾವ್ಯ ರಚನೆಗೆ ರಗಳೆಯನ್ನು ಪ್ರಧಾನವಾದ ಛಂದಸ್ಸಿಗೆ ಪರಿಗ್ರಹಿಸಿ ಒಂದು ನೂತನ ಕಾವ್ಯ ಮಾರ್ಗದ ಪ್ರಸ್ಥಾಪಕನಾಗಿ ಗಣ್ಯನಾಗಿದ್ದಾನೆ". ಎಂಬ ಟಿ.ವಿ. ವೆಂಕಟಾಚಲಶಾಸ್ತ್ರಿಯವರ ಮಾತು ಯಥಾರ್ಥವಾಗಿದೆ.[೪೫] ಈ ಸಾಹಿತ್ಯದ ಪ್ರಕಾರದ ವಿವರಣೆಗಳನ್ನು ಇವರ ಗ್ರಂಥದಲ್ಲಿ ನೋಡಬಹುದು.

ಶಾಸನಗಳು ಎಂದರೆ, ಸಾಮಾನ್ಯವಾಗಿ ನಡೆದ ಘಟನೆಗಳನ್ನು ನಿರೂಪಿಸುವ ದಾಖಲೆಗಳು. ತಮ್ಮ ರಾಜಕೀಯ, ಸಾಮಾಜಿಕ ಕಳಕಳಿಗಳನ್ನು ಬಿಂಬಿಸಿ ಆ ಬಗ್ಗೆ ಇದ್ದ ತಮ್ಮ ವಿಚಾರಗಳನ್ನು, ಕೈಕೊಂಡ ಕ್ರಮಗಳನ್ನು ವಿವರಿಸುವುದಕ್ಕಾಗಿ ಕ್ರಿ.ಪೂ. ೩ನೇ ಶತಮಾನದಾದಿಯಾಗಿ ದೇಶದುದ್ದಗಲಕ್ಕೂ ವಿವಿಧ ರಾಜಮನೆತನದವರು ಶತಸಹಸ್ರ ಸಂಖ್ಯೆಯಲ್ಲಿ ಶಾಸನಗಳನ್ನು ಸೃಷ್ಟಿಸಿದರು. ಕಾಲ ಕಾಲಕ್ಕೆ ಶಾಸನಗಳ ಸ್ವರೂಪ, ಅವುಗಳಲ್ಲಿ ವಿಷಯಗಳು ಬದಲಾಗುತ್ತ ಹೋದರೂ ಉದ್ದೇಶ ಮಾತ್ರ ಒಂದೇ ಆಗಿದ್ದಿತು. ಕೆಲವು ಘಟನೆಗಳನ್ನು (ಯುದ್ಧ, ವಿಜಯ, ದಾನದತ್ತಿಗಳು, ದೇವಾಲಯ ನಿರ್ಮಾಣ ಇತ್ಯಾದಿ) ನಿರೂಪಿಸುವುದೇ ಶಾಸನಗಳ ಮೂಲ ಉದ್ದೇಶವಾಗಿದ್ದರೂ ಕೆಲವು ಸಲ ಶಾಸನಗಳ ಲೇಖಕರು ತಮ್ಮ ಪರಿಮಿತಿಗೊಳಪಟ್ಟ ಇಂತಹ ನಿರೂಪಣೆಗಳಿಗೆ ಸಾಹಿತ್ಯದ ಮೆರಗು ಕೊಟ್ಟಿರುತ್ತಾರೆ. ಆಳರಸರ ಸಾಧನೆಗಳ ವರ್ಣನೆ, ಅವರ ರಾಣಿಯರ ಸೌಂದರ್ಯ, ಸಾಧನೆಗಳ ಹೆಗ್ಗಳಿಕೆ, ಊರುಗಳ, ದೇವಾಲಯಗಳ ವರ್ಣನೆ, ಅಧಿಕಾರಿಗಳ ಧೈರ್ಯ, ಶೌರ್ಯ ಇತ್ಯಾದಿ ವಿವರಣೆಯ ಅಸಂಖ್ಯ ಶಾಸನಗಳು ರಚಿಸಲ್ಪಟ್ಟಿವೆ. ಹಲವಾರು ವರ್ಣನೆಗಳನ್ನೊಳಗೊಂಡ ಕಾವ್ಯಮಯ ರಚನೆಗಳೂ ಶಾಸನಗಳಲ್ಲಿ ಬಂದಿವೆ. ಎಷ್ಟೋ ಅಜ್ಞಾತ ಕವಿಗಳು ಶಾಸನಗಳ ಮೂಲಕವೇ ಬೆಳಕಿಗೆ ಬಂದ ಉದಾಹರಣೆಗಳೂ ಇವೆ. ಬಹಳಷ್ಟು ಸಲ ಎಷ್ಟೋ ರಚನೆಗಳು ಕಾವ್ಯಮಯವೆನಿಸಿದ್ದರೂ ಅದರ ಕರ್ತೃಗಳು ಮಾತ್ರ ಅಜ್ಞಾತರಾಗಿ ಉಳಿದಿದ್ದಾರೆ. ಶಾಸನಗಳನ್ನು ಸಾಹಿತ್ಯದ ದೃಷ್ಟಿಯಿಂದ ಅಭ್ಯಾಸ ಮಾಡುವಷ್ಟರ ಮಟ್ಟಿಗೆ ಈ ಸಾಹಿತ್ಯ ಬೆಳೆದಿದೆ. ಕರ್ನಾಟಕದಲ್ಲಿ ಈ ತರಹದ ರಚನೆಗಳು ಎದ್ದು ಕಾಣುವಂತೆ ರಚಿತವಾದುದು ಕಲ್ಯಾಣ ಚಾಲುಕ್ಯರ ಅಳಿಕೆಯ ಆರಂಭದ ಕಾಲದಿಂದ ಎಂದು ಹೇಳಬಹುದು. ಅದಕ್ಕಿಂತ ಮುಂಚೆ ಶಾಸನಗಳಲ್ಲಿ ಸಂಸ್ಕೃತವನ್ನೇ ಪ್ರಧಾನವಾಗಿ ಬಳಸಿದ ಶಾಸನಗಳು ರಚಿತವಾದವು. ಕನ್ನಡ ಭಾಷೆ ರಚನೆಯಲ್ಲಿ ಕಪ್ಪೆಅರಭಟ್ಟನ ಶಾಸನ ಮಹತ್ವದ್ದಾಗಿದೆ.[೪೬] ಇಂಥ ಕೆಲವು ವಿರಳ ಉದಾಹರಣೆಗಳು ಆ ಕಾಲದಲ್ಲಿ ಸಿಕ್ಕರೂ ಶಾಸನಗಳು ಸಾಹಿತ್ಯಕೃತಿಗಳಂತೆ ರಚಿತವಾದವು, ಆರಂಭವಾದುದು ಕಲ್ಯಾಣ ಚಾಲುಕ್ಯರ ಕಾಲದಿಂದಲೇ ಎಂದು ಹೇಳಬಹುದು. ಕನ್ನಡವನ್ನು ಕಡ್ಡಾಯವೆಂಬಂತೆ ಶಾಸನ ರಚನೆಯಲ್ಲಿ ಬಳಸಲು ಆರಂಭಗೊಂಡಿದ್ದು ಈ

ಚಾಲುಕ್ಯರ ಕಾಲದಲ್ಲಿಯೇ ಈ ಪ್ರಕ್ರಿಯೆ ಹೊಯ್ಸಳರ, ಸೇವುಣರ ಕಾಲದಲ್ಲಿ ಮುಂದುವರೆದು, ಆಯಾ ಕಾಲಘಟ್ಟಗಳಲ್ಲಿ ಉತ್ಕೃಷ್ಟವಾದ ಸಾಹಿತ್ಯಿಕ ಗುಣಗಳುಳ್ಳ ಹಲವಾರು ಶಾಸನಗಳು ನಮಗೆ ಸಿಗುತ್ತವೆ. ಕನ್ನಡ ಸಾಹಿತ್ಯ ಚರಿತ್ರೆಗೆ ಹೊಸದಾಗಿ ಸೇರಲ್ಪಡುವ ಅನೇಕ ಕವಿಗಳು ನಮಗೆ ದೊರೆಯುತ್ತಾರೆ. ಜನ್ನನಂತಹ ನಿಷ್ಣಾತ ಕವಿಗಳು ಶಾಸನಗಳ ರಚನಕಾರಾಗಿದ್ದು, ಈ ಸಾಹಿತ್ಯ ಪ್ರಕಾರದ ಹೆಗ್ಗಳಿಕೆಗೆ ಎಂದು ಹೇಳಬಹುದು. ಈ ಹಿನ್ನಲೆಯಲ್ಲಿ ಸಿಂದ ಸಾಮಂತರಿಗೆ ಸಂಬಂಧಿಸಿದಂತೆ ನಿರ್ಮಿತ ಸಾಹಿತ್ಯದ ರಚನೆಗಳನ್ನು ಇಲ್ಲಿ ಪರಿಶೀಲಿಸಲಾಗಿದೆ.

ಒಂದು ದೃಷ್ಟಿಯಿಂದ ಸಿಂದ ಸಾಮಂತರ ಪ್ರದೇಶವಾದ ಬಾಗಡಗೆಯ-೭೦ಕ್ಕೆ ಸೇರಿದವರು ಬಸವಣ್ಣನವರ ಹುಟ್ಟೂರಾದ ಬಾಗೇವಾಡಿಯು ಈ ಪ್ರದೇಶಕ್ಕೆ ಸೇರಿದ್ದಾಗಿರಬಹುದಾಗಿದೆ. ಬಾಗಡಗೆಯು ಇಂದಿನ ಜಿಲ್ಲಾ ಸ್ಥಳವಾದ ಬಾಗಲಕೋಟೆ ಎಂದು ಹಿಂದೆಯೇ ನಿರ್ಧರಿಸಲ್ಪಟ್ಟಿದೆ. ಅವರ ಐಕ್ಯ ಸ್ಥಳವಾದ ಕೂಡಲಸಂಗಮವೂ ಕೂಡಾ ಬಾಗಲಕೋಟೆಗೆ ಸಮೀಪವಿದೆ. ಆದರೆ ಅವರು ಸಿಂದರಿಗೆ ನೇರವಾಗಿ ಸಂಬಂಧಿಸಿದಂತೆ ಯಾವ ಉಲ್ಲೇಖವೂ ಶಾಸನಗಳಲ್ಲಿಯಾಗಲೀ, ಸಾಹಿತ್ಯದಲ್ಲಾಗಲೀ ಸಿಗುವುದಿಲ್ಲ. ಬಸವಣ್ಣನವರು ಹುಟ್ಟಿದ್ದು (ಕ್ರಿ.ಶ. ೧೧೩೧) ಸಿಂದರ ಕಾಲದಲ್ಲಿಯೇ ಅವರು ಪ್ರಸಿದ್ಧಿಗೆ ಬಂದದ್ದು, ಸಿಂದರ ಆಳಿಕೆಯ ಮುಕ್ತಾಯದ ನಂತರ ಎನ್ನಬಹುದು ಬಸವಣ್ಣನವರೂ ಕಾರ್ಯವನ್ನು ಮತ್ತು ಅವರ ಕೊಡುಗೆಯಾದ ವಚನ ಸಾಹಿತ್ಯವನ್ನು ಕುರಿತು ಈಗಾಗಲೇ ವ್ಯಾಪಕ ಸಂಶೋಧನೆ ನಡೆದುದ್ದು ಅದರ ಫಲವು ಗ್ರಂಥಗಳ ಮೂಲಕ, ಲೇಖನಗಳ ಮೂಲಕ ಹೇರಳವಾಗಿ ಲಭ್ಯವಿದ್ದುದರಿಂದ ಅವುಗಳನ್ನು ಪುನಃ ಇಲ್ಲಿ ನಿರೂಪಿಸುವುದು ಅಗತ್ಯವಿಲ್ಲವೆಂದು ತಿಳಿದಿದ್ದೇವೆ.

ಕುರುಗೋಡು ಸಿಂದ ಮನೆತನದ ೧ನೇ ರಾಚಮಲ್ಲ ಮತ್ತು ಅವನ ಮೊಮ್ಮಗ ೨ನೇ ರಾಚಮಲ್ಲ ಇವರಿಬ್ಬರೂ ಶಿವಶರಣರೆಂದು ಖ್ಯಾತರಾಗಿ ಕಾವ್ಯಗಳಲ್ಲಿ ಹೆಸರಿಸಲ್ಪಟ್ಟಿದ್ದಾರೆ. ಕ್ರಿ.ಶ. ೧೩ ನೇ ಶತಮಾನದ ಕುಮಾರ ಪದ್ಮರಸನು ತನ್ನ ಕೃತಿಯಾದ ಸಾನಂದಚರಿತ್ರೆಯಲ್ಲಿ, ೧೬ ನೇ ಶತಮಾನದ ಗುಬ್ಬಿ ಮಲ್ಲಣಾರ್ಯನು ತನ್ನ ವೀರಶೈವಾಮೃತ ಪುರಾಣದಲ್ಲಿ, ೧೭ನೇ ಶತಮಾನದ ಶಾಂತಲಿಂಗದೇಶಿಕನು ತನ್ನ ಭೈರವೇಶ್ವರಕಾವ್ಯದ ಕಥಾಮಣಿಸೂತ್ರರತ್ನಾಕರ ಎಂಬ ಗ್ರಂಥದಲ್ಲಿ ರಾಚಮಲ್ಲನ ಶಿವಭಕ್ತಿಯನ್ನು ಎತ್ತಿ ತೋರಿಸಿದ್ದಾರೆ. ಈ ವಿಷಯಕ್ಕೆ ಹಿರೇಮಠ ಚನ್ನಬಸವಯ್ಯನವರು ನಮ್ಮ ಗಮನ ಸೆಳೆದಿದ್ದಾರೆ.[೪೭]

ವಿವಿಧ ಸಿಂದ ಸಾಮಂತ ಮನೆತನಗಳ ಶಾಸನಗಳಲ್ಲಿ ಕೆಲವಾದರೂ ಉತ್ತಮ ಕಾವ್ಯಗುಣಗಳನ್ನು ಒಳಗೊಂಡಿವೆ. ಬಹಳಷ್ಟು ಶಾಸನಗಳು ಒಡೆದು, ಅಳಿಸಿ ಹೋದದ್ದರಿಂದ

ಅಗತ್ಯವಾದ ವಿವರಗಳು ನಷ್ಟವಾಗಿವೆ ಎಂಬುದೇ ವಿಷಾದದ ಸಂಗತಿ. ಸಿಕ್ಕ ಅಲ್ಪ ಸ್ವಲ್ಪ ಮಾಹಿತಿ ಆಧಾರದ ಮೇಲಿಂದ ಈ ಸಾಹಿತ್ಯದ ವಿಷಯಗಳನ್ನು ಕಲೆ ಹಾಕಲಾಗಿದೆ.

ಹೊನ್ನಾಳಿ ತಾಲೂಕಿನ ಕುರುವದಗದ್ದೆ ಶಾಸನವು, ಬೆಳಗುತ್ತಿ ಸಿಂದ ಮಲ್ಲಿದೇವನನ್ನು ಉಲ್ಲೇಖಿಸಿದೆ. ಹೊಯ್ಸಳ ಬಲ್ಲಾಳದೇವನ ಈ ಶಾಸನವು ವೃತ್ತ, ಕಂದ, ಪದ್ಯಗಳಲ್ಲಿ ರಚಿತವಾಗಿದೆ. ಸ್ರಗ್ಧರೆ ಎಂಬ ವೃತ್ತವು ನಮೂದಿಸಲ್ಪಟ್ಟಿದೆ. ಆ ವೃತ್ತದಲ್ಲಿ ಒಂದು ಪದ್ಯವೂ ಇದೆ.

ಇದಲ್ಲದೇ ಕಂದ ಮತ್ತು ಇತರ ವೃತ್ತಗಳಲ್ಲಿ ಪದ್ಯಗಳೂ ಇವೆ. ಉತ್ತಮವಾದ ಗದ್ಯ ಭಾಗವೂ ಇದೆ. ಆದರೆ ಇದನ್ನು ರಚಿಸಿದವನ ಹೆಸರಿನ ಉಲ್ಲೇಖ ಮಾತ್ರ ಇಲ್ಲ. ಮಾದರಿಗಾಗಿ ಈ ಉದಾಹರಣೆಯನ್ನು ನೋಡಬಹುದು.[೪೮]

ಸ್ರಗ್ಧರೆ ಚೋಳೋರ್ವ್ವೀಶಾಂಧಕಾರದ್ಯುಮಣಿಪ್ರುಥುಕಳಿಂಗಾಹಿಪಕ್ಷೀಶ್ವರಂ ನೇ
ಪಾಳಕ್ಷ್ಮಾಪಾಳ್‌ಶೈಳಪ್ರಬಳಕುಳಿಶನಂಧ್ರಾವನೀಪಾಳಮತ್ತ
ವ್ಯಾಳೇಭೋಚ್ಚಂಡಕಂಠೀರವನತುಳಬಳಂ ಮಾಳವಾರಂಣ್ಯದಾವಂ
ಚಾಳುಕ್ಯಾಂಭೋಜಚಂದ್ರಪ್ರತಿಮನೆನೆನಿಸಿದಂ ವೀರಬಲ್ಲಾಳದೇವಂ

ಕುರುವದ ರಾಮನಾಥ ದೇವಾಲಯದ ಸ್ಥಾನಾಚಾರ್ಯನಾದ ಪದ್ಮಶಿವಾಂಕನ ವರ್ಣನೆ ಇಂತಿದೆ.[೪೯]

॥ ಅಱುವಿನೊಳಾಗಮಾರ್ತ್ಥಪರಿಭಾವನೆಯೊಳ್‌ನಿಜಮಂತ್ರಶಕ್ತಿಯೊ
ಳನವಱತಪಃಪ್ರಭಾವಗುಣದುನ್ನತಿಯೊಳ್ ಸಕಲಾರ್ತ್ಥಶಾಸ್ತ್ರದೊಳ್
ಕುರುವರದ ರಾಮನಾಥಪದಪಂಕಜಬ್ರಿಂಗನೊಳೆಯ್ದೆ ಬಲ್ಲನೊಳ್
ಮೆಱದಿದರಪ್ಪರ್ರ್ವ್ವಿನುತಪದ್ಮಶಿವಾಂಕನೊಳೀ ಧರಿತ್ರಿಯೊಳ್ ॥

ಸಾಮಂತ ಬೋವಯ್ಯನ ಶೌರ್ಯವು ಈ ರೀತಿಯಾಗಿ ವರ್ಣಿತವಾಗಿದೆ.[೫೦]

॥ ಅದಟಿಂದಾನ್ತ ಪದಾತಿಯೆಂಬ ಮಲೆಯೊಳ್‌ಕ್ರೂರಾರಿಯಂ ಬದ್ದತೋ
ನ್ಮದದನ್ತಿಬ್ರಜಮಂ ನಿಜೋನ್ನತಚಲತ್ತೀಬ್ರಾಸಿಯೆಂಬಂಕುಸಕ್ಕೆ
ದಿಟಂ ತಾಂ ಬಸಮಾಗಿಸಿಂತು ಜಯಮೆಂ ಬಾಲಾನದೊಳ ಕಟ್ಟುವಂ
ಪದಳಂ ರಾತಾನೆನಲಾಂಪರ್ಸ್ವಮರದೊಳ್ ಸಾಮನ್ತ ಭೂವಾಂಕನೋಳ್ ॥

ಬೆಳಗುತ್ತಿಯದೆ ಆದ ಒಂದು ಸಿಂದ ಶಾಸನವು ಗದ್ಯ, ಪದ್ಯಾತ್ಮಕವಾಗಿ ರಚಿತವಾಗಿದ್ದು ಅದನ್ನು ರಚಿಸಿದವನ ಹೆಸರೂ ಇದೆ. ಆದರೆ ಶಾಸನವು ಬಹಳಷ್ಟು ತ್ರುಟಿತವಾಗಿರುವುದರಿಂದ ಅದು ಸ್ಪಷ್ಟವಿಲ್ಲ. 'ವಿರಚಿಸಿದವನೂ ಪೆಲಮ್ಮ' ಎಂದು ಮಾತ್ರ ಕಾಣುತ್ತದೆ.[೫೧] ಕೇವಲ ಇದರ ಆಧಾರದ ಮೇಲಿಂದ ಕವಿ ಹೆಸರನ್ನು ಕಂಡು ಹಿಡಿಯುವುದು ಕಠಿಣ.

೨ನೇ ಈಶ್ವರದೇವನ, ಹಳೆನಿಡುನೇಗಿಲು ಶಾಸನವು[೫೨] ೮೧ ಸಾಲುಗಳಷ್ಟು ಸುದೀರ್ಘವಾಗಿದ್ದು ವೈಶಿಷ್ಟ್ಯದಿಂದ ಕೂಡಿದೆ. ಇದರ ವೈಶಿಷ್ಟ್ಯವೆಂದರೆ ಅಜ್ಞಾತ ಶಾಸನದ ಕವಿಯೂ ಇಲ್ಲಿ ತನ್ನ ಸಂಸ್ಕೃತ ಜ್ಞಾನವನ್ನು ಮೆರೆದಿದ್ದಾನೆ. ಈಶ್ವರದೇವನನ್ನು ಕವಿಯು ಈ ರೀತಿಯಾಗಿ ಬಣ್ಣಿಸಿದ್ದಾನೆ.

॥ ಆದಿಬಾಹುಭುಜಂಗಚನ್ದನತರುಃ ಕರ್ಣ್ಣಾದಿನೀಚುಂಬನ
ಪ್ರೋದ್ಭೂ ತೈಕಸುಧಾರಸೋಮಳಯಜಸ್ತ್ರೀತರ್ಜ್ಜನಿರ್ಜ್ಜಿತಃ
ಪ್ರೌಢಾದ್ರಿಸ್ತನಮಣ್ಡಳಸ್ಯ ಚ ಪತಿಃ ಕಾಯಾನ್ವಿತೋ ಮನ್ಮಥಃ
ಶ್ರೀಮಾನೀಶ್ವರಭೂಪತಿಃ ಕ್ಷಿತಿಮಿಮಾಂ ನಿಷ್ಕಂಟಕಂ ತ್ರಾಯತೇ ॥

ಈಶ್ವರದೇವನ ದಂಡನಾಯಕನಾದ ಮಹದೇವಣ್ಣನ ವರ್ಣನೆಯನ್ನು ಈ ರೀತಿ ಮಾಡಿದ್ದಾನೆ.[೫೩]

॥ ನುತವಿತರಣಯುಕ್ತಃ ಶತ್ರುಸಂಹಾರಶಕ್ತಃ
ಶಿವಪದಯುಗಭಕ್ತಃಕೀರ್ತಿ ಕಾನ್ತಾಪ್ರಸಕ್ತಃ
ವಿದಿತಸಕಳಭಾವೋ ಧೈರ್ಯಯುಕ್ತಸ್ವಭಾವಃ
ಜಯತಿ ಮಹದೇವಃ ಶ್ರೀಶ್ವರೋರ್ವ್ವೀಶಸೇವಃ ॥

ಹಿರೇಕೆರೂರು ತಾಲೂಕಿನ ನಿಡುನೆಗಿಲಿನಲ್ಲಿಯ ಶಾಸನವು ಗದ್ಯಪದ್ಯಗಳಿಂದ ಕೂಡಿದೆ ಬನವಾಸಿ ನಾಡಿನಲ್ಲಿ ಎಡವಟ್ಟೆ ಕಂಪಣದಲ್ಲಿದ್ದ ನಿಡುನೇಗಿಲಿನ ವರ್ಣನೆ ಆ ಊರಿನ ಶಾಸನದಲ್ಲಿದೆ. [೫೪]

॥ ಬನವಾಸಿನಾಡೊಳೊಪ್ಪುವೆಡವಟ್ಟದ ಕಂಪಣದೊಳು ವಿಶಾಳನಂ
ದನವನರಾಜಿಯಿಂ ವಿಮಳ ಪೂರ್ಣತಟಾಕದಿನುದಶಾಳಿಯಿಂ
ಘನತರದೇವತಾಭವನದಿಂ ವಿಬುಧಾಳಿಯಿನೆನ್ತು ನೋರ್ಪಡಂ
ಮನಸಿನಿರ್ದರ್ಕೆದಾಣವೆನಿಸಿತ್ತೆಸದೀ ನಿಡುನೇಗಿಲುರ್ವ್ವಿಯೊಳು ॥

ಚಿಕ್ಕ ಚಿಕ್ಕ ಪದಮಂಜಗಳು, ಪ್ರಾಸ, ಅನುಪ್ರಾಸಗಳು ಇವುಗಳಿಂದ ರಚನೆಯು ಹೃದ್ಯವೆನಿಸುತ್ತದೆ.

ಈ ಮಹದೇವನ ಕುಟುಂಬದ ಸದಸ್ಯರ ಇವರು ಎಂದು ಶಾಸನದಲ್ಲಿ ಹೀಗೆ ವರ್ಣಿಸಿದೆ.[೫೫]

॥ ಆರಾಧ್ಯ ಶ್ಮಶಿಶೇಖರಃ ಪತಿರಯಂ ವಿಖ್ಯಾತವಾಗೀಶ್ವರ
(ಸ್ತಾ)ತೊ ನಾಗಚಮೂಪತಿರ್ಬುದನಿಧಿರ್ಮಾತಾಚ ನಂನಾಂಬಿಕಾ
ಭ್ರಾತಾ ಸದ್ಗುಣಿ ಮಾದಿರಾಜ ಸಚಿವೋ ಗೋತ್ರಂ ಚ ವಾಸಿಷ್ಠಕಂ
ಸ ಶ್ರೀಮನ್ಮಹದೇವ ಏಷ ಪ್ರತನಾನಾಥೋ ಭುವಿವಿಭ್ರಾಜತೇ ॥

ಹೊನ್ನಾಳಿ ತಾಲೂಕಿನ ಚಿಕ್ಕಯರೆಹಳ್ಳಿಯಲ್ಲಿಯ ಸಿಂದ ಈಶ್ವರದೇವನ ಶಾಸನವು ಗದ್ಯಪದ್ಯಗಳೊಂದಿಗೆ ಸಾಹಿತ್ಯಿಕ ಗುಣದಿಂದ ಕೂಡಿದೆ. ಸುದೈವದಿಂದ ಇದನ್ನು ರಚಿಸಿದ ಕವಿಯ ಹೆಸರು ಶಾಸನದಲ್ಲಿದೆ. ಕವಿ ತನ್ನ ಹೆಸರನ್ನು ಹೀಗೆ ಹೇಳಿಕೊಂಡಿದ್ದಾನೆ.[೫೬]

॥ ವಿರಚಿಸಿದನೊಪ್ಪೆ ಲಕ್ಷ್ಮೀ
ಧರತನಯಂ ರಾಮದೇವನೀ ಶಾಸನಮಂ
ಬರೆದಂ ಪದುಮರಸ ಕಂ
ಡರಸಿದನಿದನತ್ತಿಯೋಜನೂರ್ಜಿತವಾಗಲ್ ॥

ಕವಿ ಹೇಳಿಕೊಂಡಂತೆ ಅವನ ಹೆಸರು ರಾಮದೇವ. ತಂದೆ ಲಕ್ಷ್ಮೀಧರ. ಯಾವ ಊರಿನವ ಎಂಬುದು ತಿಳಿಯುವುದಿಲ್ಲ. ಬಹುಶಃ ಶಾಸನವು ದೊರೆತ ಸ್ಥಳವೇ ಆತನ ವಾಸಸ್ಥಾನವಾಗಿರಬೇಕು. ಈತ ಇನ್ನಾವ ಕೃತಿಯನ್ನು ರಚಿಸಿದ್ದಾನೋ ಎಂಬುದು ತಿಳಿಯದು. ಈ ಶಾಸನವನ್ನು ಕಲ್ಲಿನ ಮೇಲೆ (ಬಣ್ಣದಿಂದ) ಬರೆದವನು ಪದುಮರಸ ಕಂಡರಸಿದವನು ಅತ್ತಿಯೋಜ ಶಾಸನವು ವೃತ್ತ ಕಂದಗಳಿಂದ ಕೂಡಿದ್ದು, ನಡುವೆ ಕೆಲವು ಸಾಲುಗಳನ್ನು ಪೂರ್ಣವಾಗಿ ಅಳಿಸಿ ಹೋಗಿದೆ.

ಬನವಾಸಿ ನಾಡಿನ ಬಳ್ಳವೆ ಕಂಪಣದ ಹತ್ತಿವೂರಿನ ವರ್ಣನೆಯೊಂದು ಶಾಸನದಲ್ಲಿ ಹೀಗೆ ಬಂದಿದೆ.[೫೭]

॥ ಬನವಾಸಿನಾಡ ಬಳ್ಳವೆಯ ಕಂಪಣದೂರ್ಜ್ಜಿತಲಕ್ಷ್ಮಿಯೆಂಬಿನಂ
ಜನದನುರಾಗದಿಂದೆಸೆದು ತೋರ್ಪುದಗುರ್ವ್ವಿನ ಹತ್ತಿವೂರು ನಂ
ದನವನರಾಜಿಯಿಂ ಬಳೆದುಳಂಬದೆ ತೋಱುವ ಗಂಧಶಾಳಿಯಂ
ದನುಪ ರಮ್ಯೆರ್ಮ್ಮ್ಯತಥಿಯಿಂದತಿ ಸೇವ್ಯಮದೆನ್ತು ನೋರ್ಪ್ಪಡಂ ॥

ಹತ್ತಿವೂರಿನ ಪ್ರಭು ದಾಸಗಾವುಂಡನ ಹಿರಿಮೆಯನ್ನು ಕವಿ ಶಾಸನದಲ್ಲಿ ಹೀಗೆ ವರ್ಣಿಸಿದ್ದಾನೆ.

॥ ಪಿರಿಯಂ ಸೇವ್ಯಗುಣಗಳಿಂ ವಿಭವದಿಂದೌದಾರ್ಯ್ಯದಿಂ ಧೈರ್ಯದಿಂ
ಪಿರಿಯಂ ಸಂದ ವಿವೇಕದಿಂ ವಿನಯದಿಂ ದಾಕ್ಷಿಣ್ಯದಿಂ ಪುಣ್ಯದಿಂ
ಪಿರಿಯಂ ಶಂಕರಪಾದಪಂಕಜನವುತ್ಸದ್ಭಕ್ತಿಯಿಂ ಯುಕ್ತಿಯಿಂ
ಪಿರಿಯಂ ಬೈಸರ ದಾಸಗೌಡನೆಸೆದಂ ವಿಶ್ವಂಭರಾಭಾಗದೊಳ್ ॥

॥ ಗುಣದ ಬಣಂಬೆ ಪೆಂಪಿನ ತವರ್ಮ್ಮನೆ ಸತ್ಯದ ಬಿತ್ತು ಸರ್ವ್ವಲ
ಕ್ಷಣದ ನಿಧಾನವಣ್ಮೆ ನೆಱೆವಟ್ಟ ಭಿಮಾನದ ರಾಶಿ ಧರ್ಮ್ಮದೊ
ಳ್ಗಗಿಣಿ ನಯದಾಕರಂ ವಿಭವದೂರ್ಜ್ಜಿತ ಭೂಮಿಯ ನೆಲೇಂ ಪ್ರಭುತ್ವದ
ಗ್ರಣಿ ಸೆಲೆ ಹತ್ತಿವೂರೆಸೆವ ದಾಸಗವುಡನೇ ಧನ್ಯನುರ್ವ್ವಿಯೋಳ್ ॥

ಕೇತಗೌಡ ಎಂಬ ಅಧಿಕಾರಿಯ ಹೆಂಡತಿ ಕಾಳವೆಗೌಂಡಿ ಸಕಲ ಸದ್ಗುಣಗಳ ಖಣಿ ಎಂದು ಕವಿಯ ಕಲ್ಪನೆ.[೫೮]

॥ ಪತಿಹಿತೆ ತಾನೆ ಸಚ್ಚರಿತೆ ತಾನೆ ಗುಣಾನ್ವಿತೆ ತಾನೆ ಸತ್ಕಳೋ
ರ್ಜಿತಮತಿ ತಾನೆ ಸೇವ್ಯವಿಭವೋನ್ನತಿ ತಾನೆ ವಿನೂತಸತ್ಯ ಸಂ
ಯುತೆಸಲೆ ತಾನೆ ನಲ್ವಿನುತ ಕೇತಗವುಂಡನ ಧರ್ಮಪತ್ನಿ ತಾ
ನತಿಶಯ ವೆಂಬಿನಂ ನೆಗಳ್ದಳುತ್ತಮೆ ಕಾಳವೆಗೌಂಡಿ ಧಾತ್ರಿಯೊಳ್ ॥

ಯಲಬುರ್ಗಿ ಸಿಂದ ಮನೆತನದ ಆಚುಗಿ ಅಥವಾ ಆಚರಸನು ಚಾಲುಕ್ಯ ವಿಕ್ರಮಾದಿತ್ಯನ ಆಜ್ಞೆಯಂತೆ ಎಲ್ಲ ವೈರಿಗಳನ್ನು ಹೊಡೆದಟ್ಟಿದನು ಇದನ್ನು ಕುರಿತು ನರೇಗಲ್ಲಿನ ಶಾಸನ ಒಂದು ವರ್ಣಿಸುತ್ತದೆ.[೫೯]

॥ ಚಂಡಾಶುಪ್ರತಿಭಾಸಿ ಪೊಯ್ಸಳನನಾರ್ದ್ವೆರ್ವ್ವೆಟ್ಟಿದಂ ಗೋವೆಯಂ
ಕೊಂಡಂ ಲಕ್ಷನನಾಜಿಯೊಳ್ ತವಿಸಿದಂ ವಿಕ್ರಾಂತದಿಂದೆಯ್ದಿ ಬೆಂ
ಕೊಂಡಂ ಪಾಂಡ್ಯನನಾಗವಂ ಮಲಪರಂ ತೊಳ್ದಟ್ಟಿದಂ ಕೊಂಕಣಂ
ಗೊಂಡಂ ವಿಕ್ರಮಚಕ್ರವರ್ತಿ ಬೆಸೆಸಲ್ ಸಂಗ್ರಾಮಕಣ್ಠೀರರಂ ॥

ನರೆಗಲ್ ಅಂದರೆ ಇಂದಿನ ನರೇಗಲ್ಲ ಗ್ರಾಮವು ಶಾಸನದ ಕವಿಗೆ ಕಂಡದ್ದು ಹೀಗೆ. ಈ ಪ್ರದೇಶವನ್ನು ಹೀಗೆ ತನ್ನ ಪದ್ಯದಲ್ಲಿ ವರ್ಣಿಸಿದ್ದಾನೆ. (ಕಂದ ಪದ್ಯ)[೬೦]

॥ ಜಳನಿಧಿಪರಿವೃತವಸುದಾ
ತಳದೊಳ್ ಭರತೋರ್ವಿಗೆಸೆವ ಕುಂತಳದೇಶಂ
ತಿಳಕಮೆನಿಸಿರ್ದುದರೊಳ್
ಫಳಭರಿತಂ ನರೆಯಂಗಲ್ ಕರಂ ರಂಜಿಸುಗುಂ ॥

ಸಾಹಿತ್ಯಿಕ ದೃಷ್ಟಿಯಿಂದ ಕುರುಗೊಡು ಸಿಂದರ ಶಾಸನಗಳು ಹೆಚ್ಚು ಆಕರ್ಷಕವಾಗಿವೆ. ತಮ್ಮ ಇತಿಮಿತಿಯಲ್ಲಿಯೇ ತಕ್ಕಮಟ್ಟಿಗೆ ದೀರ್ಘವಾಗಿದ್ದು ಉತ್ತಮ ಕಾವ್ಯಗುಣಗಳಿಂದ ಕೂಡಿವೆ. ಇವುಗಳನ್ನು ರಚಿಸಿದವರ ಹೆಸರುಗಳು ಇಲ್ಲದಿರುವುದು ಮಾತ್ರ ಸೋಜಿಗವಾಗಿದೆ. ಕುರುಗೋಡಿನ ಕಲ್ಮೇಶ್ವರ ದೇವಸ್ಥಾನದಲ್ಲಿಯ ಶಾಸನವು ಕಳಚುರಿ ರಾಯಮುರಾರಿ ಸೋವಿದೇವನ ಆಳಿಕೆಗೆ ಸೇರಿದೆ. ೨ನೇ ರಾಚಮಲ್ಲ ಈ ಶಾಸನವು ಸುದೀರ್ಘವಾಗಿದ್ದು ೮೩ ಸಾಲುಗಳನ್ನೊಳಗೊಂಡಿದೆ. ಕುರುಗೋಡಿನ ಮುಮ್ಮರಿದಂಡಗಳಲ್ಲಿ ಒಬ್ಬನಾದ ಕಲ್ಲಿಸೆಟ್ಟಿಯ ಕಲಿದೇವರ ದೇವಸ್ಥಾನವನ್ನು ಕಟ್ಟಿಸಿದಾಗ ಅದಕ್ಕೆ ರಾಚಮಲ್ಲನು ಭೂದಾನ, ದ್ರವ್ಯದಾನ ಮಾಡಿದ ವಿಷಯವು ಈ ಶಾಸನದಲ್ಲಿ ಉಲ್ಲೇಖಿತವಾಗಿದೆ. ಬಸವೇಶ್ವರ ದೇವಾಲಯದಲ್ಲಿಯ ಶಾಸನವು ಸಹ ೭೧ ಸಾಲುಗಳನ್ನೊಳಗೊಂಡಿದ್ದು, ಕುರುಗೋಡಿನ ಮುಮ್ಮರಿದಂಡಗಳು ತ್ರಿಕೂಟದೇವಸ್ಥಾನ ನಿರ್ಮಾಣ ಮಾಡಿ ಅದರಲ್ಲಿ ಗವರೇಶ್ವರ, ಮಲ್ಲಿಕಾರ್ಜುನ ಮತ್ತು ಮುದ್ದೇಶ್ವರ ದೇವತೆಗಳನ್ನು ಪ್ರತಿಷ್ಠಾಪಿಸಿ, ಭೂದಾನ ಮಾಡಿದ ವಿಷಯವು ಈ ಶಾಸನದಲ್ಲಿದೆ ಇಲ್ಲಿರುವ ಈ ಎರಡು ಶಾಸನಗಳಲ್ಲಿ ೧ನೇ ಶಾಸನದ ಕಾಲವು ಕ್ರಿ.ಶ. ೧೧೭೬ ಹಾಗೂ ೨ನೇ ಶಾಸನದ ಕಾಲ ಕ್ರಿ.ಶ. ೧೧೭೭ ಎರಡೂ ಶಾಸನಗಳ ವೈಶಿಷ್ಟ್ಯವೆಂದರೆ, ಇವೆರಡೂ ರಗಳೆ ಎಂಬ ಛಂದಸ್ಸನ್ನು ಬಳಸಿವೆ. ಇದು ಕೂಡ ಅಪೂರ್ವ ಎನ್ನಬಹುದು. ಎರಡೂ ಶಾಸನಗಳು ಕಂದ ಮತ್ತು ವೃತ್ತಗಳಿಂದ ಕೂಡಿದ್ದು

ಹೃದ್ಯವಾದ ಗದ್ಯಭಾಗಗಳನ್ನು ಒಳಗೊಂಡಿವೆ. ಕುರುಗೋಡಿನ ಕೋಟೆಯನ್ನು ವರ್ಣಿಸುವಾಗ ಕವಿ ಕಲ್ಪನೆಗೆ ಎಲ್ಲೆಯೆ ಇರಲಿಲ್ಲವೆನಿಸುತ್ತದೆ. ಸೈನಿಕರು ಹೋಗಲಿ, ಕಾಳಗವೆಂದೊಡನೆ ಕುರುಗೋಡಿನ ಕೋಟೆಯೇ ಎದೆ ಸೆಟೆಸಿ ನಿಂತು ಉತ್ಸಾಹದಿಂದ ಮೆರೆಯುತಿತ್ತಂತೆ.[೮೧]

ಚೋಳನನಾಳು ಮಾಡುವುದು ಗೂರ್ಜ್ಜರಂ ಸಲೆ ತರ್ದ್ದಿಕುಂ ಕರಂ
ಲಾಳನನಾಳಿಮಾಡುವುದು ಪಾಂಡ್ಯನನಂಡಲೆಗುಂ ತೆಲಂಗ ಭೂ
ಪಾಲನನೇಳಿದಿಕ್ಕೆಯನೆ ಮಾಡುವುದೀ ಕುಱುಗೋಡಕೋಟೆ ತಾಂ
ಕಾಳಗವೆಂದಡೇಳು ಮಡಿ ಪೆರ್ಚ್ಚುವುದಚ್ಚರಿ ಯಾರೊ ಕಾದುವರ್ ॥

ಈ ಊರಿನ ಮುಮ್ಮರಿದಂಡುಗಳನ್ನು ರಗಳೆ ರೂಪದಲ್ಲಿ ಶಾಸನದ ಕವಿ ಈ ರೀತಿಯಾಗಿ ವರ್ಣಿಸಿದ್ದಾನೆ. ಲಲಿತ ರಗಳೆ ಎಂದು ಗುರುತಿಸಲಾದ ಈ ರಗಳೆಯ ಕೆಲವು ಸಾಲುಗಳು ಹೀಗಿವೆ. [೮೨]

**ರಗಳೆ :** ॥ ಸ್ವಸ್ತಿಗವಱೀಶ ಪದಪದ್ಮ ಪಟ್ಪರಣರುಂ
ವಿಸ್ತೀರ್ಣವಸ್ತುಗುಣವಿನಿಹಿತಾಚರಣರುಂ
ಪಂಚಶತವೀರಶಾಸನಗುಣೋದ್ಧರಣರುಂ
ಸಂಚಿತಸಮಸ್ತಧರ್ಮ್ಮೈಕನಿಸ್ತರಣರುಂ
ಬ್ಯವಹಾರಿನಯವಿನಯವಿಜ್ಞಾನವಿದ್ಯರುಂ
ನವರತ್ನವಾಹನಪರೀಕ್ಷಾನವದ್ಯರುಂ
ಶರಣೆಂದು ಕಂಡರಂ ಕರುದಿಂ ಕಾವರುಂ
ಬಿರುದಿಂಗೆ ಬೀಗುವರ ಹರಣಂ ಸೋವರುಂ
ತೋಟಿ ಎಂದೆಡೆ ಕೋಟಿಲಾಭವೆಂದುಲಿವರುಂ
ಆಟಂದೆ ಬವರಕ್ಕೆ ನಾಟಕಂ ನಲಿವರುಂ
ಅಯ್ಯವೊಳೆಯ ತಳದಿನಿದುವೆನೆರ್ಗ್ಗಿಱಿದೆನಿಪ
ರಯ್ಯಮಾ ದ್ವಾರವತೀಪುರಕ್ಕೆ ಕುಱುವೆನಿಪ
ಕುಱುಗೋಡ ತಳದೊಳಗೆ ತಳದನೊಯ್ಯರ್ವ್ವಯಾರುಂ
ನೆಱ ನೋ ಳರ್ಪ್ಪಡವರೊಳಗೆಪಗೆಗಂಜರೋರ್ವ್ವರುಂ ॥

ಕ್ರಿ.ಶ. ೧೧೭೭ ರ ಶಾಸನದಲ್ಲಿಯ ರಗಳೆಯ ಕೆಲವು ಸಾಲುಗಳು ಹೀಗಿವೆ. ಇದು ಸಹ ಲಲಿತ ರಗಳೆ ಎಂದು ಗುರುತಿಸಲ್ಪಟ್ಟಿದೆ.[೬೩]

॥ ಭಗವತೀಲಬ್ಧವರದಾನಪ್ರಸಾದರುಂ  
ಅಗಣಿತ ಮಹತ್ಸೌಖ್ಯ ಸಂಪತ್ರಮೋದರುಂ  
ಚಕ್ರಧರದತ್ತಚಕ್ರಧ್ವಜವಿರಾಜ ರುಂ  
ಪ್ರಾರ್ತ್ಥಿತಾರ್ತ್ಥಿಪ್ರಕರ ಸುರರಾಜಭೋಜರುಂ  
ಸಾಹಸೋತ್ತುಂಗರುಂ ಹರಪಾದಭೃಗರುಂ  
ಅಸಹಾಯ ಸೌರ್ಯ್ಯರುಂ ಮೇರುಗಿರಿಧೈರ್ಯರುಂ  
ಏಕೈಕವೀರರುಂ  
ಲೋಕೈಕಸೂರರುಂ ಪರವಧೋದೂರರುಂ  
ಭುವನವಿಸ್ತಾರರುಂ ಚಲದರ್ತ್ಥಿಗಣ್ಡರುಂ  
ಸಂಗ್ರಾಮಶೌಣ್ಡರುಂ ಅಧಿಕ ಪ್ರಚಣ್ಡರುಂ  
ನುಡಿದನ್ತೆ ಗಣ್ಡರುಂ ॥

ಇದೇ ಶಾಸನದಲ್ಲಿಯ ಕೆಲವು ಸಾಲುಗಳನ್ನು ಅವು ರಗಳೆ ಎಂದು ಸ್ಪಷ್ಟಪಡಿಸದಿದ್ದರೂ ಅದನ್ನು ಲಲಿತ ರಗಳೆ ಛಂದಸ್ಸಿನಲ್ಲಿದೆ ಎಂದು ಚನ್ನಬಸವಯ್ಯ ಹಿರೇಮಠ ಗುರುತಿಸಿದ್ದಾರೆ.[೬೪]

॥ ಉದ್ವೃತ್ತ ಮಂಡಲಿಕ ತಾರಕಷಡಾನನಂ  
ವಿದ್ವಿಷ್ಟಳಧ್ವಂಸಸಬಳಪಂಚಾನನಂ  
ಅಸದಳಂಕಾರಾನ್ಯ ನಾರೀವಿದೂರಂ  
ಅಸದೃಶಮಾಹಾಘೋರಸಂಗ್ರಾಮಧೀರಂ  
ವಿಪುಲ ವಿದ್ವದ್ವಿಮುತ ಸಾಹಸೋತ್ತುಂಗಂ  
ನೃಪತಿಳಕ ಸಾಯಿದೇವನ ವೀರಸಿಂಗಂ  
ಕಲಿದೇವ ದಿಬ್ಯಪದಪಂಕಜಾರಾಧಕಂ  
ಬಲವದರಿಭೂಪಾಳಕುಳಸೈನ್ಯಸಾಧಕಂ ॥

ಈ ರಗಳೆಗಳ ಸ್ವರೂಪದಲ್ಲಿಯ ಗುಣಾವಗುಣಗಳನ್ನು ಟಿ.ವಿ. ವೆಂಕಟಾಚಲ–ಶಾಸ್ತ್ರೀಯವರು[೬೫] ಮತ್ತು ಚನ್ನಬಸವಯ್ಯ ಹಿರೇಮಠ ಅವರು ಈಗಾಗಲೇ ಎತ್ತಿ ತೋರಿಸಿದ್ದಾರೆ.

ಕುರುಗೋಡಿನ ನಾಲ್ಕು ಶಾಸನಗಳಲ್ಲಿ ಬೇರೆ ಬೇರೆ ವೃತ್ತಗಳಲ್ಲಿ ರಚಿತವಾದ ಪದ್ಯಗಳಿವೆ. ಸಾಮಾನ್ಯವಾಗಿ ಶಾಸನಗಳಲ್ಲಿ ಇಂತಹ ವರ್ಣನೆಗಳು ಸಾಂಪ್ರದಾಯಿಕವೆನಿಸುತ್ತವೆ. ಅಂದರೆ ಎಷ್ಟೋ ಸಲ ಅದೇ ಶಬ್ದಗಳು, ಅವೇ ಕಲ್ಪನೆಗಳು ಕಾಣಸಿಗುತ್ತವೆ. ಒಂದು ದೃಷ್ಟಿಯಿಂದ ಶಾಸನಗಳು ಸಾರ್ವಜನಿಕ ಸ್ವತ್ತಿದ್ದಂತೆ. ಯಾರು ಬೇಕಾದರೂ ಯಾವ ಬೇಕಾದ ರಚನೆಗಳನ್ನೂ ಬಳಸಿಕೊಳ್ಳಬಹುದಿತ್ತು. ಹೀಗಾಗಿ ಎಷ್ಟೋ ಸಲ ಒಂದು ಶಾಸನದಿಂದ ಯಥಾವತ್ತ್ ಪದ್ಯಗಳನ್ನು ಇನ್ನೊಂದು ಶಾಸನದಲ್ಲಿ ಮತ್ತೆ ಮತ್ತೆ ಎತ್ತಿಕೊಂಡಿದ್ದನ್ನು ನಾವು ಕಾಣುತ್ತೇವೆ. ಆದರೂ ಎಷ್ಟೋ ಸಲ ಮನಸ್ಸಿಗೆ ಅಹ್ಲಾದವಾಗುವಂತಹ ಹೊಸತನಗಳನ್ನು ಕಾಣುತ್ತೇವೆ. ಕ್ರಿ.ಶ. ೧೧೭೬ ರ ಶಾಸನದಲ್ಲಿ ಸರಳ ಶಬ್ದ ಪ್ರಯೋಗದ ಸರಳ ರಚನೆಯ ಕಲಿದೇವಸೆಟ್ಟಿಯ ವರ್ಣನೆಯನ್ನು ನೋಡಬಹುದು.[೬೬]

॥ ಸತ್ಯದ ಬಿತ್ತು ಸಾಹಸದ ಸಾಗರ ವೊಳ್ಗುಣದಾಗರಂ ಜನ
ಸ್ತುತ್ಯತೆಯೊಳ್ಪು ಧರ್ಮದ ತವರ್ಮ್ಮನೆ ಮಾಂತನದಿರ್ಕ್ಕೆದಾಣ ಔ
ಚಿತ್ಯದ ಜಸದ ಸಯ್ಪು ನೆಗಳ್ತೆಯ ಲೋಕದೇಳ್ಗೆ ಯೌ
ನ್ನತ್ಯದ ಗೊತ್ತೆನುತ್ತೆ ಧರೆ ಬಣ್ಣಿಪುದೀ ಕಲಿದೇವಸೆಟ್ಟಿಯಂ ॥

ಉತ್ಕಟ ಭಕ್ತಿಯ ಈ ವ್ಯವಹಾರಿಗೆ ಭಕ್ತಿಯೇ ಭಂಡವಲು, ಭಕ್ತಿಯೇ ಲಾಭ, ಎಂಬ ಕಲ್ಪನೆ ಬಂಧುರವಾಗಿದೆ.[೬೭]

॥ ಭಕ್ತಿಯೆ ಭಂಡ ಮೊದಲ್ ನಿಜ
ಭಕ್ತಿಯೆ ಕೋಟಾನುಕೋಟಿ ಲಾಭಂ ಶಿವಸ
ದ್ಭಕ್ತಿಯ ಬೆಳೆಸಿ . . .
ಭಕ್ತ ಕಲಿದೇವಸೆಟ್ಟಿ ನೆಗಳ್ದಂ ಧರೆಯೊಳ್॥

ಶಿವನೇ ಭಕ್ತರ ಹೃದಯದಲ್ಲಿ ನಿಂತು ಅವರನ್ನು ಮುನ್ನುಡೆಸುತ್ತಾನೆ ಎಂಬ ನಂಬುಗೆಯನ್ನು ಕವಿಯು ಸರಳ ಶಬ್ದಗಳಲ್ಲಿ ಹೀಗೆ ಹೇಳಿದ್ದಾನೆ.[೬೮]

॥ ಚಿನ್ತಾಮಣಿಲಿಂಗಂ ಹೃದ
ಯಾನ್ತರದೊಳ್ನಿನ್ದು ಕಲ್ಲಿಸೆಟ್ಟಿಗೆ ದಯೆಯಿಂ
ದಿನ್ತು ನಡೆ ಯಿನ್ತು ನುಡಿಯೆಂ
ದಿಂತು ಸದಾ ಶಿಕ್ಷಿಸುತ್ತ ರಕ್ಷಿಸುತಿರ್ಪ್ಪಂ॥

ಕುರುಗೋಡೆಂದರೆ ಅದು ಬರೀ ಕೋಟೆಯಲ್ಲ, ಹಲವಾರು ದೇವಾಲಯಗಳಿಂದ ಇರ್ವರು ರಾಚಮಲ್ಲರಿಂದ ಅದು ಭಕ್ತಿಯ ಮನೆ ಎನಿಸಿತು. ಇದನ್ನು ಕವಿ ಹೀಗೆ ಬಣ್ಣಿಸಿದ್ದಾನೆ.[೬೯]

॥ ಭಕ್ತಿಯ ಮನೆ ಭಕ್ತಿಯ ನೆಲೆ
ಭಕ್ತಿಯವತೆ ಭಕ್ತಿಯೆಳ್ಗೆ ಭಕ್ತಿಯ ರಾಜ್ಯಂ
ಭಕ್ತಿಭಂಡಾರಂ ಶಿವಭಕ್ತಿಯ ಸಿರಿ
ಬಂದು ನೆಲೆಸಿತೀ ಕುಱುಗೋಡೊಳ್॥

ಕ್ರಿ.ಶ. ೧೧೮೧ ನೆಯ ಕುರುಗೊಡಿನ ಇನ್ನೊಂದು ಶಾಸನದ ಕವಿಯು ಬಹುಭಾಷಾ ತಜ್ಞನಿರಬೇಕು. ಇಲ್ಲಿ ಸಂಸ್ಕೃತ ಪದ್ಯಗಳ ಜೊತೆಗೆ ಅವನು ಒಂದು ಪ್ರಾಕೃತ ಶ್ಲೋಕವನ್ನೂ ಬಳಿಸಿದುದು ಆಶ್ಚರ್ಯವೆನಿಸುತ್ತದೆ.[೭೦]

॥ ಗೋರೀಪೀಣಿತ್ಥಣತ್ಥತ್ಥಗಿದ ಘುಸಿಣ ದಿಣ್ಣೇಕ ವಣ್ಣೂಗ್ಘವಚ್ಛೋ
ಕಂದಪ್ಪೋದಪ್ಪವಿಪ್ಫಾಳಣಣಿಅಣಿವುಣೋ ವಿಚ್ಛುರನ್ತೆತ್ತೈಚ್ಛೋ
ಗಿಬ್ಬಾಣೊಕ್ಕೇರ ರಖ್ಖೋ ತಿಹುವಣಭವಣಾರಂಭ ಸಂಭನ್ತ
ಖಂಭೋ ಳಚ್ಛೀಣಾಹಪ್ಪಿಯೋ ಸೋ ಜೆಅಇ ಣಂಮ್ಮ
ಸಂಭೋ ಸಯಂಭೂ ॥

**ಸಂಸ್ಕೃತ ರೂಪ**

[॥ ಗೌರಿಪೀನಸ್ತನ ಸ್ಥಸ್ಥಗಿತ ಘುಸ್ರುಣದತ್ತೈಕವರ್ಣೋದ್ಘವಕ್ಷಾಃ
ಕಂದರ್ಪೋದ್ದರ್ಪವಿಷ್ಪಾಲನ ನಿಜನಿಪುಣೋ ವಿಚ್ಛುರತ್ರಕ್ಷ್ಯೋ
ಗೀರ್ವಾಣೋತ್ಕಾರ್ಯರಕ್ಷಸ್ತ್ರಿಭುವನಭವನಾರಂಭ ಸಂಭ್ರಾನ್ತ ಸ್ಕಂಭೋ
ಲಕ್ಷ್ಮೀನಾಥಪ್ರಿಯಃ ಸ ಜಯತಿ ಸತಿಜಯೇ ನರ್ಮ ಶಂಭುಃ ಸ್ವಯಂಭೂಃ ॥]

**ಗದ್ಯ ಸಾಹಿತ್ಯ**

ಕನ್ನಡ ಗದ್ಯ ಸಾಹಿತ್ಯಕ್ಕೂ ಶಾಸನಗಳ ಕೊಡುಗೆ ಗಣನೀಯವಾದುದು. ಅರಸರ ಮತ್ತು ಇತರ ಅಧಿಕಾರಿಗಳ ಬಿರುದಾವಳಿಗಳು, ರಾಜಕುಮಾರರ, ರಾಣಿಯರ, ಮಂತ್ರಿಗಳ ಸದ್ಗುಣಗಳನ್ನು, ಶೌರ್ಯ ಮುಂತಾದವುಗಳನ್ನು ವರ್ಣಿಸುವಾಗ ಎಷ್ಟೋ ಸಲ ಶಾಸನದ ಲೇಖಕ

ತನ್ನ ಜಾಣ್ಮೆಯನ್ನು ತೋರಿಸಿದ್ದಾನೆ. ಎಷ್ಟೋ ಸಲ ಇಂತಹ ವರ್ಣನೆಗಳು ಸಾಂಪ್ರದಾಯಿಕವೂ ರೂಢಿಗತವು ಎನಿಸಿದರೂ ಕೆಲವು ಸಲವಾದರೂ ಗದ್ಯದ ಉತ್ತಮ ಮಾದರಿಯನ್ನು ಇವು ಒದಗಿಸಿವೆ. ಸುಧೀರ್ಘ ಬಿರುದಾವಳಿಗಳು ನಡುನಡುವೆ ಚಿಕ್ಕ ಚಿಕ್ಕ ಪದಪುಂಜಗಳು ಬಾಣಭಟ್ಟನ ಕಾದಂಬರಿಯನ್ನು ನೆನಪಿಸುತ್ತವೆ. ಉದಾಹರಣೆಗೆ ಯಲಬುರ್ಗಿ ಸಿಂದ ಸಾಮಂತ ಪೆರ್ಮಾಡಿದೇವನ ಈ ವರ್ಣನೆಯನ್ನು ನೋಡಬಹುದು.[೭೧]

ಸ್ವಸ್ತಿ ಸಮಧಿಗತಪಂಚಮಹಾಶಬ್ದ ಮಹಾಮಂಡಳೇಶ್ವರಂ । ಉದಾರವೀರಲಕ್ಷ್ಮೀಶ್ವರಂ । ಸಿಂದಕುಳಕಮಳಮಾರ್ತಂಡ । ಮಂಡಳಿಕಕುಸುಮಕೋದಣ್ಡ [।] ಷುಕಳಹಯಾರೂಢ ಪ್ರೌಢ ಶಿಕ್ಷಾವಿಚಕ್ಷಣ । ಪರಿಪೂರ್ಣಶುಭಲಕ್ಷಣ ಕವಿಗಮಕವಾದಿವಾಗ್ಮಿ ಜನಸಂಸ್ತೂಯಮಾನ [।] ಗುಣಗಣನಿಧಾನ । ಶಿವಾಗಮಸಮಾಕರ್ಣ್ಣನಕರ್ಣ್ಣಪೂರ । ಸಕಳವಿದ್ವಜ್ಜನಾಧಾರ ಆಪಾರ ಪರಹಿತಾಚಾರ್ಯ । ಅಸಹಾಯಶೌರ್ಯ । ನಾನಾನಯೋಪಾಯನಿಪುಣಚಾಣಕ್ಯ । ಅಚಳಿತ ವಾಕ್ಯ । ಶಸ್ತ್ರಶಾಸ್ತ್ರಾದಿಸತ್ಕಳಾಪ್ರವೀಣ । ರಣಾಂಗಣ ಧುರೀಣ । ಭೋಗೋಪಭೋಗಸಂಕ್ರಂದನ । ಅನೂನದಾನರವಿನಂದನ । ಅನೇಕವಿಧ ದುರ್ಗವರ್ಗತ್ತಿಣೇತ್ರ । ಆದಿರಾಜಚರಿತ್ರ । ಶರಣಾಗತವಜ್ರಪಂಜರ । ಮಂಡಳಿಕದಿಕ್ಕುಂಜರ । ಕಾವ್ಯಗೀತ ರಸಾನುಭವ ವಿನೋದ [।] ಶ್ರೀಶಂಕರದೇವಲಬ್ಧವರಪ್ರಸಾದಾದಿನಾಮಾವಳೀವಿರಾಜಿತರಪ್ಪ । ಶ್ರೀಮನ್ಮಮಹಾಮಂಡಳೇಶ್ವರಂ ಪೆರ್ಮಾಡಿದೇವರಸರ್

ಇತ್ತೀಚಿಗೆ ಶಾಸನ ಸಾಮಗ್ರಿಗಳು ಬಹಳಷ್ಟು ಬೆಳೆದಿವೆ. ರಾಜಕೀಯ ಇತಿಹಾಸವಲ್ಲದೆ ಸಾಹಿತ್ಯಿಕ ಅಧ್ಯಯನಕ್ಕೂ ವಿಪುಲ ಅವಕಾಶಗಳಿವೆ. ಈ ಅಭ್ಯಾಸದಿಂದ ಅನೇಕ ಹೊಸ ವಿಷಯಗಳು ಹೊರಹೊಮ್ಮುತ್ತವೆ. ಅಜ್ಞಾತವಾಗಿ ಉಳಿದುಕೊಂಡ ಕವಿಗಳ ಹೆಸರುಗಳಂತೂ ಸರಿಯೇ, ವಾಚನಾಭಿರುಚಿ ಹೆಚ್ಚಿಸುವ ಅನೇಕ ಪದ್ಯಗಳು ನಮಗೆ ದೊರೆಯುತ್ತವೆ. ಇವುಗಳನ್ನು ಕೂಲಕಂಷವಾಗಿ, ಸತತವಾಗಿ ಅಭ್ಯಾಸ ಮಾಡುತ್ತ ಹೋದರೆ ನಮ್ಮ ಸಾಹಿತ್ಯ ಭಂಡಾರವನ್ನು ಇನ್ನಷ್ಟು ಶ್ರೀಮಂತಗೊಳಿಸಬಹುದಾಗಿದೆ.

## ಉಲ್ಲೇಖಗಳು ಮತ್ತು ಟಿಪ್ಪಣಿಗಳು :

೧ ಬಿ.ಆರ್. ಗೋಪಾಲ, ದಿ ಚಾಲುಕ್ಯಾಸ ಆಫ್ ಕಲ್ಯಾಣ ಲ್ಯಾಂಡ್ ಕಲಚುರಿಸ್, ಪು.ಸಂ. ೪೧೪

೨ ಎ.ಕ. ಸಂ ೭, ಎಚ್.ಎಲ್. ೨೦

೩ ಅದೇ, ಎಚ್.ಎಲ್. ೭

೪ ಅದೇ, ಎಚ್.ಎಲ್. ೪೬

೫ ಅದೇ, ಎಚ್.ಎಲ್. ೫೦

೬ ಅದೇ, ಎಚ್.ಎಲ್. ೨೦

೭ ಅದೇ, ಎಚ್.ಎಲ್. ೨೫

೮ ಬ್ರಹ್ಮಪುರಿಯನ್ನು ಕುರಿತು ಹೆಚ್ಚಿನ ವಿವರಗಳಿಗೆ ಎಸ್. ಲೀಲಾಶಾಂತಕುಮಾರಿ ಅವರ ಹಿಸ್ಟರಿ ಆಫ್ ಅಗ್ರಹಾರ್ಸ – ಕರ್ನಾಟಕ ಎಂಬ ಗ್ರಂಥ ನೋಡಿರಿ, ಪು.ಸಂ. ೯೯

೯ ಎ.ಕ. ಸಂ. ೭, ಎಚ್.ಎಲ್. ೩೮

೧೦ ಎಸ್.ಐ.ಐ ಸಂ ೧೫, ಶಾ.ಸಂ. ೪೭

೧೧ ಎಸ್.ಎಚ್. ರಿತ್ತಿ, ಪ್ರಾಚೀನ ಕರ್ನಾಟಕ ಆಡಳಿತ ಪರಿಭಾಷೆ ಕೋಶ ಪು.ಸಂ. ೬

೧೨ ಜೆ.ಬಿ.ಬಿ.ಆರ್.ಎ.ಎಸ್. ಸಂ ೧೧, ಶಾ.ಸಂ. ೧

೧೩ ಎಸ್.ಐ.ಐ ಸಂ. ೧೫, ಶಾ. ಸಂ. ೨೩೫

೧೪ ಅದೇ, ಸಂ. ೧೫, ಶಾ. ಸಂ. ೨೩೫

೧೫ ಅದೇ, ಸಂ ೯, ಭಾಗ ೨, ಶಾ. ಸಂ. ೧೫೫

೧೬ ಜೆ.ಬಿ.ಬಿ.ಆರ್.ಎ.ಎಸ್. ಸಂ. ೧೧, ಶಾ.ಸಂ. ೧

೧೭ ಜೆ.ಬಿ.ಬಿ.ಆರ್.ಎ.ಎಸ್, ೧೧, ಶಾ.ಸಂ. ೨

೧೮ ಎಸ್.ಐ.ಐ, ಸಂ. ೯, ಭಾಗ ೨, ಶಾ. ಸಂ. ೧೧೫

೧೯ ಎಸ್.ಐ.ಐ, ೧೫, ಶಾ.ಸಂ. ೧೩೪

೨೦ ಅದೇ, ಸಂ. ೧೫, ಶಾ. ಸಂ. ೧೩೪

೨೧ ಅದೇ, ಸಂ ೧೧, ಭಾಗ ೨, ಶಾ.ಸಂ. ೧೨೯

೨೨ ಎಸ್.ವ್ಹಿ. ಪಾಡಿಗಾರ, ಇನ್ಸಕ್ರಿಪ್ಷನ್ಸ ಆಫ್ ದಿ ಚಾಲುಕ್ಯಸ್ ಆಫ್ ಬಾದಾಮಿ, ಪು. Li

೨೩ ಜೆ.ಬಿ.ಬಿ.ಆರ್.ಎ.ಎಸ್. ಸಂ. ೧೧, ಶಾ.ಸಂ.೬

೨೪ ಎಪಿಗ್ರಾಫಿಯಾ ಇಂಡಿಕಾ, ಸಂ. ೨೦, ನಂ. ೧೩

೨೫ ಕರ್ನಾಟಕ ಇನಸ್ಕ್ರಿಪ್ಸನ್ಸ್ ಸಂ. ೪, ಶಾ.ಸಂ. ೧೩

೨೬ ಅದೇ, ಸಂ. ೪, ಶಾ.ಸಂ. ೩೮

೨೭ ಅದೇ, ಸಂ. ೪, ಶಾ.ಸಂ. ೩೮

೨೮ ಅದೇ, ಸಂ. ೬, ಶಾ.ಸಂ. ೨೫

೨೯ ಅದೇ, ಸಂ. ೬, ಶಾ.ಸಂ. ೨೫

೩೦ ಕ.ವಿ.ವಿ (ಶಿರಗುಪ್ಪಿ ಜಿಲ್ಲೆ), ಶಾ.ಸಂ ೧, ಶಾ.ನಂ. ೪೦

೩೧ ಎಸ್.ಐ.ಐ ಸಂ ೯, ಭಾಗ ೧, ಶಾ. ಸಂ. ೩೨೨

೩೨ ಅದೇ, ಸಂ ೯, ಭಾಗ ೧, ಶಾ. ಸಂ. ೨೯೬, ೨೯೭

೩೩ ಎಂ.ಎಂ. ಕಲಬುರ್ಗಿ, ಶಾಸನಗಳಲ್ಲಿ ಶಿವಶರಣರು, ಪು.ಸಂ. ೧೦೭

೩೪ ಚನ್ನಬಸವಯ್ಯ ಹಿರೇಮಠ, ಕುರುಗೋಡಿನ ಸಿಂದರು ಒಂದು ಅಧ್ಯಯನ, ಪು. ೨೫೭ ಮತ್ತು ಅಡಿ ಟಿಪ್ಪಣಿ ೧೧೪

೩೫ ಎಸ್.ಐ.ಐ, ೯, ಭಾಗ ೧, ಶಾ.ಸಂ. ೨೯೬

೩೬ ಎಸ್.ಐ.ಐ, ಸಂ. ೪, ಶಾ.ಸಂ. ೨೯೬

೩೭ ಅದೇ, ಸಂ ೯, ಭಾಗ ೧, ಶಾ. ಸಂ. ೨೯೬

೩೮ ಕ.ವಿ.ವಿ ಶಾ ಸಂ ೧ (ಬಳ್ಳಾರಿ), ಶಾ. ನಂ.೧೮

೩೯ ಚನ್ನಬಸವಯ್ಯ ಹಿರೇಮಠ, ಕುರುಗೋಡಿನ ಸಿಂದರು, ಒಂದು ಅಧ್ಯಯನ, ಪು. ಸಂ. ೨೫೮

೪೦ ಕ.ವಿ.ವಿ, ಶಾ ಸಂ ೧ (ಬಳ್ಳಾರಿ), ಶಾ. ನಂ. ೧೮

೪೧ ಎ.ಇ, ಸಂ. ೧೪, ಪು.ಸಂ. ೨೭೧

೪೨ ಎಸ್.ವ್ಹಿ.ಪಾಡಿಗಾರ, ಪೂರ್ವೋಲ್ಲಿಖಿತ, ಬಾದಾಮಿ, ನಂ. ೪೨೫

೪೩ ಎಸ್.ವ್ಹಿ. ಪಾಡಿಗಾರ, ಇನ್ಸಕ್ರಿಪ್ಶನ್ಸ ಆಫ್ ದಿ ಚಲುಕ್ಯಸ್ ಆಫ್ ಬಾದಾಮಿ ಸಂಪುಟದ ಶಾಸನಗಳನ್ನು ನೋಡಬಹುದು

೪೪ ಕ.ವಿ.ವಿ ಶಾ ಸಂ ೧ (ಸಿರಗುಪ್ಪ), ಶಾ. ನಂ. ೪೧

೪೫ ಟಿ.ವಿ. ವೆಂಕಟಾಚಲ ಶಾಸ್ತ್ರೀ ಕನ್ನಡ ಛಂದಸ್ಸಃ ಸ್ವರೂಪ, ಪು.ಸಂ. ೩೦೨

೪೬ ಎಸ್.ವ್ಹಿ. ಪಾಡಿಗಾರ, ಪೂರ್ವೋಲ್ಲಿಖಿತ, ಬಾದಾಮಿ, ಪು.ಸಂ. ೩೧೮

೪೭ ಚನ್ನಬಸವಯ್ಯ ಹಿರೇಮಠ, ಪೂರ್ವೋಲ್ಲಿಖಿತ, ಪು.ಸಂ. ೨೯೯

೪೮ ಕ.ಇ.ಸಂ.೪, ಶಾ.ಸಂ. ೧೩

೪೯ ಅದೇ, ಎಚ್.ಎಲ್. ೭

೫೦ ಎ.ಕ, ೪, ಶಾ.ಸಂ. ೧೩

೫೧ ಅದೇ, ಎಚ್.ಎಲ್. ೫೦

೫೨ ಕ.ಇ. ಸಂ. ೪, ಶಾ.ಸಂ. ೧೩

೫೩ ಎ.ಕ.ಸಂ. ೭, ಎಚ್.ಎಲ್. ೭

೫೪ ಕ.ಇ. ಸಂ. ೪, ಶಾ.ಸಂ. ೧೩

೫೫ ಅದೇ, ಶಾ.ಸಂ. ೧೩

೫೬ ಎ.ಕ.ಸಂ. ೭, ಎಚ್.ಎಲ್. ೨೫

೫೭ ಅದೇ, ಎಚ್.ಎಲ್ ೨೫

೫೮ ಅದೇ, ಎಚ್.ಎಲ್ ೨೫

೫೯ ಜೆ.ಬಿ.ಬಿ.ಆರ್.ಎ.ಎಸ್. ಸಂ. ೧೧, ಶಾ.ಸಂ.೧

೬೦ ಅದೇ, ಶಾ.ಸಂ.೨

೬೧ ಎಸ್.ಐ.ಐ, ಸಂ. ೯, ಭಾಗ ೧, ಶಾ.ಸಂ. ೨೯೬

೬೨ ಅದೇ, ಶಾ.ಸಂ. ೨೯೬

೬೩ ಅದೇ, ಶಾ.ಸಂ. ೨೯೭

೬೪ ಚನ್ನಬಸವಯ್ಯ ಹಿರೇಮಠ, ಪೂರ್ವೋಲ್ಲಿಖಿತ, ಪು.ಸಂ. ೨೯೬

೬೫ ಟಿ.ವಿ.ವೆಂಕಟಾಚಲಶಾಸ್ತ್ರೀ, ಪೂರ್ವೋಲ್ಲಿಖಿತ, ಪು.ಸಂ. ೨೯೭

೬೬ ಎಸ್.ಐ.ಐ, ಸಂ. ೯, ಭಾಗ ೧, ಶಾ.ಸಂ. ೨೯೬

೬೭ ಅದೇ, ಶಾ.ಸಂ. ೨೯೬

೬೮ ಅದೇ, ಶಾ.ಸಂ. ೨೯೬

೬೯ ಎ.ಇ, ೧೪, ಪು.ಸಂ. ೨೭೦

೭೦ ಅದೇ, ೧೪, ಪು.ಸಂ. ೨೭೧

೭೧ ಜೆ.ಬಿ.ಬಿ.ಆರ್.ಎ.ಎಸ್. ಸಂ, ೧೧, ಶಾ.ಸಂ.೨

# ಅಧ್ಯಾಯ ೭

# ದೇವಾಲಯ ವಾಸ್ತುಶಿಲ್ಪ

ಸಿಂದ ಅರಸರು ಆಳಿದ ಪ್ರದೇಶದಲ್ಲಿ ವಿವಿಧ ದೇವಾಲಯಗಳು ಕಂಡುಬರುತ್ತಿವೆಯಾದರೂ ಅವೆಲ್ಲವೂ ಕಾಲಮಾನ ದೃಷ್ಟಿಯಿಂದ ಅವರ ಕಾಲಕ್ಕೇ ಅನ್ವಯವಾಗುವದಿಲ್ಲ. ಅವುಗಳ ಸ್ಥಾನ, ಕಾಲ, ಸಂಬಂಧಿಸಿದ ಶಾಸನಗಳು, ವಾಸ್ತುವಿವರಗಳು, ಇತ್ಯಾದಿ ಅಂಶಗಳನ್ನು ಗಮನದಲ್ಲಿರಿಸಿ ಅವು ಸಿಂದ ಅರಸರವು ಅಹುದೋ ಅಲ್ಲವೋ ಎಂಬುದನ್ನು ನಿರ್ಣಯಿಸಬೇಕಾಗುತ್ತದೆ. ಸಿಂದ ಅರಸರು ಕಲ್ಯಾಣದ ಚಾಲುಕ್ಯರ ಮಾಂಡಲಿಕರಾಗಿದ್ದುದ್ದರಿಂದ, ಅವರ ಆಳಿಕೆಯ ಪ್ರದೇಶಗಳಲ್ಲಿರುವ ದೇವಾಲಯಗಳು ಹೆಚ್ಚಾಗಿ ಚಾಲುಕ್ಯರ ದೇವಾಲಯಗಳ ಲಕ್ಷಣಗಳನ್ನೇ ರೂಢಿಸಿಕೊಂಡಿವೆ. ಆದರೂ ಅಲ್ಪಸ್ವಲ್ಪ ವ್ಯತ್ಯಾಸಗಳು ಇಲ್ಲದಿಲ್ಲ. ಕೆಲವು ದೇವಾಲಯಗಳು ಕಲಚೂರಿ ಅರಸರ ಕಾಲಾವಧಿಯಲ್ಲಿಯೂ ನಿರ್ಮಾಣವಾಗಿವೆ. ಇವಾದರೂ ಕಲ್ಯಾಣದ ಚಾಲುಕ್ಯರ ಕಾಲದ ದೇವಾಲಯಗಳ ಲಕ್ಷಣಗಳಿಂದ ತೀರ ಹೊರತಾಗಿಲ್ಲ. ಇನ್ನೊಂದು ವಿಚಾರವೆಂದರೆ ಕಾಲಾನುಕ್ರಮದಲ್ಲಿ, ಮುಖ್ಯವಾಗಿ ಇತ್ತೀಚೆಗೆ ಅನೇಕ ದೇವಾಲಯಗಳು ನವೀಕರಣಗೊಳ್ಳುತ್ತಿರುವದು. ಕೆಲವು ಪ್ರಾಚೀನದೇವಾಲಯಗಳು ಮೂಲಸ್ವರೂಪವನ್ನೇ ಕಳೆದುಕೊಳ್ಳುವಷ್ಟು ಮಟ್ಟಿಗೆ ಹೊಸರೂಪ ಪಡೆದುಬಿಟ್ಟಿವೆ. ಪ್ರಸ್ತುತ ಅಧ್ಯಾಯದಲ್ಲಿ ಸಿಂದ ಅರಸರು ಆಳಿದ ಪ್ರದೇಶದಲ್ಲಿ ಕಾಣುವ, ಶಾಸನ ಇಲ್ಲವೇ ಸ್ಥಳನಾಮದಂತಹ ಪುರಾವೆಯ ಮೇಲೆ ಅವರೊಂದಿಗೆ ಸಂಬಂಧ ಕಲ್ಪಿಸಬಹುದಾದ ಕೆಲವು ದೇವಾಲಯಗಳನ್ನು ವರ್ಣಿಸಲಾಗಿದೆ. ಇಲ್ಲಿ ಆಗಲೇ ಇತರ ವಿದ್ವಾಂಸರು ಪ್ರಕಟಿಸಿರುವ ವಿವರಗಳನ್ನು ಸಹ ಬಳಸಿಕೊಳ್ಳಲಾಗಿದೆ.

## ಕುರುಗೋಡಿನ ಸಿಂದರ ದೇವಾಲಯಗಳು

ಕುರುಗೋಡಿನ ಸಿಂದರು ಆಳಿದ ಪ್ರದೇಶದಲ್ಲಿ ದೊರೆತಿರುವ ದೇವಾಲಯಗಳ ಸಂಖ್ಯೆ ಅನೇಕ. ಇಲ್ಲಿ ಅವರ ನೇರ ಚಟುವಟಿಕೆ ಕಾಣುವ ಸ್ಥಳಗಳಲ್ಲಿರುವ ಕೆಲವು ದೇವಾಲಯಗಳನ್ನು ವಿವರಿಸಲಾಗಿದೆ. ಅಂಥ ಸ್ಥಳಗಳಲ್ಲಿ ಕುರುಗೋಡು, ಒರುವಾಯಿ, ಕೊಳೂರು, ಸಿಂದಗೇರಿ ಮತ್ತು ಸಿಂದವಾಳ ಉಲ್ಲೇಖನೀಯವಾಗಿವೆ. ಇವುಗಳ ಪರಿಸರದಲ್ಲಿ ವಿಪುಲವಾಗಿ ದೊರೆಯುವ ಗ್ರನೈಟ್ (ಕಣಶಿಲೆ) ಕಲ್ಲನ್ನು ಈ ದೇವಾಲಯಗಳನ್ನು ಕಟ್ಟಲು ಬಳಸಲಾಗಿದೆ. ಕುರುಗೋಡಿನಲ್ಲಿ ಸಿಂದರು ಸುಮಾರು ೨೦ರಷ್ಟು ದೇವಾಲಯಗಳನ್ನು ಕಟ್ಟಿರಬೇಕೆಂದು ತರ್ಕಿಸಲಾಗಿದೆ. ಆದರೆ ಇವೆಲ್ಲವೂ




ಚಿತ್ರ ೧. ಕಲ್ಲೇಶ್ವರ ದೇವಾಲಯದ ತಲವಿನ್ಯಾಸ

( ಕೃಪೆ : ಸಿ. ಎಸ್. ಪಾಟೀಲ, ೧೯೯೩ )



ಚಿತ್ರ ೧. ಕಲ್ಲೇಶ್ವರ ದೇವಾಲಯದ ಎದುರು ನೋಟ



ಚಿತ್ರ ೨. ಕಲ್ಲೇಶ್ವರ ದೇವಾಲಯದ ಪಾರ್ಶ್ವ ನೋಟ



ಚಿತ್ರ ೩. ಕಲ್ಲೇಶ್ವರ ದೇವಾಲಯದ ಪಾರ್ಶ್ವ ನೋಟ



ಚಿತ್ರ ೪. ಕಲ್ಲೇಶ್ವರ ದೇವಾಲಯದ ಸಭಾಮಂಟಪದ ಕಂಬಗಳು



ಚಿತ್ರ ೫. ಕಲ್ಲೇಶ್ವರ ದೇವಾಲಯದ ಸೂರ್ಯನ ವಿಗ್ರಹ



ಚಿತ್ರ ೬. ಕಲ್ಲೇಶ್ವರ ದೇವಾಲಯದ ಸಪ್ತಮಾತ್ರಿಕೆಯರ ಶಿಲ್ಪದ ತುಂಡುಗಳು

ಮೂಲರೂಪದಲ್ಲಿ ಉಳಿದುಬಂದಿಲ್ಲ. ಈಗಾಗಲೇ ಎಸ್. ರಾಜಶೇಖರ,[೧] ಸಿ.ಎಸ್.ಪಾಟೀಲ,[೨] ಕೆ.ಎಂ.ಸುರೇಶ (ಮತ್ತು ಇನ್ನಿತರರು),[೩] ರಮೇಶ ನಾಯಕ,[೪] ವಾಸುದೇವ ಬಡಿಗೇರ,[೫] ಮುಂತಾದವರು ಇವುಗಳ ಬಗ್ಗೆ ಅಧ್ಯಯನ ಮಾಡುವದರೊಂದಿಗೆ ಶಾಸನಗಳ ದೃಷ್ಟಿಯಿಂದ ಅವುಗಳ ಕರ್ತೃತ್ವ-ಕಾಲ ಇತ್ಯಾದಿಗಳ ಬಗ್ಗೆ ಜಿಜ್ಞಾಸೆ ನಡೆಸಿರುವದು ಉಲ್ಲೇಖನೀಯ.

**ಕುರುಗೋಡು**

**ಕಲ್ಲೇಶ್ವರ ದೇವಾಲಯ** [೬]

ಕಲಚುರಿ ದೊರೆ ರಾಯಮುರಾರಿ ಸೋವಿದೇವನ ಕ್ರಿ. ಶ. ೧೧೭೬ರ ಶಾಸನವು ಈ ದೇವಾಲಯದಲ್ಲಿದ್ದು ಮುಮ್ಮುರಿದಂಡ ಕಲ್ಲಿಸೆಟ್ಟಿಯು ಕಲಿದೇವರ ಸ್ಥಾಪಿಸಿದ್ದಾಗಿ ತಿಳಿಸುತ್ತದೆ.೭ ಅಲ್ಲದೆ ಸೋವಿದೇವನ ಸಾಮಂತನಾಗಿದ್ದ ಸಿಂದವಂಶದ ಮಹಾಮಂಡಳೇಶ್ವರ ರಾಚಮಲ್ಲನು ಸ್ಥಾನಾಚಾರ್ಯ ಅಮೃತರಾಶಿಜೀಯರ ಪಾದ ತೊಳೆದು ಈ ದೇವಾಲಯಕ್ಕೆ ಭೂದಾನ ನೀಡಿದ ಸಂಗತಿಯು ದಾಖಲಾಗಿದೆ. ಹೀಗಾಗಿ ಈ ದೇವಾಲಯವು ಸಿಂದ ರಾಚಮಲ್ಲನ ಕಾಲದ್ದೆಂದು ಭಾವಿಸಬಹುದು.

ಈ ದೇವಾಲಯವು (ಚಿತ್ರ ೧; ಛಾಯಾಚಿತ್ರ ೧–೬) ಎತ್ತರವಾದ ಉಪಪೀಠದ ಮೇಲೆ ಪೂರ್ವಾಭಿಮುಖವಾಗಿ ನಿಂತಿದೆ. ಇದರಲ್ಲಿ ಗರ್ಭಗೃಹ, ಅಂತರಾಳ, ತೆರೆದ ಸಭಾಮಂಟಪ ಮತ್ತು ಮುಖಮಂಟಪಗಳಿವೆ. ಗರ್ಭಗೃಹದ ದ್ವಾರಬಂಧದಲ್ಲಿ ಪದ್ಮದಲವರಿ, ಪುಷ್ಪಶಾಖೆ, ಸ್ತಂಭಶಾಖೆಗಳಿದ್ದು ಲಲಾಟಬಿಂಬದಲ್ಲಿ ಗಜಲಕ್ಷ್ಮಿಯ ಶಿಲ್ಪವಿದೆ. ಮೇಲ್ಭಾಗದಲ್ಲಿ ಶಿಖರ ಮಾದರಿಗಳಿವೆ. ದ್ವಾರಬಂಧದ ಇಕ್ಕೆಲಗಳ ಕೆಳಭಾಗದಲ್ಲಿ ತ್ರಿಶೂಲ, ಡಮರು, ಗದಾ ಹಿಡಿದು ನಿಂತ ದ್ವಾರಪಲಕರಿದ್ದಾರೆ. ಗರ್ಭಗೃಹದಲ್ಲಿ ಎರಡು ಅಡಿ ಎತ್ತರದ ಶಿವಲಿಂಗವಿದೆ. ಅಂತರಾಳದ ದ್ವಾರಬಂಧದಲ್ಲಿ ಸ್ತಂಭಶಾಖೆಯಿದೆ. ಎರಡೂ ಕಡೆಗಳಲ್ಲಿ ಜಾಲಂಧರಗಳಿವೆ. ಲಲಾಟಬಿಂಬದಲ್ಲಿ ಗಜಲಕ್ಷ್ಮಿಯಿದ್ದಾಳೆ. ದ್ವಾರಬಂಧದ ಕೆಳ ಭಾಗದಲ್ಲಿ ತ್ರಿಶೂಲ, ಡಮರು, ಗದಾ ಹಿಡಿದು ನಿಂತಿರುವ ದ್ವಾರಪಾಲಕರ ವಿಗ್ರಹಗಳಿವೆ.

ಸಭಾಮಂಟಪ ವಿಶಾಲವಾಗಿದೆ. ಅದರ ನಡುವೆ ಚೌಕಕಾರದ ನಾಲ್ಕು ಕಂಬಗಳಿವೆ. ಕೆಳ ಮತ್ತು ಮೇಲ್ಭಾಗದಲ್ಲಿ ಚೌಕವಾಗಿರುವ ಹಾಗೂ ಮಧ್ಯ ಭಾಗದಲ್ಲಿ ಹದಿನಾರು ಮತ್ತು ಎಂಟು ಮುಖಗಳುಳ್ಳದ್ದಾಗಿರುವ ಈ ಕಂಬಗಳಿಗೆ, ವೃತ್ತಾಕಾರದ ಕುಂಭ, ಚೌಕಾಕಾರದ ಫಲಕ ಮತ್ತು ಬೋದಿಗೆಗಳಿವೆ. ಸಭಾಮಂಟಪದ ನಡುವೆ ನಂದಿಯ ವಿಗ್ರಹವನ್ನು ಇರಿಸಲಾಗಿದೆ.




ಚಿತ್ರ ೨. ಹಿಂಡುಲಿ ಸಂಗಮೇಶ್ವರ ದೇವಾಲಯದ ತಲವಿನ್ಯಾಸ

( ಕೃಪೆ : ಸಿ. ಎಸ್. ಪಾಟೀಲ, ೧೯೯೨ )



ಚಿತ್ರ ೭. ಹಿಂಡುಲಿ ಸಂಗಮೇಶ್ವರ ದೇವಾಲಯದ ಎದುರು ನೋಟ



ಚಿತ್ರ ೮. ಹಿಂಡುಲಿ ಸಂಗಮೇಶ್ವರ ದೇವಾಲಯದ ಸಭಾಮಂಟಪದ ಕಂಬಗಳು



ಚಿತ್ರ ೬. ಹಿಂಡುಲಿ ಸಂಗಮೇಶ್ವರ ದೇವಾಲಯದ ಪ್ರದಕ್ಷಣಾಪಥದ ನೋಟ

ದೇವಕೋಷ್ಠಗಳು ದೇವಾಲಯದ ಮಾದರಿಯಂತಿದ್ದು ಸ್ತಂಭಶಾಖೆ, ಶಿಖರ ಮಾದರಿಗಳಿಂದ ಅಲಂಕೃತವಾಗಿವೆ. ಬಲಭಾಗದ ದೇವಕೋಷ್ಠದಲ್ಲಿ ಗಣೇಶನ ಹಾಗೂ ಎಡಭಾಗದ ದೇವಕೋಷ್ಠದಲ್ಲಿ ಸೂರ್ಯನ ವಿಗ್ರಹ ಇರಿಸಲಾಗಿದೆ. ಸಭಾಮಂಟಪದ ಗೋಡೆಯ ಒಳ ಮುಖದಲ್ಲಿ ಹಂಸ ಮತ್ತು ಪದ್ಮಗಳ ಕೆತ್ತನೆಯಿದೆ. ಸುತ್ತಲಿನ ಗೋಡೆ ಅರ್ಧದೆತ್ತರಕ್ಕೆ ಮಾತ್ರ ನಿಂತಿದ್ದು ಕಕ್ಷಾಸನವನ್ನು ರಚಿಸಲಾಗಿದೆ. ಚೌಕಾಕಾರದ ಕಂಬಗಳು ಈ ಗೋಡೆಗೆ ಹೊಂದಿಕೊಂಡಿವೆ. ಇಂತಹುದೇ ಎರಡು ಕಂಬಗಳನ್ನು ಮುಖಮಂಟಪದಲ್ಲಿಯೂ ನಿರ್ಮಿಸಲಾಗಿದೆ. ಮುಖಮಂಟಪಕ್ಕೆ ಸೋಪಾನಗಳು ಹಾಗೂ ಅದರ ಇಕ್ಕೆಲಗಳಲ್ಲಿ ಆನೆಗಳಿವೆ. ದೇವಾಲಯದ ಅಧಿಷ್ಠಾನವು ಖುರಕ, ಪದ್ಮ, ಕುಮುದ ಮಡಿಕೆಗಳಿಂದಾಗಿದೆ. ಗೋಡೆ ಸರಳವಾಗಿದೆ. ಕಪೋತ ಮತ್ತು ಪಟ್ಟಿಕೆಗಳು ಅದರ ಮೇಲ್ಭಾಗದಲ್ಲಿವೆ. ಕಕ್ಷಾಸನದ ಹೊರ ಮುಖದಲ್ಲಿ ಪದ್ಮ ಮತ್ತು ಆನೆಗಳ ಕೆತ್ತನೆಗಳಿವೆ. ಮೇಲ್ಗಡೆ ಛಾದ್ಯವಿದೆ. ಮೂಲಪ್ರಾಸಾದದ ಶಿಖರವು ಫಾಂಸನಾ (ಕದಂಬನಾಗರ) ಪ್ರಕಾರದ್ದು. ಅದರ ಮೇಲ್ಗಡೆ ಘಂಟಾ ಮತ್ತು ಕಲಶ ಇವೆ.

## ಸಂಗಮೇಶ್ವರ (ಹಿಂಡುಲಿ ಸಂಗಮೇಶ್ವರ) ದೇವಾಲಯ[೮]

ಕಲ್ಲೇಶ್ವರ ದೇವಾಲಯದಂತೆ ಇದು ಕೂಡ ಎತ್ತರವಾದ ಉಪಪೀಠದ ಮೇಲೆ ಪೂರ್ವಾಭಿಮುಖವಾಗಿ ನಿರ್ಮಿತವಾಗಿದೆ. (ಚಿತ್ರ ೨; ಛಾಯಾಚಿತ್ರ ೭-೯) ಲಕ್ಷಣಗಳಿಂದ ಇದು ಕಲ್ಯಾಣದ ಚಾಲುಕ್ಯರ ಕಾಲದ ದೇವಾಲಯದಂತಿದೆ. ಗರ್ಭಗೃಹ, ಅಂತರಾಳ, ಪ್ರದಕ್ಷಿಣಾಪಥ, ತೆರೆದ ಸಭಾಮಂಟಪ ಮತ್ತು ಮುಖಮಂಟಪಗಳು ಇದರ ಭಾಗಗಳು. ಗರ್ಭಗೃಹದ ದ್ವಾರಬಂಧಕ್ಕೆ ಸ್ತಂಭಶಾಖೆಯಿದ್ದು, ಅದರ ಇಕ್ಕೆಲಗಳಲ್ಲಿ ತ್ರಿಶೂಲ, ಡಮರು, ಗದಾ ಹಿಡಿದು ನಿಂತ ದ್ವಾರಪಾಲಕರಿದ್ದಾರೆ. ಲಲಾಟಬಿಂಬದಲ್ಲಿ ಗಜಲಕ್ಷ್ಮಿಯಿದ್ದು ಅದರ ಮೇಲ್ಭಾಗದಲ್ಲಿ ಶಿಖರ ಮಾದರಿಗಳಿವೆ. ಅಂತರಾಳದ ದ್ವಾರಬಂಧವೂ ಇದೇ ರೀತಿಯಲ್ಲಿದೆ. ಅದರ ಇಕ್ಕೆಲಗಳಲ್ಲಿರುವ ಎರಡು ಚೌಕ ಕಂಬಗಳು ಪಟ್ಟಿಕೆಗಳಿಂದ ಕೂಡಿವೆ. ಗರ್ಭಗೃಹದಲ್ಲಿ ಶಿವಲಿಂಗವನ್ನೂ ಅಂತರಾಳದಲ್ಲಿ ನಂದಿ ಶಿಲ್ಪವನ್ನೂ ಪ್ರತಿಷ್ಠಾಪಿಸಲಾಗಿದೆ. ಗರ್ಭಗೃಹದ ಸುತ್ತ ತೆರೆದ ಪ್ರದಕ್ಷಿಣಾಪಥವಿದೆ. ಅದಕ್ಕೆ ಸೋಪಾನಗಳಿವೆ.

ತೆರೆದ ಸಭಾಮಂಟಪವು ವಿಶಾಲವಾಗಿದೆ. ಇದರಲ್ಲಿ ಮೂವತ್ತಾರು ಕಂಬಗಳಿದ್ದು ಅವು ಮೂರು ಪ್ರಕಾರದ್ದಾಗಿವೆ. ನಡುವಿನ ನಾಲ್ಕು ಕಂಬಗಳು ಗಾತ್ರದಲ್ಲಿ ದೊಡ್ಡದಾಗಿದ್ದು ಕಪ್ಪು ಶಿಲೆಯಿಂದ ರಚಿತವಾಗಿವೆ. ಇವುಗಳ ಮೇಲೆ ಚೌಕಾಕಾರದ ಫಲಕ ಮತ್ತು ಬೋದಿಗೆಗಳಿವೆ.



ಚಿತ್ರ ೧೦. ದೊಡ್ಡಬಸವೇಶ್ವರ ದೇವಾಲಯದ ಸಾಮಾನ್ಯ ನೋಟ (ಜೀರ್ಣೋದ್ಧಾರಗೊಂಡಿದೆ.)

ಇವುಗಳ ಸುತ್ತಲಿರುವ ಹದಿನಾರು ಕಂಬಗಳ ಕೆಳಭಾಗ ಚೌಕವಿದ್ದು, ಮೇಲೆ ವೃತ್ತಾಕಾರದ ಕಲಶ, ಚೌಕ ಫಲಕ ಮತ್ತು ಬೋದಿಗೆಗಳಿವೆ. ಈ ಕಂಬಗಳ ಸುತ್ತಲಿನ ಇಪ್ಪತ್ತು ಕಂಬಗಳು ಕೆಳಗೆ ಮತ್ತು ಮೇಲೆ ಚೌಕವಾಗಿದ್ದು ನಡುವೆ ಹದಿನಾರು ಮತ್ತು ಎಂಟು ಮುಖವುಳ್ಳವಾಗಿವೆ. ಅವುಗಳ ಮೇಲೆ ಚೌಕ ಫಲಕ ಮತ್ತು ಬೋದಿಗೆ ಇವೆ. ಸುತ್ತಲೂ ಚೌಕ ಕಂಬಗಳು ಅರ್ಧದೆತ್ತರಕ್ಕಿರುವ ಗೋಡೆಗೆ ಹೊಂದಿಕೊಂಡಿವೆ. ಈ ಗೋಡೆಯ ಮೇಲೆ ಕಕ್ಷಾಸನವಿದೆ. ಮುಖಮಂಟಪದಲ್ಲೂ ಇದೇ ರೀತಿಯ ಕಂಬಗಳಿವೆ. ಕಕ್ಷಾಸನದ ಗೋಡೆಯ ಒಳಮುಖದಲ್ಲಿ ಕಮಲಗಳ ಸಾಲು ಹಾಗೂ ಹೊರಮುಖದಲ್ಲಿ ಕಮಲ ಮತ್ತು ಇತರ ಉಬ್ಬು ಶಿಲ್ಪಗಳಿವೆ. ಮುಖಮಂಟಪದ ಸೋಪಾನಗಳ ಎರಡೂ ಬದಿಗಳಲ್ಲಿ ದೊಡ್ಡ ಆನೆಗಳ ಶಿಲ್ಪಗಳಿವೆ. ದೇವಾಲಯದ ಅಧಿಷ್ಠಾನವು ಮಣ್ಣಲ್ಲಿ ಹೂತು ಹೋಗಿದೆ. ಗೋಡೆ ಸರಳವಾಗಿದ್ದು, ಮೂಲಪ್ರಾಸಾದಕ್ಕೆ ಫಾಂಸನಾ (ಕದಂಬನಾಗರ) ಶಿಖರ, ಘಂಟಾ ಮತ್ತು ಕಲಶಗಳಿವೆ.

ಸದಾಶಿವಮಹಾರಾಯನ ಕಾಲದ 'ಹಾಳುಗೋಡೆ'ಯಲ್ಲಿರುವ (ಬಳ್ಳಾರಿ ತಾಲೂಕು) ಕ್ರಿ.ಶ. ೧೫೪೩ ರ ಸದಾಶಿವರಾಯನ ಶಾಸನದಲ್ಲಿ ಕೃಷ್ಣದೇವರಾಯನು ಈ ದೇವಾಲಯಕ್ಕೆ ಚಿನಕುಂಟೆ ಗ್ರಾಮವನ್ನು ದಾನಕೊಟ್ಟ ಉಲ್ಲೇಖವಿದೆ.[೯] ಸದಾಶಿವಮಹಾರಾಯನ ಕಾಲದಲ್ಲಿ ಇದನ್ನು ಪುನಃ ದತ್ತಿಯಾಗಿಬಿಟ್ಟದ್ದಲ್ಲದೆ ಗ್ರಾಮದ ತೋಟವನ್ನು ಮಾನ್ಯ ಮಾಡಲಾಯಿತು. ಅಂದರೆ ವಿಜಯನಗರ ಕಾಲದಲ್ಲಿ ಈ ದೇವಾಲಯ ಜಾಗೃತವಾಗಿತ್ತೆಂಬುದು ಸ್ಪಷ್ಟವಿದೆ.

**ರಾಮೇಶ್ವರ ಅಥವಾ ಬಸವೇಶ್ವರ ದೇವಾಲಯ**[೧೦]

ಕುರುಗೋಡಿನ ಬಸವೇಶ್ವರ ದೇವಾಲಯದಲ್ಲಿ ಕ್ರಿ.ಶ. ೧೧೭೭ರ ಕಲಚುರಿ ಸಂಕಮದೇವನ ಶಾಸನವಿದೆ.[೧೧] ಸಿಂದವಂಶದ ಮಹಾಮಂಡಳೇಸ್ವರ ರಾಚಮಲ್ಲನು ಆಳುತ್ತಿದ್ದಾಗ ಅಲ್ಲಿಯ ಮುಮ್ಮುರಿದಂಡಗಳು (ವೀರ ಬಣಜಿಗರು) ತ್ರಿಕೂಟಾಲಯವನ್ನು ಕಟ್ಟಿಸಿ ಗೌರೇಶ್ವರ ದೇವರನ್ನು ಪ್ರತಿಷ್ಠಾಪಿಸಿದರು. ವಿಕ್ರಯವಾಗುವ ವಸ್ತುಗಳ ಮೇಲಿನ ಸುಂಕ ಹಾಗೂ ಭೂಮಿಯನ್ನು ಈ ದೇವರಿಗೆ ದಾನ ನೀಡಲಾಯಿತು. ಅಲ್ಲದೆ ಮಲ್ಲಿಶೆಟ್ಟಿ ಎಂಬುವನು ಮಲ್ಲಿಕಾರ್ಜುನ ದೇವರನ್ನು, ಮುದ್ದರಸನು ಮುದ್ದೇಶ್ವರ ದೇವರನ್ನು ಪ್ರತಿಷ್ಠಾಪಿಸಿ ಭೂದಾನ ಮಾಡಿದರು. ಶಾಸದಲ್ಲಿ ಉಲ್ಲಿಖಿತ ತ್ರಿಕೂಟಾಚಲವು ಇದೇ ದೇವಾಲಯವೆಂದು ತೋರುತ್ತದೆ.

ಪೂರ್ವಾಮುಖವಾಗಿ ನಿರ್ಮಾಣವಾದ ಈ ದೇವಾಲಯ ಕುರುಗೋಡಿನ ಪಶ್ಚಿಮಕ್ಕಿದೆ. ಮೂಲತಃ (ಚಿತ್ರ ೩; ಛಾಯಾಚಿತ್ರ ೧೦) ಇದ್ದ ಮೂರು ಗರ್ಭಗೃಹಗಳಲ್ಲಿ ಈಗ ಎರಡು ಮಾತ್ರ



ಚಿತ್ರ ೧೧. ಮಲ್ಲಿಕಾರ್ಜುನ ದೇವಾಲಯದ ಸಾಮಾನ್ಯ ನೋಟ



ಚಿತ್ರ ೧೨. ಮಲ್ಲಿಕಾರ್ಜುನ ದೇವಾಲಯದ ಗರ್ಭಗೃಹದ ದ್ವಾರಬಂಧ

ಉಳಿದಿವೆ. ಪಶ್ಚಿಮ ಗರ್ಭಗೃಹದ ದ್ವಾರಬಂಧದಲ್ಲಿ ರತ್ನಶಾಖೆ, ವಲ್ಲಿಶಾಖೆ, ಸ್ತಂಭಶಾಖೆ, ಸಿಂಹಶಾಖೆ, ಮತ್ತು ನಿರಲಂಕೃತ ಶಾಖೆ ಇವೆ. ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಇದ್ದು, ಅದರ ಮೇಲೆ ಮುಂಚಾಚಿದ ಪಟ್ಟಿಕೆ, ಶಿಖರ ಮಾದರಿಗಳಿವೆ. ದ್ವಾರಬಂಧದ ಇಕ್ಕೆಲಗಳಲ್ಲಿ ತ್ರಿಶೂಲ, ಡಮರು, ಗದೆ, ಹಿಡಿದುನಿಂತಿರುವ ಶೈವ ದ್ವಾರಪಾಲಕರ ವಿಗ್ರಹಗಳಿವೆ. ಅಂತರಾಳದ ದ್ವಾರಬಂಧವೂ ಇದೇ ರೀತಿಯಾಗಿದೆ. ಉತ್ತರ ಗರ್ಭಗೃಹವು ಹಾಳಾಗಿದೆ. ಇದಕ್ಕೆ ತೆರೆದ ಅಂತರಾಳವಿದೆ. ಇಕ್ಕೆಲಗಳಲ್ಲಿ ಚೌಕ ಕಂಬಗಳು ಪಟ್ಟಿಗಳಿಂದ ಕೂಡಿವೆ. ಸಭಾಮಂಟಪವು ಪೂರ್ತಿ ಹಾಳಾಗಿದೆ. ಪಶ್ಚಿಮ ಅಂತರಾಳದ ಗೋಡೆಯಲ್ಲಿ ದೇಗುಲ ಮಾದರಿಯಂತೆ ಅಲಂಕರಿಸಿರುವ ದ್ವಾರಬಂಧವುಳ್ಳ ದೇವಕೋಷ್ಠಗಳಿವೆ.

ಪಶ್ಚಿಮ ಮೂಲಪ್ರಾಸಾದದ ಮತ್ತು ಅಂತರಾಳದ ಅಧಿಷ್ಠಾನದಲ್ಲಿ ಖುರಕ, ಪದ್ಮ, ಕುಮುದ ಮತ್ತು ಕಪೋತ ಮಡಿಕೆಗಳಿವೆ. ಗೋಡೆಯಲ್ಲಿ ಕುಡ್ಯಸ್ತಂಬಳಿದ್ದು, ಕರ್ಣಗಳ ಕುಡ್ಯಸ್ತಂಭಗಳ ಜೋಡಿಗಳ ನಡುವೆ ಹಾಗೂ ಮಧ್ಯಭದ್ರದ ಕುಡ್ಯಸ್ತಂಭಗಳ ಜೋಡಿಗಳ ನಡುವೆ ದ್ರಾವಿಡ ಶಿಖರಮಾದರಿಗಳು ಹಾಗೂ ನಡುವಣ ಕುಡ್ಯಸ್ತಂಭಗಳ ಅಂತರದಲ್ಲಿ ನಾಗರ ಕೂಟಸ್ತಂಭಗಳು ಇವೆ. ಮೂಲಪ್ರಾಸಾದದ ಶಿಖರವು ಫಾಂಸನಾ ಪ್ರಕಾರದ್ದಾಗಿದ್ದು ಶಿಖರದ ಮೇಲೆ ಘಂಟಾ ಇದೆ. ಕಲಶ ಬಿದ್ದುಹೋಗಿದೆ.

**ರಾಚಮಲ್ಲ (ಮಲ್ಲಿಕಾರ್ಜುನ) ದೇವಾಲಯ**[೧೨]

ಸಿಂದ ವಂಶದ ಇಮ್ಮಡಿ ರಾಚಮಲ್ಲನ ಶಾಸನವು ಮೊದಲನೆಯ ರಾಚಮಲ್ಲನನ್ನು ಹೆಸರಿಸುತ್ತದೆ.[೧೩] ಶಿವನು ಪಾರ್ವತಿಯೊಡನೆ ರಾಚಮಲ್ಲನಿಗೆ ದರ್ಶನವಿತ್ತು ಅವನನ್ನು ಕೈಲಾಸಕ್ಕೆ ಕರೆದುಕೊಂಡು ಹೋದನೆಂದೂ ಆಗ ಕುರಗೋಡಿನ ಪಶ್ಚಿಮಕ್ಕೆ ಲಿಂಗರೂಪದಲ್ಲಿ ಉದ್ಭವಿಸಿದನೆಂದೂ, ಆ ಲಿಂಗವನ್ನು ರಾಚಮಲ್ಲೇಶ್ವರ ಎಂದು ಕರೆಯಲಾಯಿತೆಂದೂ ಶಾಸನ ಹೇಳುತ್ತದೆ. ಪ್ರಾಯಶಃ ಇದು ಮೊದಲನೇ ರಾಚಮಲ್ಲನ ನೆನಪಿಗೋಸ್ಕರ ಕಟ್ಟಿದ ದೇವಾಲಯವೆಂದು ಕಾಣುತ್ತದೆ.

ಈ ದೇವಾಲಯ ಪೂರ್ವಾಭಿಮುಖವಾಗಿದೆ. (ಛಾಯಾಚಿತ್ರ ೧೧-೧೨) ಗರ್ಭಗೃಹ, ಅಂತರಾಳ ಮತ್ತು ತೆರೆದ ಸಭಾಮಂಟಪ ಇದರ ಭಾಗಗಳು. ಗರ್ಭಗೃಹದ ದ್ವಾರಬಂಧದಲ್ಲಿ ಪದ್ಮದಲವರಿ, ಪುಷ್ಪಶಾಖೆ ಮತ್ತು ಸ್ತಂಭಶಾಖೆಯನ್ನು ತೋರಿಸಲಾಗಿದೆ. ಲಲಾಟಬಿಂಬದಲ್ಲಿ ಗಜಲಕ್ಷ್ಮಿಯಿದ್ದು ಅದರ ಮೇಲ್ಗಡೆ ಶಿಖರ ಮಾದರಿಗಳ ಸಾಲು ಇದೆ. ದ್ವಾರಬಂಧದ






ಚಿತ್ರ ೪. ಉಜಾಳೇಶ್ವರ ದೇವಾಲಯದ ತಲವಿನ್ಯಾಸ

( ಕೃಪೆ : ಸಿ. ಎಸ್. ಪಾಟೀಲ, ೧೯೯೩ )



ಚಿತ್ರ ೧೨. ಉಜಲೇಶ್ವರ ದೇವಾಲಯದ ನೋಟ

ಕೆಳಭಾಗದಲ್ಲಿ ತ್ರಿಶೂಲ, ಡಮರು, ಗದಾ ಹಿಡಿದು ನಿಂತಿರುವ ದ್ವಾರಪಾಲಕರಿದ್ದಾರೆ. ಅಂತರಳದ ದ್ವಾರಬಂಧವು ಗರ್ಭಗೃಹದ ದ್ವಾರದಂತಯೇ ಇದೆ. ಮೇಲ್ಗಡೆ ಇರುವ ಶಿಖರ ಮಾದರಿಗಳ ಸಾಲಿನಲ್ಲಿ ಪ್ರತಿಯೊಂದು ಜೋಡಿ ಶಿಖರಮಾದಿರಿಗಳ ನಡುವೆ ಸಿಂಹಗಳು ಚಿತ್ರಿಸಲಾಗಿದೆ. ದ್ವಾರಬಂಧದ ಪಾರ್ಶ್ವಗಳಲ್ಲಿ ಜಾಲಂಧರಗಳಿವೆ. ದ್ವಾರಪಾಲಕರ ಸ್ಥಾನದಲ್ಲಿ ಚಾಮರಧಾರಿ ಸ್ತ್ರೀಯರ ಉಬ್ಬುಶಿಲ್ಪಗಳಿವೆ.

ಸಭಾಮಂಟಪ ವಿಶಾಲವಾಗಿದ್ದು ನಡುವೆ ನಾಲ್ಕು ಚೌಕ ಕಂಬಗಳಿವೆ. ಇವು ಮೇಲೆ ಚೌಕವಾಗಿದ್ದು, ನಡುವೆ ಹದಿನಾರು ಮತ್ತು ಎಂಟು ಮುಖವುಳ್ಳದ್ದಾಗಿವೆ. ಮೇಲ್ಭಾಗಲ್ಲಿ ವೃತ್ತಾಕಾರದ ಕಲಶ, ಚೌಕ ಫಲಕ ಮತ್ತು ಬೋದಿಗೆಯನ್ನು ಹೊತ್ತಿವೆ. ಸಭಾಮಂಟಪದ ಸುತ್ತಲಿರುವ ಅರ್ಧದೆತ್ತರಕ್ಕೆ ಮಾತ್ರವಿರುವ ಗೋಡೆಯ ಮೇಲ್ಗಡೆ ಕಕ್ಷಾಸನವನ್ನು ರಚಿಸಲಾಗಿದೆ. ಅದಕ್ಕೆ ಹೊಂದಿಕೊಂಡು ಸುತ್ತಲೂ ಚೌಕ ಕಂಬಗಳಿವೆ. ಇದೇ ರೀತಿಯ ಎರಡು ಕಂಬಗಳುಳ್ಳ ಮುಖಮಂಟಪವನ್ನು ಉತ್ತರ ಭಾಗದಲ್ಲಿ ರಚಿಸಲಾಗಿದೆ. ಅದರ ಮೇಲ್ಭಾಗದಲ್ಲಿ ಕಂಬಗಳಿಗೆ ಹೊಂದಿಕೊಂಡು ಸುತ್ತಲೂ ಛಾದ್ಯವಿದೆ. ಈ ದೇವಾಲಯದ ಅಧಿಷ್ಠಾನವು ಮಣ್ಣಲ್ಲಿ ಹೂತು ಹೋಗಿದೆ. ಗೋಡೆಯನ್ನು ಸರಳ ರೀತಿಯಲ್ಲಿ ನಿರ್ಮಿಸಲಾಗಿದೆ. ಮೂಲಪ್ರಾಸಾದದ ಮೇಲೆ ಫಾಂಸನಾ (ಕದಂಬನಾಗರ) ಶಿಖರ, ಘಂಟಾ ಮತ್ತು ಕಲಶವಿದೆ.

**ಉಜಾಳೇಶ್ವರ ದೇವಾಲಯ**[೧೪]

ಕುರುಗೋಡು ಗ್ರಾಮದ ಈಶಾನ್ಯಕ್ಕಿರುವ ಹಾಳು ಗ್ರಾಮದಲ್ಲಿ ಈ ದೇವಾಲಯವಿದೆ. (ಚಿತ್ರ ೪; ಛಾಯಾಚಿತ್ರ ೧೩) ಇದಕ್ಕೆ ಕಲ್ಯಾಣ ಚಾಲುಕ್ಯರ ಕಾಲದ ದೇವಾಲಯಗಳ ಲಕ್ಷಣಗಳಿವೆ. ಇದು ಎತ್ತರವಾದ ಉಪಪೀಠದ ಮೇಲೆ ಪೂರ್ವ ಮುಖವಾಗಿ ನಿಂತಿದೆ. ಗರ್ಭಗೃಹ, ಅಂತರಾಳ, ಸಭಾಮಂಟಪ ಮತ್ತು ಮುಖಮಂಟಪ ಇದರ ಭಾಗಗಳು. ಗರ್ಭಗೃಹದ ದ್ವಾರಬಂಧಕ್ಕೆ ಪದ್ಮದಲವರಿ, ಪುಷ್ಪಶಾಖೆ, ಸ್ತಂಭಶಾಖೆ ಇದ್ದು, ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಹಾಗೂ ಅದರ ಮೇಲ್ಗಡೆ ಶಿಖರ ಮಾದರಿಗಳಿವೆ. ಕೆಳಗಡೆ ತ್ರಿಶೂಲ, ಡಮರು, ಮತ್ತು ಗದಾ ಹಿಡಿದು ನಿಂತಿರುವ ದ್ವಾರಪಾಲಕರಿದ್ದಾರೆ. ಗರ್ಭಗೃಹದಲ್ಲಿ ಎರಡು ಅಡಿ ಎತ್ತರದ ಪೀಠದ ಮೇಲೆ ಶಿವಲಿಂಗವಿದೆ. ಅಂತರಾಳದ ದ್ವಾರಬಂಧವೂ ಇದೇ ರೀತಿಯಾಗಿದೆ. ಆದರೆ ಇಲ್ಲಿ ಶೈವ ದ್ವಾರಪಾಲಕರ ಸ್ಥಾನದಲ್ಲಿ ಚಾಮರಧಾರಿಣಿಯರ ಉಬ್ಬುಶಿಲ್ಪಗಳಿವೆ. ಈ ಶಿಲ್ಪಗಳ ಕೆಳಗಡೆ ಜೊ–ವಲದೇವಿ ಮತ್ತು ಲೋಕಹುರದ ದೇಚಲದೇವಿ ಎಂಬ ಬರಹಗಳಿವೆ. ಸಭಾಮಂಟಪವು ವಿಶಾಲವಾಗಿದ್ದು ನಡುವೆ ನಾಲ್ಕು ಚೌಕ ಕಂಬಗಳಿವೆ. ಇವು ಕೆಳಗೆ ಮತ್ತು ಮೇಲೆ ಚೌಕವಾಗಿದ್ದು






ಚಿತ್ರ ೩. ಬಜಾರ ಬಸಪ್ಪ (ತ್ರಿಕೂಟಾಲಯ) ದೇವಾಲಯದ ತಲವಿನ್ಯಾಸ

( ಕೃಪೆ : ಸಿ. ಎಸ್. ಪಾಟೀಲ, ೧೯೯೨ )



ಚಿತ್ರ ೧೪. ಸಿದ್ಧೇಶ್ವರ ದೇವಾಲಯದ ಎದುರು ನೋಟ

ನಡುವೆ ಹದಿನಾರು ಮತ್ತು ಎಂಟು ಮುಖ ಹೊಂದಿವೆ. ಇವುಗಳ ಮೇಲ್ಗಡೆ ಫಲಕ ಮತ್ತು ಬೋದಿಗೆಗಳಿವೆ. ಈ ನಾಲ್ಕು ಕಂಬಗಳ ನಡುವಣ ಪ್ರದೇಶದಲ್ಲಿ ನಂದಿಯ ವಿಗ್ರಹವನ್ನು ಇರಿಸಲಾಗಿದೆ. ಸಭಾಮಂಟಪದ ಪಶ್ಚಿಮ ಗೋಡೆಯಲ್ಲಿ ಎರಡು, ಹಾಗೂ ಉತ್ತರ ಮತ್ತು ದಕ್ಷಿಣ ಗೋಡೆಗಳಲ್ಲಿ ಒಂದೊಂದು – ಹೀಗೆ ಒಟ್ಟು ನಾಲ್ಕು ದೇವಕೋಷ್ಠಗಳಿವೆ. ಅವುಗಳ ದ್ವಾರಬಂಧವು ಸ್ತಂಭಶಾಖೆ, ಪದ್ಮದಲಶಾಖೆ, ಮತ್ತು ಶಿಖರ ಮಾದರಿಗಳ ಪಟ್ಟಿಯಿಂದ ಸಿಂಗರಿಸಲ್ಪಟ್ಟಿವೆ. ಸಭಾಮಂಟಪದ ಸುತ್ತಲೂ ಇರುವ ಕಕ್ಷಾಸನದ ಮೇಲೆ ಆರು ಚೌಕ ಕಂಬಗಳಿವೆ. ಕಕ್ಷಾಸನವು ಮುಖಮಂಟಪದಲ್ಲಿಯೂ ಮುಂದುವರೆದಿದೆ. ಸಭಾಮಂಟಪ ಮತ್ತು ಮುಖಮಂಟಪಗಳ ಅರ್ಧಗೋಡೆಗೆ ಖುರಕ, ಪದ್ಮ, ಕುಮುದ ಮತ್ತು ಪಟ್ಟಿ ಇವೆ. ಸುತ್ತಲೂ ಚಾಚಿಕೊಂಡಿರುವ ಮಂಜೂರಿನ ಮೇಲೆ ಪದ್ಮಗಳ ಸಾಲುಗಳಿವೆ. ಅಂತರಾಳ ಮತ್ತು ಗರ್ಭಗೃಹಗಳ ಅಧಿಷ್ಠಾನದಲ್ಲಿ ಖುರಕ, ಪದ್ಮ ಮತ್ತು ತ್ರಿಪಟ್ಟಕುಮುದ ಎದ್ದು ಸ್ಫುಟವಾಗಿವೆ. ಹೊರಗೋಡೆಯು ಸರಳವಾಗಿದೆ. ಮೂಲಪ್ರಾಸಾದದ ಮೇಲೆ ಫಾಂಸನಾ (ಕದಂಬನಾಗರ) ಶಿಖರ, ಘಂಟಾ ಮತ್ತು ಕಲಶ ಇವೆ.

ಈ ದೇವಾಲಯದ ಅಂತರಾಳದ ಪ್ರವೇಶದಲ್ಲಿರುವ ಚಾಮರಧಾರಿಣಿಯರ ಶಿಲ್ಪಗಳ ಕೆಳಗೆ 'ಜೊ–ವಲದೇವಿ' ಮತ್ತು 'ಲೋಕಹುರದ ದೇಚಲದೇವಿ' ಎಂಬ ಶಾಸನ ಬರಹಗಳಿರುವ ವಿಚಾರವನ್ನು ಮೇಲೆ ಪ್ರಸ್ತಾಪಿಸಲಾಯಿತು. ಇವು ಸಿಂದ ವಂಶದ ಒಂದನೆಯ ರಾಚಮಲ್ಲನ ಪತ್ನಿ ಸೋವಲದೇವಿ ಮತ್ತು ಆತನ ಸೊಸೆ ಏಚಲದೇವಿಯರ ಶಿಲ್ಪಗಳಿರಬಹುದೆಂದು ಕೆಲವರು ಅಭಿಪ್ರಾಯ ಪಟ್ಟಿದ್ದಾರೆ. ಇವರಿಂದಾಗಿಯೇ ಈ ದೇವಾಲಯಕ್ಕೆ ಉಜಳೇಶ್ವರ ಎಂಬ ಹೆಸರು ಬಂದಿತೆಂದು ಭಾವಿಸಲಾಗಿದೆ. ಆದರೆ ಸರಿಯಲ್ಲ. ಕುರುಗೋಡಿನ ದೊಡ್ಡಬಸಪ್ಪ ದೇವಾಲಯದಲ್ಲಿರುವ ಕ್ರಿ.ಶ. ೧೫೧೨ರ ಶಾಸನದಲ್ಲಿ ಕುರುಗೋಡು ಸೀಮೆಯ ಈಶಾನ್ಯ ದಿಕ್ಕಿಗಿದ್ದ ಹೊಜೆಹಾಳ ಶಾಂತಮಲ್ಲಿಕಾರ್ಜುನ ದೇವಾಲಯದ ಉಲ್ಲೇಖವಿರುವದರಿಂದ,[೧೫] 'ಹೊಜೆಹಾಳ' ಎಂಬುದರಿಂದಲೇ ಉಜಾಳೇಶ್ವರ ಹೆಸರು ಮೂಡಿ, ಕ್ರಮೇಣ ಉಜ್ಜಾಳೇಶ್ವರ ದೇವಾಲಯವೆಂದು ಆಗಿರುವ ಸಾಧ್ಯತೆ ಹೆಚ್ಚು.

**ಸಿದ್ಧೇಶ್ವರ ದೇವಾಲಯ (ಮೂಲತಃ ಜೈನ ಬಸದಿ)[೧೬]**

ಸಿದ್ಧೇಶ್ವರ ದೇವಾಲಯವೆಂದು ಕರೆಯಲಾಗುವ ಈ ಬಸದಿಯು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ನಿರ್ಮಾಣಗಿದೆ. (ಛಾಯಾಚಿತ್ರ ೧೪). ಇದು ಪೂರ್ವಾಭಿಮುಖವಾಗಿದ್ದು ಇದಕ್ಕೆ

ಗರ್ಭಗೃಹ, ಅಂತರಾಳ ಮತ್ತು ಸಭಾಮಂಟಪಗಳಿವೆ. ಗರ್ಭಗೃಹದ ದ್ವಾರಬಂಧದಲ್ಲಿ ಪದ್ಮದಲವರಿ, ಪುಷ್ಪಶಾಖೆ, ಸ್ತಂಭಶಾಖೆ ಇವೆ. ಲಲಾಟಬಿಂಬದಲ್ಲಿರುವ ಈಶ್ವರಲಿಂಗ ಅನಂತರ ಕಾಲದ್ದು. ಅದರ ಮೇಲ್ಭಾಗ ಶಿಖರ ಮಾದರಿಗಳಿವೆ. ದ್ವಾರಬಂಧದ ಕೆಳಭಾಗದಲ್ಲಿ ದ್ವಾರಪಾಲಕರ ಬದಲಾಗಿ ಕುಂಭಗಳಿವೆ. ಈ ಕುಂಭಗಳು ಅರ್ಧಗಂಬ, ಮಕರ ತೋರಣ ಮತ್ತು ಕೀರ್ತಿಮುಖಗಳಿಂದ ಅಲಂಕೃತವಾಗಿವೆ. ಅಂತರಾಳ ಮತ್ತು ಸಭಾಮಂಟಪದ ಪ್ರವೇಶದ್ವಾರಗಳಿಗಾದರೂ ಇದೇ ಪ್ರಕಾರದ ದ್ವಾರಬಂಧಗಳಿವೆ. ಗರ್ಭಗೃಹದಲ್ಲಿ ಸುಮಾರು ಮೂರು ಅಡಿ ಎತ್ತರದ ಶಿವಲಿಂಗವಿದೆ. ಇದನ್ನು ಸಿಂಹ ಪೀಠದ ಮೇಲೆ ಪ್ರತಿಷ್ಠಾಪಿಸಲಾಗಿದೆ. ಇದರ ಮೇಲೆ ಮೂಲತಃ ತೀರ್ಥಂಕರ ವಿಗ್ರಹವಿದ್ದಿರಬೇಕು. ಅಂತರಾಳದ ಇಕ್ಕೆಲಗಳಲ್ಲಿ ಚೌಕಾಕಾರದ ಎರಡು ಕಂಬಗಳಿವೆ. ಅಂತರಾಳದಲ್ಲಿ ನಂದಿ ಶಿಲ್ಪವಿದೆ. ಸಭಾಮಂಟಪದಲ್ಲಿರುವ ನಾಲ್ಕು ಚೌಕಾಕಾರದ ಕಂಬಗಳು ಕೆಳ ಮತ್ತು ಮೇಲ್ಭಾಗದಲ್ಲಿ ಚೌಕ, ನಡುವೆ ಹದಿನಾರು ಮತ್ತು ಎಂಟು ಮುಖಗಳಿರುವ ಪಟ್ಟಿಕೆಗಳಿಂದಾಗಿವೆ. ಕಂಬಗಳ ಮೇಲ್ಭಾಗದಲ್ಲಿ ಚೌಕಾಕಾರದ ಫಲಕ ಮತ್ತು ಬೋದಿಗೆಗಳಿವೆ. ಸಭಾಮಂಟಪದಲ್ಲಿರುವ ಎರಡು ದೇವಕೋಷ್ಠಗಳು ದೇವಾಲಯದ ಮಾದರಿಯಂತೆ ಅಲಂಕೃತವಾಗಿವೆ. ಇವುಗಳಿಗೆ ಸ್ತಂಭಶಾಖೆ ಮತ್ತು ಪದ್ಮದಲವರಿಯುಳ್ಳ ದ್ವಾರಬಂಧವಿದ್ದು ಮೇಲ್ಗಡೆ ಶಿಖರ ಮಾದರಿಗಳಿವೆ. ಮುಂದಿರುವ ತೆರೆದ ಮುಖಮಂಟಪದಲ್ಲಿ ಎರಡು ಚೌಕ ಕಂಬಗಳಿವೆ.

ದೇವಾಲಯದ ಅಧಿಷ್ಠಾನದಲ್ಲಿ ಖುರಕ, ಪದ್ಮ, ಕುಮುದ ಮಡಿಕೆಗಳಿವೆ. ಗೋಡೆಯು ಸರಳ ರೀತಿಯಲ್ಲಿದೆ. ಪ್ರಸ್ತರದಲ್ಲಿ ಪಟ್ಟಿಕೆಗಳು ಮತ್ತು ಮುಂಚಾಚಿದ ಛಾದ್ಯ ಇವೆ.

ಇದು ಮೂಲತಃ ಜೈನಬಸದಿಯಾಗಿತ್ತೆಂಬ ಸಂಗತಿಯು ಗರ್ಭಗೃಹದಲ್ಲಿರುವ ಸಿಂಹಪೀಠ ಮತ್ತು ಸಭಾಮಂಟಪದ ಹೊರಗೋಡೆಯ ಮೇಲಿರುವ ಶಾಸನಗಳಿಂದ ಸೂಚಿತವಾಗುತ್ತದೆ. ಗೋಡೆಯ ಮೇಲಿರುವ ಕ್ರಿ.ಶ. ೧೫೪೫-ಶಾಸನಗಳು ಅಲ್ಲಿಯವರೆಗೂ ಇದು ಜೈನ ಬಸದಿಯಾಗಿ ಉಪಯೋಗದಲ್ಲಿತ್ತೆಂಬುದನ್ನು ಸೂಚಿಸುತ್ತವೆ.[೧೭] ಇದಕ್ಕೆ ಹೊಂದಿಕೊಂಡು ಕ್ರಿ.ಶ. ೧೫೪೬ರ ಶಾಸನದಲ್ಲಿ ಮೂಲಸಂಘ ಬಲತ್ಕಾರಗಣದ ಸೂಯ್ಬುಸೆಟ್ಟಿಯ ಮಗ ಗೋಮಿಸೆಟ್ಟಿಯು ಜಿನಾಲಯವನ್ನು ಜೀರ್ಣೋದ್ಧಾರ ಮಾಡಿಸಿದ್ದನ್ನು ತಿಳಿಸುತ್ತದೆ. ಆ ಕಾಲದ ನಂತರ ಇದು ಶೈವ ದೇವಾಲಯವಾಗಿ ಪರಿವರ್ತಿತವಾಗಿರಬೇಕು. ಇದೇ ಗ್ರಾಮದಲ್ಲಿರುವ



ಚಿತ್ರ ೧೫. ಓರುವಾಯಿ ಬೆನಕಪ್ಪ ದೇವಾಲಯದ ನೋಟ



ಚಿತ್ರ ೧೬. ಓರುವಾಯಿ ಬೆನಕಪ್ಪ ದೇವಾಲಯದ ದ್ವಾರಬಂಧ

( ಕೃಪೆ: ಸಿ.ಎಸ್. ಪಾಟೀಲ, ೧೯೯೨.)

ನೀಲಮ್ಮನ ದೇವಾಲಯಕ್ಕೆ ಕೆಲವು ಜೈನ ಅವಶೇಷಗಳನ್ನು ಸೇರಿಸಲಾಗಿದ್ದು ಅವು ಪ್ರಸ್ತುತ ಜೈನ ಬಸದಿಗೆ ಸಂಬಂಧಿಸಿದವುಗಳೆಂದು ಕಾಣುತ್ತದೆ.

**ಸಿಂಧವಾಳ** (ಬಳ್ಳಾರಿ ತಾ.)

**ಈಶ್ವರ ದೇವಾಲಯ**[೧೪]

ಸಿಂಧವಾಳ ಎಂಬ ಹೆಸರು 'ಸಿಂಧವೊಳಲ್' (ಸಿಂಧರ ಪಟ್ಟಣ) ಎಂಬುದರಿಂದ ಬಂದಿರಬೇಕು. ಈ ಹಿನ್ನೆಲೆಯಲ್ಲಿ ಪ್ರಸ್ತುತ ದೇವಾಲಯವನ್ನು ಸಿಂದರಸರ ಕಾಲದ್ದೆಂದು ಭಾವಿಸಬಹುದು. ಇಂದಿನ ಈಶ್ವರ ದೇವಾಲಯವು ಮೂಲತಃ ಜೈನ ಬಸದಿಯಾಗಿತ್ತು. ಪೂರ್ವಾಭಿಮುಖವಾಗಿರುವ ಈ ದೇವಾಲಯವು ಕಲ್ಯಾಣ ಚಾಲುಕ್ಯರ ಕಾಲದ ಲಕ್ಷಣಗಳನ್ನೊಳಗೊಂಡಿದೆ.

ಗರ್ಭಗೃಹ, ತೆರೆದ ಅಂತರಾಳ ಮತ್ತು ಸಭಾಮಂಟಪಗಳು ಇದರ ಭಾಗಗಳು. ಗರ್ಭಗೃಹದ ದ್ವಾರಬಂಧದಲ್ಲಿ ಸ್ತಂಭಶಾಖೆಯಿದ್ದು, ಲಲಾಟ ಬಿಂಬದಲ್ಲಿ ಜೈನ ತೀರ್ಥಂಕರನ ಶಿಲ್ಪವಿದೆ. ಇಕ್ಕೆಲಗಳಲ್ಲಿ ಪದ್ಮ ಹಿಡಿದು ನಿಂತ ಯಕ್ಷ-ಯಕ್ಷಿಯರಿದ್ದಾರೆ. ಗರ್ಭಗೃಹದಲ್ಲಿ ಈಗ ಶಿವಲಿಂಗವು ಪ್ರತಿಷ್ಠಾಪಿತವಾಗಿದೆ. ತೆರೆದ ಅಂತರಾಳದ ಅಕ್ಕಪಕ್ಕದಲ್ಲಿ ಜಾಲಂಧರಗಳು ಮತ್ತು ಕೆಳಗೆ ಚೌಕವಾಗಿರುವ ಮೇಲೆ ವೃತ್ತಾಕಾರವಾಗಿರುವ ಎರಡು ಕಂಬಗಳಿವೆ. ಅವುಗಳ ಚೌಕ ಮುಖದಲ್ಲಿ ಪಾರ್ಶ್ವನಾಥ ಮತ್ತು ಮಹಾವೀರ ತೀರ್ಥಂಕರರ ಉಬ್ಬು ಶಿಲ್ಪಗಳಿವೆ. ಸಭಾಮಂಟಪದಲ್ಲಿರುವ ಕಂಬಗಳು ಕೆಳಗೆ ಮತ್ತು ಮೇಲೆ ಚೌಕವಾಗಿದ್ದು ನಡುಭಾಗದಲ್ಲಿ ಎಂಟು ಮುಖವುಳ್ಳದ್ದಾಗಿವೆ. ಅವುಗಳ ಮೇಲ್ಭಾಗದಲ್ಲಿ ವೃತ್ತಾಕಾರದ ಕಲಶವಿದ್ದು ಚೌಕ ಫಲಕ ಮತ್ತು ಬೋದಿಗೆಯನ್ನು ಹೊತ್ತಿವೆದೇವಾಲಯದ ಅಧಿಷ್ಠಾನದಲ್ಲಿ ಖುರಕ, ಪದ್ಮ, ಕುಮುದಗಳು ಸ್ಪಷ್ಟವಾಗಿವೆ. ಗೋಡೆಯು ಸರಳವಾಗಿದ್ದು ಮೂಲಪ್ರಾಸಾದದ ಮೇಲೆ ಫಾಂಸನಾ (ಕದಂಬನಾಗರ) ಶಿಖರವಿದೆ.

ಈ ಬಸದಿಗೆ ಸಂಬಂಧಿಸಿದ ಯಾವುದೇ ಶಾಸನಗಳು ಇಲ್ಲ. ಆದರೆ ದೇವಾಲಯದಲ್ಲಿರುವ ಅವಶೇಷಗಳು ಜೈನಬಸದಿಯಾಗಿರುವದನ್ನು ಸ್ಪಷ್ಟಪಡಿಸುತ್ತವೆ. ಗರ್ಭಗೃಹದಲ್ಲಿದ್ದಿರಬಹುದಾದ ಜೈನ ತೀರ್ಥಂಕರ ವಿಗ್ರಹ ಹಾಳಾಗಿದ್ದು, ಈಗ ಈಶ್ವರ ದೇವಾಲಯದ ಮುಂದೆ ಬಿದ್ದಿದೆ.

**ಓರುವಾಯಿ** (ಬಳ್ಳಾರಿ ತಾ.)

**ಓರುವಾಯಿ (ಬಳ್ಳಾರಿ ತಾ.)**

**ರಾಮಲಿಂಗೇಶ್ವರ ದೇವಾಲಯ**[೭೯]

ಪೂರ್ವಾಭಿಮುಖವಾಗಿರುವ ಈ ದೇವಾಲಯವು ಕಲ್ಯಾಣದ ಚಾಲುಕ್ಯರ ಕಾಲದ ಲಕ್ಷಣಗಳಿಂದೊಡಗೂಡಿದೆ. ಪ್ರಾಚೀನ ಮೂಲತಃ ಇದು ಕಲಿದೇವ ದೇವಾಲಯವೆಂದು ಪ್ರಸಿದ್ಧವಾಗಿತ್ತು. ಗರ್ಭಗೃಹ, ಅಂತರಾಳ, ಸಭಾಮಂಟಪ ಮತ್ತು ಮುಖಮಂಟಪ ಇದರ ಭಾಗಗಳು. ಗರ್ಭಗೃಹದ ದ್ವಾರಬಂಧಕ್ಕೆ ಪದ್ಮದಲವರಿ, ಪುಷ್ಪಶಾಖೆ, ಸ್ತಂಭಶಾಖೆ ಇವೆ. ಲಲಾಟಬಿಂಬದಲ್ಲಿ ಗಜಲಕ್ಷ್ಮಿಯ ಶಿಲ್ಪವಿದೆ. ದ್ವಾರಬಂಧದ ಇಕ್ಕೆಲಗಳಲ್ಲಿ ತ್ರಿಶೂಲ, ಡಮರು, ಗದಾ ಹಿಡಿದು ನಿಂತಿರುವ ದ್ವಾರಪಲಕರ ಶಿಲ್ಪಗಳಿವೆ. ಗರ್ಭಗೃಹದಲ್ಲಿ ಶಿವಲಿಂಗವಿದೆ. ಅಂತರಾಳದ ದ್ವಾರಬಂಧವೂ ಇದೇ ರೀತಿಯಾಗಿದೆ. ಇದರ ಲಲಾಟಬಿಂಬದಲ್ಲಿ ಭಕ್ತನ ಶಿಲ್ಪವಿದೆ. ದ್ವಾರಬಂಧದ ಇಕ್ಕೆಲಗಳಲ್ಲಿ ಹಾಗೂ ಮೇಲ್ಭಾಗದದಲ್ಲಿ ಜಾಲಂಧರಗಳಿವೆ. ಅಂತರಾಳದ ದ್ವಾರಬಂಧದ ಪಾರ್ಶ್ವಗಳಲ್ಲಿ ಎರಡು ಚೌಕ ಕಂಬಗಳಿಗೆ ಒಳ-ಹೊಂಸಾಗುವ ಮೂರು ಪಟ್ಟಿಗಳು, ನಡುವೆ ಅಡ್ಡ ಪಟ್ಟಿಗಳು, ಮೇಲ್ಭಾಗದಲ್ಲಿ ಫಲಕ ಮತ್ತು ಬೋದಿಗೆಗಳಿವೆ.

ತೆರೆದ ಸಭಾಮಂಟಪದ ನಡುವಣ ಪ್ರದೇಶದಲ್ಲಿರುವ ನಾಲ್ಕು ಕಂಬಗಳು ಕೆಳಗೆ ಮತ್ತು ಮೇಲೆ ಚೌಕವಿದ್ದು, ನಡುವೆ ಹದಿನಾರು ಮತ್ತು ಎಂಟು ಮುಖಗಳನ್ನು, ಮೇಲೆ ಚೌಕ ಫಲಕ ಮತ್ತು ಬೋದಿಗೆಗಳನ್ನು ಒಳಗೊಂಡಿವೆ. ನಾಲ್ಕು ಕಂಬಗಳ ನಡುವಿನ ಅಂಕಣದ ವಿತಾನದಲ್ಲಿ ಪದ್ಮವಿದೆ. ಸಭಾಮಂಟಪದ ಅರ್ಧಗೋಡೆಯ ಮೇಲೆ ಕಕ್ಷಾಸನವಿದೆ. ಅದರ ಹೊರ ಮತ್ತು ಒಳ ಮುಖಗಳಲ್ಲಿ ಪದ್ಮಗಳ ಸಾಲು ಹಾಗು ಸಂಗೀತ-ನರ್ತಕರ ಉಬ್ಬುಶಿಲ್ಪಗಳಿವೆ. ಗೋಡೆಗೆ ಹೊಂದಿಕೊಂಡು ಚೌಕ ಕಂಬಗಳನ್ನು ನಿಲ್ಲಿಸಲಾಗಿದೆ.

ಸಭಾಮಂಟಪಕ್ಕಿರುವ ಕಕ್ಷಾಸನ ಮುಖಮಂಟಪದಲ್ಲಿಯೂ ಮುಂದುವರೆದಿದೆ. ಇದರಲ್ಲಿ ನಾಲ್ಕು ಚೌಕ ಕಂಬಗಳಿವೆ. ಮುಖಮಂಟಪದ ಪ್ರವೇಶದಲ್ಲಿ ಸೋಪಾನಗಳಿವೆ. ಮುಖಮಂಟಪದ ಕೈಪಿಡಿಯ ಗೋಡೆಯಲ್ಲಿ ಇತ್ತೀಚೆಗೆ ಶಿವ-ಪಾರ್ವತಿಯರ ಗಾರೆಯ ಶಿಲ್ಪಗಳನ್ನು ಅಳವಡಿಸಲಾಗಿದೆ. ಮೂಲಪ್ರಾಸಾದದ ವಿವರಗಳು ಜೀರ್ಣೋದ್ಧಾರವಾಗಿವೆ. ನಾಸಿ-ಕೂಟ-ಶಾಲಾಗಳುಳ್ಳ ಹಾರಗಳಿಂದ ಕೂಡಿರುವ ಇದಕ್ಕೆ ಗ್ರೀವ, ಗುಮ್ಮಟಾಕಾರದ ಘಂಟಾ, ಮತ್ತು ಕಲಶಗಳಿವೆ. ಗೋಡೆಯು ಸರಳವಾಗಿದೆ. ಪ್ರಾಯಶಃ ಮೂಲಪಾಸಾದವು ಫಾಂಸನಾ ರೀತಿಯ ಶಿಖರ, ಘಂಟಾ ಮತ್ತು ಕಲಶಗಳಿಂದ ಕೂಡಿದ್ದಿರಬೇಕು.

ಶಾಸನಗಳು ಈ ದೇವಾಲಯದ ದೇವರನ್ನು ಕಲಿದೇವ ಎಂದು ಉಲ್ಲೇಖಿಸಿವೆ. ಶಾಸನಗಳಿಂದ ತಿಳಿಯುವಂತೆ ಇಲ್ಲಿ ಸ್ಥಾನಾಚಾರ್ಯರ ಪರಂಪರೆಯಿತ್ತು. ಸ್ಥಾನಪತಿಗಳಾಗಿದ್ದ ತ್ರಿಲೋಕ ಪಂಡಿತರ ಸಿದ್ಧಯ್ಯ, ಭೀಮರಾಶಿ ಪಂಡಿತ ಮತ್ತು ಚೀಲರಾಶಿಗುರು ಎಂಬವರ ಉಲ್ಲೇಖಗಳಿವೆ. ಇವರಲ್ಲಿ ಭೀಮರಾಶಿಪಂಡಿತನು ಓರುವಾಯಿಯ ಪ್ರಸ್ತುತ ಕಲಿದೇವ ದೇವಾಲಯವಷ್ಟೇ ಅಲ್ಲದೆ ಕುತನೂರಿನ ವಿರೂಪಾಕ್ಷ, ದೇನೂರಿನ ಮಹಾಕಾಳ ಮತ್ತು ಕುರುಗೋಡಿನ ಭೋಗೇಶ್ವರ ದೇವಾಲಯಗಳಿಗೂ ಸ್ಥಾನಾಚಾರ್ಯನಾಗಿದ್ದನು. ಹೀಗಾಗಿ ಇದೊಂದು ಪಾಶುಪತ-ಕಾಳಾಮುಖ ಶೈವ ಪಂಥದ ದೇವಾಲಯವೆಂಬುದು ಸಿದ್ಧವಾಗುತ್ತದೆ.

**ಬೆನಕಪ್ಪ ಅಥವಾ ಗಣೇಶ ದೇವಾಲಯ**[೨೦]

ಈ ದೇವಾಲಯದ ಪ್ರವೇಶದ ಬಲಕ್ಕಿರುವ ಕ್ರಿ.ಶ. ೧೧೯೫ರ ಶಾಸನದಲ್ಲಿ ಏಚಿಸೆಟ್ಟಿಯು ವಿನಾಯಕ ದೇವಾಲಯವನ್ನು ಕಟ್ಟಿಸಿದ ಉಲ್ಲೇಖವಿದೆ.[೨೧] ಸಿಂಧವಂಶದ ಇಮ್ಮಡಿ ರಾಚಮಲ್ಲನು ಈ ದೇವರ ಚೈತ್ರ, ಪವಿತ್ರ ಮತ್ತು ನೈವೇದ್ಯ ಕಾರ್ಯಗಳಿಗಾಗಿ ಭೂದಾನ ಕೊಟ್ಟಿದ್ದಾನೆ. ಹೊಯ್ಸಳ ವೀರಬಲ್ಲಾಳನ ಕ್ರಿ.ಶ. ೧೨೧೭ರ ಶಾಸನದಲ್ಲಿ ಅವನ ಸಾಮಂತ ಬಸವಣ್ಣ ದಂಡನಾಯಕನು ವಿನಾಯಕ ದೇವರಿಗೆ ಭೂದಾನ ಕೊಟ್ಟ ಪ್ರಸ್ತಾಪವಿದೆ. ಇದೇ ಸಂದರ್ಭದಲ್ಲಿ ಏಚಿಶೆಟ್ಟಿಯು ವಿನಾಯಕ ದೇವಾಲಯವನ್ನು ಬೀವರಾಶಿಗುರುಗಳ ಶಿಷ್ಯ ಚೀಲರಾಶಿಗೆ ಧಾರಪೂರ್ವಕವಾಗಿ ಕೊಟ್ಟನು.

ಈ ದೇವಾಲಯವು ಉತ್ತರಾಬಿಮುಖವಾಗಿವಾಗಿದ್ದು ಅದಕ್ಕೆ ಗರ್ಭಗೃಹ ಮತ್ತು ತೆರೆದ ಸಭಾಮಂಟಪವಿದೆ. (ಛಾಯಾಚಿತ್ರ ೧೫-೧೬) ಗರ್ಭಗೃಹದ ದ್ವಾರಬಂಧದಲ್ಲಿ ಪದ್ಮದಲವರಿ, ಪುಷ್ಪಶಾಖೆ, ಸ್ತಂಭಶಾಖೆ ಇದ್ದು ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಉಬ್ಬುಶಿಲ್ಪವಿದೆ. ಅದರ ಮೇಲ್ಗಡೆ ಶಿಖರಗಳ ಮಾದರಿಗಳ ಸಾಲು ಇದೆ. ದ್ವಾರಬಂಧದ ಇಕ್ಕೆಲಗಳಲ್ಲಿ ದ್ವಾರಪಾಲಕರ ಬದಲು ಆನೆಗಳಿವೆ. ಗರ್ಭಗೃಹದಲ್ಲಿರುವ ಗಣೇಶನ ಶಿಲ್ಪ ಸುಮಾರು ಮೂರು ಅಡಿ ಎತ್ತರವಿದೆ.

ತೆರೆದ ಸಭಾಮಂಟಪದಲ್ಲಿ ನಡುವೆ ನಾಲ್ಕು ಚೌಕ ಕಂಬಗಳಿವೆ. ಸುತ್ತಲಿನ ಕಕ್ಷಾಸನಕ್ಕೆ ಅರ್ಧಮಟ್ಟಕ್ಕೆದ್ದಿರುವ ಗೋಡೆಗೆ ಹೊಂದಿಕೊಂಡು ಹತ್ತು ಕಂಬಗಳಿವೆ. ಅವು ಮೇಲೆ ಮತ್ತು ಕೆಳಗೆ ಚೌಕವಿದ್ದು ನಡುವೆ ಎಂಟುಮುಖಗಳನ್ನು ಹೊಂದಿವೆ. ಸಭಾಮಂಟಪವು ಚಿಕ್ಕ ಮುಖಮಂಟಪದಲ್ಲಿ ತೆರೆದುಕೊಂಡಿದೆ. ಮುಖಮಂಟಪದ ಪ್ರವೇಶಕ್ಕೆ ಸೋಪಾನಗಳಿವೆ. ಹೊರಗೋಡೆಯು ಜೀರ್ಣೋದ್ಧಾರವಾಗಿದೆ.



ಚಿತ್ರ ೧೭. ಕೋಳೂರು ರಾಘಣ್ಣ ದೇವಾಲಯದ ನೋಟ



ಚಿತ್ರ ೧೮. ಪೂರ್ವ ಸಭಾಮಂಟಪದಲ್ಲಿರುವ ಕಂಬ

( ಕೃಪೆ: ಸಿ.ಎಸ್. ಪಾಟೀಲ, ೧೯೯೨.)



ಚಿತ್ರ ೧೯. ಪಶ್ಚಿಮ ಸಭಾಮಂಟಪದಲ್ಲಿರುವ  ಕಂಬ



ಚಿತ್ರ ೨೦. ಪೂರ್ವ ಸಭಾಮಂಟಪದ ವಿತಾನ

( ಕೃಪೆ: ಸಿ.ಎಸ್. ಪಾಟೀಲ, ೧೯೯೨.)

**ಸಿಂದಗೇರಿ (ಬಳ್ಳಾರಿ ತಾ.)**

**ರಾಮಲಿಂಗೇಶ್ವರ ದೇವಾಲಯ**[೨೨]

ಸಿಂದಗೇರಿ ಎಂಬ ಹೆಸರು ಶಾಸನೋಲ್ಲಿಖಿತ 'ಸಿಂದಗೆರೆ'ಯಿಂದ ಬಂದಿದೆ. ಸಿಂದರಸರ ಪ್ರೋತ್ಸಾಹದಲ್ಲಿ ಇದು ನಿರ್ಮಾಣವಾಗಿರಬಹುದು. ಕಲ್ಯಾಣ ಚಲುಕ್ಯ ಅರಸ ಇಮ್ಮಡಿ

ಜಗದೇಕಮಲ್ಲನ ಕ್ರಿ.ಶ. ೧೧೪೧ರ ಶಾಸನ ಈ ಗ್ರಾಮದಲ್ಲಿದೆ. ಈ ಶಾಸನದಲ್ಲಿ ಬಳ್ಳಾರಿಯ ರಾಚಮಲ್ಲನ ಸಾಮಂತ ಕೇಸಿಯಣನಾಯಕನು ಇಲ್ಲಿದ್ದ ಸತ್ರಕ್ಕೆ ಸುಂಕದಾನ ನೀಡಿದ ಉಲ್ಲೇಖವಿದೆ.[೨೩] ಇದೇ ಶಾಸನದಿಂದ ತಿಳಿಯುವಂತೆ ಮುಳಗುಂದದ ಶ್ರೀ ಸ್ವಯಂಭುದೇವರ ಆಚಾರ್ಯರಾಗದ್ದ ಕಾಳಾಮುಖ ಪರಂಪರೆಯ ನಿರ್ಮಾಣಿ ದೇವರು ಸಿಂದಗೆರೆಯ ಮಲ್ಲಿಕಾರ್ಜುನ ದೇವರ ಸ್ಥಾನಪತಿಗಳಾಗಿದ್ದರು. ಈ ಸ್ಥಾನವು ಎಕ್ಕೋಟಿ ಚಕ್ರವತಿಗಳ ಮಠವೆಂದು ಕರೆಯಲ್ಪಟ್ಟಿದೆ. ಆದುದರಿಂದ ಇಂದಿನ ರಾಮಲಿಂಗೇಶ್ವರ ದೇವಾಲಯವನ್ನು ಶಾಸನೋಕ್ತ ಮಲ್ಲಿಕಾರ್ಜುನ ದೇವಾಲಯವೆಂದು ಗುರುತಿಸಬಹುದು.

ಈ ದೇವಾಲಯವು ಎತ್ತರವಾದ ಜಗತಿಯ ಮೇಲೆ ಪೂರ್ವಾಭಿಮುಖವಾಗಿ ನಿಂತಿದೆ. ಗರ್ಭಗೃಹ, ಅಂತರಾಳ, ತೆರೆದ ಸಭಾಮಂಟಪ ಇದರ ಭಾಗಗಳು. ಗರ್ಭಗೃಹದ ದ್ವಾರಬಂಧದಲ್ಲಿ ಸ್ತಂಭಶಾಖೆ, ಪದ್ಮಶಾಖೆಗಳಿಂದ ಅಲಂಕರಿಸಲಾಗಿದೆ. ತೆರೆದ ಅಂತರಾಳದ ಇಕ್ಕೆಲಗಳಲ್ಲಿ ಎರಡು ಚೌಕ ಕಂಬಗಳಿವೆ. ಗರ್ಭಗೃಹದಲ್ಲಿ ಈಶ್ವರಲಿಂಗ ಹಾಗೂ ಅಂತರಾಳದಲ್ಲಿ ನಂದಿ ವಿಗ್ರಹಗಳನ್ನು ಪ್ರತಿಷ್ಠಾಪಿಸಲಾಗಿದೆ.

ತೆರೆದ ಸಭಾಮಂಟಪದ ಪ್ರವೇಶಕ್ಕೆ ಸೋಪಾನಗಳಿವೆ. ಮಂಟಪದ ನಡುವೆ ನಾಲ್ಕು ಚೌಕ ಕಂಬಗಳಿದ್ದು, ಇವು ಕೆಳಗೆ ಮತ್ತು ಮೇಲೆ ಚೌಕ, ನಡುವೆ ಹದಿನಾರು ಮತ್ತು ಎಂಟು ಮುಖಗಳುಳ್ಳವಾಗಿವೆ. ಮೇಲೆ ಚೌಕ ಫಲಕ ಮತ್ತು ಬೋದಿಗೆಗಳಿವೆ. ಸಭಾಮಂಟಪದಲ್ಲಿ ಅಂತರಾಳದ ಗೋಡೆಯಲ್ಲಿ ಎರಡು ದೇವಕೋಷ್ಠಗಳಿವೆ. ಇವುಗಳ ದ್ವಾರಬಂಧದಲ್ಲಿ ಸ್ತಂಭಶಾಖೆ, ವಲ್ಲಿಶಾಖೆ, ಪದ್ಮದಲವರಿ ಇವೆ. ಮುಂಚಾಚಿದ ಕಪೋತದ ಮೇಲ್ಭಾಗದಲ್ಲಿ ಶಿಖರ ಮಾದರಿಗಳಿವೆ. ಬಲಗಡೆಯ ದೇವಕೋಷ್ಠದಲ್ಲಿ ಗಣೇಶನ ಶಿಲ್ಪ ಹಾಗೂ ಎಡಗಡೆಯ

ದೇವಕೋಷ್ಠದಲ್ಲಿ ಮಹಿಷಮರ್ದಿನಿಯ ಶಿಲ್ಪ ಇವೆ. ಒಳಭಾಗದ ಗೋಡೆಯಲ್ಲಿ ಪದ್ಮಗಳ ಕೆತ್ತಲಾಗಿದೆ.

ದೇವಾಲಯದ ಅಧಿಷ್ಠಾನದಲ್ಲಿ ಖುರಕ, ಪದ್ಮ, ಕುಮುದ ಮತ್ತು ಕಪೋತ ಮಡಿಕೆಗಳಿವೆ. ಸರಳ ರೀತಿಯ ಗೋಡೆಯ ಮೇಲ್ಗಡೆ ಪ್ರಸ್ತರದಲ್ಲಿ ಛಾದ್ಯ ಮತ್ತು ಪದ್ಮಗಳಿವೆ.

## ಕೋಳೂರು (ಬಳ್ಳಾರಿ ತಾಲೂಕು)

## ರಾಘಣ್ಣ ಅಥವಾ ಸೂರ್ಯನಾರಾಯಣ ದೇವಾಲಯ[೨೪]

ಈ ದೇವಾಲಯದಲ್ಲಿರುವ ಚಾಳುಕ್ಯ ಜಗದೇಕಮಲ್ಲನ ಕ್ರಿ.ಶ. ೧೧೪೭ರ ಶಾಸನದಿಂದ ಕೆಲವು ಮಾಹಿತಿಗಳು ದೊರೆಯುತ್ತವೆ.[೨೫] ಫಣಿ (ನಾಗ) ವಂಶದ ರೇವಗಾವುಂಡನು ಸೋಮೇಶ್ವರ, ಕಾಲೇಶ್ವರ, ಮಲ್ಲಿಕಾರ್ಜುನ, ಆದಿತ್ಯ, ವಿಘ್ನೇಶ್ವರ ಹಾಗೂ ಮೇಳೇಶ್ವರ ದೇವಾಲಯಗಳನ್ನು ಕಟ್ಟಿಸಿದನು. ಅವನ ಭಾವ ವಿಟ್ಟಿಸೆಟ್ಟಿಯೊಂದಿಗೆ ಸೇರಿ ವಿಷ್ಣು ದೇವಾಲಯ, ಬಾವಿ, ಶಿವಾಲಯ ಹಾಗೂ ಕೆರೆಯನ್ನು ಕಟ್ಟಿಸಿದನು. ಈ ದೇವಾಲಯಗಳಿಗೆ ಸಿಂದ ವಂಶದ ಇಮ್ಮಡಿ ಭೀಮರಸನು ಭೂದಾನ ಮಾಡಿದನು. ಅಂತಾಗಿ ಇದು ಸಿಂದರಸರ ಕಾಲದಲ್ಲಿ ನಿರ್ಮಾಣವಾದ ದೇವಾಲಯವಾಗಿದೆ.

ಇದೊಂದು ಪಂಚಕೂಟ ದೇವಾಲಯ. ಪೂರ್ವಾಭಿಮುಖವಾಗಿದೆ. (ಛಾಯಾಚಿತ್ರ ೧೭-೨೦). ಪೂರ್ವ, ಪಶ್ಚಿಮ ಮತ್ತು ಉತ್ತರಕ್ಕೆ ಒಂದೊಂದು, ಹಾಗೂ ದಕ್ಷಿಣದಲ್ಲಿ ಎರಡು – ಹೀಗೆ ಒಟ್ಟು ಐದು ಗರ್ಭಗೃಹಗಳಿವೆ. ಪ್ರತಿಯೊಂದು ಗರ್ಭಗೃಹಕ್ಕೂ ಅಂತರಾಳವಿದೆ. ಇವು ವಿಶಾಲವಾದ ಸಭಾಮಂಟಪದಲ್ಲಿ ತೆರೆದುಕೊಂಡಿವೆ. ಪಶ್ಚಿಮ ಗರ್ಭಗೃಹದ ದ್ವಾರಬಂಧವು ಸರಳವಾಗಿದ್ದು, ಅದರ ಇಕ್ಕೆಲಗಳಲ್ಲಿ ಕುಂಭಗಳಿವೆ. ಗರ್ಭಗೃಹದಲ್ಲಿ ಶಿವಲಿಂಗವಿದೆ. ಅಂತರಾಳದಲ್ಲಿ ನಂದಿಯ ವಿಗ್ರಹವನ್ನಿರಿಸಲಾಗಿದೆ. ದಕ್ಷಿಣ ಗರ್ಭಗೃಹದ ದ್ವಾರಬಂಧದಲ್ಲಿ ತ್ರಿಶೂಲ, ಡಮರು ಮತ್ತು ಗದೆಯನ್ನು ಹಿಡಿದಿರುವ ದ್ವಾರಪಾಲಕರಿದ್ದಾರೆ. ಲಲಾಟಬಿಂಬದಲ್ಲಿ ಗಜಲಕ್ಷ್ಮಿಯ ಶಿಲ್ಪವಿದೆ. ಸುಮಾರು ಐದು ಅಡಿ ಎತ್ತರದ ಭೈರವನ ಶಿಲ್ಪವನ್ನು ಸ್ಥಾಪಿಸಲಾಗಿದೆ. ಇವನು ತ್ರಿಶೂಲ, ಡಮರು, ಖಡ್ಗ ಮತ್ತು ಪಾನಪಾತ್ರೆಯನ್ನು ಹಿಡಿದಿದ್ದಾನೆ. ಇದರ ಬಲಕ್ಕಿರುವ ಇನ್ನೊಂದು ಗರ್ಭಗೃಹದ ದ್ವಾರಬಂಧದಲ್ಲಿ ಪುಷ್ಪಶಾಖೆ, ಪದ್ಮದಲವರಿ, ಸ್ತಂಭಶಾಖೆ ಇವೆ. ಇಕ್ಕೆಲಗಳಲ್ಲಿ ಶೈವದ್ವಾರಪಾಲಕರು ತ್ರಿಶೂಲ ಮತ್ತು ಡಮರು ಧರಿಸಿದ್ದಾರೆ. ಲಲಾಟಬಿಂಬದ










ಚಿತ್ರ ೫. ಮನ್ಮಥಕುಂಡದ ಪಶ್ಚಿಮಕ್ಕಿರುವ ದೇವಾಲಯದ ತಲವಿನ್ಯಾಸ

( ಕೃಪೆ : ಸಿ. ಎಸ್. ಪಾಟೀಲ, ೧೯೯೩ )



ಚಿತ್ರ ೨೧. ಮನ್ಮಥಕುಂಡದ ಪಶ್ಚಿಮಕ್ಕಿರುವ ದೇವಾಲಯ

( ಕೃಪೆ: ಸಿ.ಎಸ್. ಪಾಟೀಲ, ೧೯೯೨.)

ಮೇಲ್ಗಡೆ ಕಪೋತ ಹಾಗೂ ಅದರ ಮೇಲ್ಗಡೆ ಶಿಖರಗಳ ಮಾದರಿಗಳಿವೆ. ಗರ್ಭಗೃಹದಲ್ಲಿ ದಶಭುಜ ಮಹಿಷಮರ್ದಿನಿಯ ಶಿಲ್ಪವಿದೆ. ಪೂರ್ವ ಗರ್ಭಗೃಹದ ದ್ವಾರಬಂಧವೂ ಮಹಿಷಮರ್ದಿನಿ ಇರುವ ಗರ್ಭಗೃಹದ ದ್ವಾರದಂತೆಯೇ ಇದೆ. ಗರ್ಭಗೃಹದಲ್ಲಿ ಏಳು ಕುದುರೆಗಳುಳ್ಳ ಪೀಠದ ಮೇಲೆ ಸೂರ್ಯನ ವಿಗ್ರಹವಿದೆ. ಸೂರ್ಯನ ಎರಡೂ ಕೈಗಳಲ್ಲಿ ಪದ್ಮಗಳಿವೆ. ಉತ್ತರಕ್ಕಿರುವ ಗರ್ಭಗೃಹದ ದ್ವಾರಬಂಧದಲ್ಲಿ ಸ್ತಂಭಶಾಖೆಯಿದ್ದು, ದ್ವಾರಪಾಲಕರಿರಬೇಕಾದ ಸ್ಥಾನದಲ್ಲಿ ಕುಂಭಗಳ ಚಿತ್ರಗಳಿವೆ. ಗರ್ಭಗೃಹದಲ್ಲಿ ಗರುಡಪೀಠದ ಮೇಲೆ ಸಮಭಂಗದಲ್ಲಿರುವ ವಿಷ್ಣುವಿನ ಶಿಲ್ಪವಿದೆ. ವಿಷ್ಣುವಿನ ಕೈಯಲ್ಲಿ ಅಭಯ ಮುದ್ರೆ, ಶಂಖ, ಚಕ್ರ ಮತ್ತು ಗದೆ ಇದ್ದು, ಪ್ರಾಯಶಃ ಚತುರ್ವಿಂಶತಿ ಮೂರ್ತಿಗಳಲ್ಲಿ ಮೊದಲನೆಯದಾದ ಕೇಶವನ ವಿಗ್ರಹವೆಂದು ತೋರುತ್ತದೆ. ಎಲ್ಲ ಗರ್ಭಗೃಹಗಳ ಅಂತರಾಳಗಳೂ ತೆರೆದಿರುವ ಅಂತರಾಳಗಳು.

ಸಭಾಮಂಟಪವು ವಿಶಾಲವಾಗಿದ್ದು ಅದರ ಉತ್ತರ ದಿಕ್ಕಿಗೆ ಪ್ರವೇಶವಿದೆ. ಇದರಲ್ಲಿ ಎಂಟು ಕಂಬಗಳಿದ್ದು ಅವು ಎರಡು ಪ್ರಕಾರಗಳಲ್ಲಿವೆ. ಮೊದಲ ಪ್ರಕಾರದ ಕಂಬಗಳನ್ನು ಕಪ್ಪು ಶಿಲೆಯಿಂದ ರಚಿಸಲಾಗಿದೆ. ಇವು ಕೆಳಗಡೆ ಮತ್ತು ಮೇಲ್ಗಡೆ ಚೌಕವಿದ್ದು ಅವುಗಳ ನಡು ಭಾಗದಲ್ಲಿ ಹದಿನಾರು ಮತ್ತು ಎಂಟು ಮುಖಗಳಿವೆ. ಮೇಲಣ ಚೌಕದ ಮೇಲ್ಗಡೆ ವೃತ್ತಾಕಾರದ ಕುಂಭ, ಚೌಕ ಫಲಕ ಮತ್ತು ಬೋದಿಗೆ ಇವೆ. ಎರಡನೇ ಪ್ರಕಾರದ ಕಂಬಗಳು ಕಣಶಿಲೆಯಿಂದ ರಚಿತವಾಗಿದ್ದು ಸರಳವಾಗಿವೆ.

ದೇವಾಲಯದ ಅಧಿಷ್ಠಾನವು ಮಣ್ಣಲ್ಲಿ ಹೂತಿದೆ. ಅದರಲ್ಲಿ ಖುರಕ, ಪದ್ಮ, ಕುಮುದ ಮತ್ತು ಕಪೋತ ಮಡಿಕೆಗಳಿವೆ. ಗೋಡೆ ಸರಳವಾಗಿದ್ದು ಮೇಲೆ ಕಪೋತ ಮತ್ತು ನಾಸಿಗಳುಳ್ಳ ಪಟ್ಟಿ ಇವೆ. ಎಲ್ಲ ಮೂಲಪ್ರಾಸಾದಗಳೂ ಪ್ರಾಯಶಃ ಫಾಂಸನಾ (ಕದಂಬನಾಗರ) ರೀತಿಯ ಶಿಖರ ಹೊಂದಿದ್ದವೆಂದು ಕಾಣುತ್ತದೆ. ಈಗ ಒಂದು ಫಾಂಸನಾ ಶಿಖರ ಮಾತ್ರ ಉಳಿದಿದೆ. ಶಿಖರಗಳ ಮೇಲ್ಭಾಗಗಳು ಇಲ್ಲದಾಗಿವೆ.

**ಹಂಪಿ**

**ಮನ್ಮಥಕುಂಡದ ಪಶ್ಚಿಮಕ್ಕಿರುವ ದೇವಾಲಯ**[೨೬]

ದೇವಾಲಯದಲ್ಲಿರುವ ಕ್ರಿ. ಶ. ೧೧೯೯ರ ಶಾಸನದಲ್ಲಿ ಕುರುಗೋಡಿನಿಂದ ಆಳುತ್ತಿದ್ದ ಕಲಿದೇವರಸನ ಉಲ್ಲೇಖವಿದ್ದು ರಾಚಯ್ಯನು ಇಮ್ಮಡಿ ರಾಚಮಲ್ಲೇಶ್ವರ ದೇವಲಾಯವನ್ನು

ಕಟ್ಟಿಸಿದ್ದನ್ನು ಹೇಳುತ್ತದೆ.[೨೭] ಉತ್ತರಾಭಿಮುಖವಾಗಿರುವ ಈ ದೇವಾಲಯ ಗರ್ಭಗೃಹ ಮತ್ತು ಅಂತರಾಳವನ್ನೊಳಗೊಂಡಿದೆ. ಮೂಲತಃ ಇದ್ದ ಸಭಾಮಂಟಪ ಮತ್ತು ಗರ್ಭಗೃಹಗಳಿಗೆ ಈ ದೇಗುಲವನ್ನು ಸಿಂದರು ಸೇರ್ಪಡೆ ಮಾಡಿದ್ದಾರೆ. ಈ ಹಿನ್ನೆಲೆಯಲ್ಲಿ ಇದು ಏಕಕೂಟವಿದ್ದು ದ್ವಿಕೂಟಾಲಯವಾಗಿ ಪರವರ್ತನೆಯಾಗಿರುವ ಸಾಧ್ಯತೆ ಇದೆ. (ಚಿತ್ರ ೫) ಗರ್ಭಗೃಹದ ದ್ವಾರಬಂಧವು ಸರಳವಿದ್ದು ಲಲಾಟದಲ್ಲಿ ಶಿಲ್ಪವಿಲ್ಲ.

ದೇವಾಲಯದ ಏರುನೋಟದಲ್ಲಿ ಸರಳ ಅಧಿಷ್ಠಾನಕ್ಕೆ ಖುರಕ, ಪದ್ಮ, ಕುಮುದ ಮತ್ತು ಕಪೋತ ಮಡಿಕೆಗಳಿದ್ದು, ಗೋಡೆ ಅಲಂಕಾರರಹಿತವಾಗಿದೆ. ಮೂಲಪ್ರಾಸಾದವು ಫಾಂಸನಾ (ಕದಂಬನಾಗರ) ಶಿಖರ ಹೊಂದಿದ್ದು, ಘಂಟಾವನ್ನು ಹೊತ್ತುಕೊಂಡಿದೆ. ಕಲಶ ಬಿದ್ದು ಹೋಗಿದೆ. ಹೀಗಾಗಿ ಕುರುಗೋಡು ಸಿಂದರ ವಾಸ್ತುವಿನ್ಯಾಸಕ್ಕೆ ಇದು ಬದ್ಧವಾಗಿದೆ.

ಕುರುಗೋಡಿನ ಸಿಂದರ ಪ್ರಮುಖ ದೇವಾಲಯಗಳನ್ನು ಮೇಲೆ ಪರಿಶೀಲಿಸಲಾಯಿತು. ಗ್ರನೈಟ್ (ಕಣಶಿಲೆ) ಕಲ್ಲಿನ ಬೆಟ್ಟಗಳ ಪರಿಸರದಲ್ಲಿ ಸಿಂದರ ಪ್ರದೇಶವಿದ್ದುದುದರೊಂದ ಅವರ ದೇವಾಲಯಗಳ ನಿರ್ಮಾಣಕ್ಕೆ ವಾಸ್ತು ಶಿಲ್ಪಿಗಳು ಸಹಜವಾಗಿಯೇ ಆ ಕಲ್ಲನ್ನು ಬಳಸಿದ್ದಾರೆ. ಇವು ವಾಸ್ತುಕಲಾ ದೃಷ್ಟಿಯಿಂದ ಸರಳವಾಗಿವೆ. ನಮಗೆ ತಿಳಿದಿರುವ ಎಲ್ಲ ದೇವಾಲಯಗಳೂ ಸರಳ ಅಧಿಷ್ಠಾನ, ಗೋಡೆ ಮತ್ತು ಶಿಖರವನ್ನು ಹೊಂದಿದ್ದುದರ ಸೂಚನೆ ನೀಡುತ್ತವೆ. ಮೂಲಪ್ರಾಸಾದಗಳು ಫಾಂಸನಾ (ಕದಂಬನಾಗರ) ಮಾದರಿಯಲ್ಲಿವೆ. ಅದರಂತೆ ಹೆಚ್ಚಿನ ದೇವಾಲಯಗಳೆಲ್ಲವೂ ಉಪಪೀಠದ ಮೇಲೆ ನಿಂತಿರುವದು ಗಮನಾರ್ಹವಾಗಿದೆ. ಪ್ರಾಯಶಃ ಕಣಶಿಲೆ ಕಠಿಣ ಶಿಲೆಯಾದುದರಿಂದ ಶಿಷ್ಟ್ (ಬಳಪದ ಕಲ್ಲು) ಬಳಸಿ ನಿರ್ಮಾಣವಾದ ಕಲ್ಯಾಣದ ಚಾಲುಕ್ಯರ ದೇವಾಲಯಗಳಷ್ಟು ಸೂಕ್ಷ್ಮ ಕೆತ್ತನೆಗಳು ಇಲ್ಲಿ ಕಾಣುತ್ತಿಲ್ಲ. ಹೆಚ್ಚಿನ ದೇವಾಲಯಗಳು ಏಕಕೂಟ (ಒಂದೇ ಮೂಲಪ್ರಾಸಾದವುಳ್ಳ) ದೇವಾಲಯಗಳು. ಆದರೆ ತ್ರಿಕೂಟ (ಮೂರು ಮೂಲಪ್ರಾಸಾದಗಳುಳ್ಳ) ಮತ್ತು ಪಂಚಕೂಟ (ಐದು ಮೂಲಪ್ರಾಸಾದಗಳುಳ್ಳ) ಮಾದರಿಯಲ್ಲಿಯೂ ಅಪರೂಪಕ್ಕೆ ದೇವಾಲಯಗಳಿರುವದನ್ನು ಗಮನಿಸಬೇಕು. ಇನ್ನೊಂದು ಉಲ್ಲೇಖನೀಯ ವಿಚಾರವೆಂದರೆ ಕುರುಗೋಡಿನ ಸಂಗಮೇಶ್ವರ ದೇವಾಲಯದ ತಲವಿನ್ಯಾಸವು ಪ್ರದಕ್ಷಿಣಾಪಥವನ್ನು ಒಳಗೊಂಡಿರುವದು. ಕಲ್ಯಾಣದ ಚಾಲುಕ್ಯರ ಮತ್ತು ಅವರ ಮಾಂಡಲೀಕ ಅರಸರಾಳಿದ ಪ್ರದೇಶಗಳಲ್ಲಿ ಪ್ರದಕ್ಷಿಣಾಪಥವುಳ್ಳ ದೇವಾಲಯಗಳು ತೀರ ಅಪರೂಪ. ಮುಂದೆ ವಿಜಯನಗರದ ಅರಸರ ಕಾಲದಲ್ಲಿ ಹಂಪೆಯಲ್ಲಿ ನಿರ್ಮಾಣವಾದ ಕೃಷ್ಣ, ವಿಜಯವಿಠ್ಠಲ ಮುಂತಾದ ಕೆಲವು ದೇವಾಲಯಗಳಿಗೆ ಒಳಪ್ರದಕ್ಷಿಣಾಪಥವಿರುವದನ್ನು ಗಮನಿಸಬೇಕು. ಆ



ಚಿತ್ರ ೨೨. ನ್ಯಾಮತಿ, ಮಠದ ದೃಶ್ಯ



ಚಿತ್ರ ೨೩. ನ್ಯಾಮತಿ, ಮಠದ ದ್ವಾರ ಬಂಧ



ಚಿತ್ರ ೨೪. ಲಲಾಟಬಿಂಬದ ಗಜಲಕ್ಷ್ಮಿ



ಚಿತ್ರ ೨೫. ದ್ವಾರಬಂಧದ ಜಾಲಾಂಧರ

ಹಿನ್ನೆಲೆಯಲ್ಲಿ ಕುರುಗೋಡಿನ ಸಂಗಮೇಶ್ವರ ದೇವಾಲಯವು ಇಂತಹ ವಿನ್ಯಾಸಕ್ಕೆ ಪೂರ್ವಭಾವಿಯಾಗಿದೆ ಎಂಬುದಾಗಿ ಹೇಳಬಹುದು.

**ಇತರ ಸಿಂದ ವಂಶೀಯರ ದೇವಾಲಯ ವಾಸ್ತುಶಿಲ್ಪ**

ಯರಂಬರಗೆ (ಯಲಬುರ್ಗಿ) ಸಿಂದರ ಶಾಸನಗಳು ಅವರ ತೆಕ್ಕೆಯಲ್ಲಿದ್ದ ಹಲವು ಆಡಳಿತ ವಿಭಾಗಗಳಲ್ಲಿ ದೊರೆತಿವೆಯಾದರೂ ಅವುಗಳ ಸಂದರ್ಭ ದೇವಾಲಯಗಳ ಪ್ರತಿಷ್ಠಾಪನೆಗೆ ಸಂಬಂಧಿಸಿರದೆ ದಾನದತ್ತಿಗಳಿಗೆ ಸಂಬಂಧಿಸಿದೆ. ಉದಾಹರಣೆಗೆ ಕಲ್ಲೂರಿನಲ್ಲಿರುವ (ಯಲಬುರ್ಗಿ ತಾಲೂಕು) ಕಲ್ಲಿನಾಥ ದೇವಾಲಯಕ್ಕೆ ಸಂಬಂಧಿಸಿದ ಶಾಸನ ಕ್ರಿ.ಶ. ೧೦೦೨ರಷ್ಟು ಹಳೆಯದು.[೨೮] ಸಿಂದರಿಗೆ ಸಂಬಂಧಿಸಿದ ಶಾಸನ ಸಿಗುವದು ೧೧೯೮ರಲ್ಲಿ.[೨೯] ಕುಕ್ಕನೂರಿನ ಪಂಚಲಿಂಗೇಶ್ವರ, ಇಟಗಿಯ ಮಹಾದೇವ, ಮುಂತಾದ ಪ್ರಸಿದ್ಧ ದೇವಾಲಯಗಳು ಅವರಾಳಿದ ಪ್ರದೇಶದಲ್ಲಿರುವದನ್ನು ಗಮನಿಸಬಹುದು. ಇವುಗಳ ನಿರ್ಮಾತೃಗಳು ಚಾಲುಕ್ಯರಿಗಿಂತ ಮುಂಚಿನವರಾಗಲಿ, ಮಹಾದೇವ ದಂಡನಾಯಕನಂತಹ ಪ್ರಸಿದ್ಧ ದಂಡನಾಯಕರಾಗಲಿ ಆಗಿದ್ದರೆಂಬುದನ್ನು ಹೇಳಬೇಕಾಗುತ್ತದೆ. ಹೀಗಾಗಿ ಎಷ್ಟರ ಮಟ್ಟಿಗೆ ಅವುಗಳನ್ನು ಸಿಂದರ ವಾಸ್ತುಶಿಲ್ಪದ ಉದಾಹರಣೆಗಳೆಂದು ನಿರ್ಧರಿಸುವದು ಅಸಾಧ್ಯ.

ಅದರಂತೆ ಬೆಳಗುತ್ತಿಯ ಸಿಂದರು ಆಳಿದ ಸೀಮಿತ ಪ್ರದೇಶದಲ್ಲಿ ಪಾಶುಪತ–ಕಾಳಾಮುಖ ಶೈವದ ಪ್ರಭಾವ ಬಲವಾಗಿದ್ದು, ವಿಶಾಲ ಪ್ರದೇಶದಲ್ಲಿ ಬಳಕೆಯಲ್ಲಿದ್ದ ಕಲ್ಯಾಣದ ಚಾಲುಕ್ಯರ ಶೈಲಿಯಲ್ಲಿ ಪರಿಣತ ವಾಸ್ತುಶಿಲ್ಪಿಗಳು ಚಟುವಟಿಕೆಯಿಂದ ಕೂಡಿದ್ದು ಕಾಣುತ್ತದೆ. ಬಳಪದ ಶಿಲೆಯೇ ಪ್ರಧಾನವಾಗಿ ಬಳಕೆಯಾಗಿರುವ ಈ ದೇವಾಲಯಗಳು ಅಲಂಕೃತ ದ್ವಾರಬಂಧಗಳು, ಕಂಬಗಳು ಮತ್ತು ಗೋಡೆಗಳಿಂದ ಕೂಡಿವೆ. ಕರ್ನಾಟಕ ದ್ರಾವಿಡ ಮತ್ತು ಫಾಂಸನಾ (ಕದಂಬನಾಗರ) ದೇವಾಲಯಗಳು ಅನೇಕ ಸಂಖ್ಯೆಯಲ್ಲಿ ನಿರ್ಮಾಣವಾಗಿವೆ. ಬೆಳಗುತ್ತಿ ಸಿಂದರ ಪ್ರದೇಶದ ದೇವಾಲಯಗಳು ಇದಕ್ಕೆ ಹೊರತಾಗಿಲ್ಲ. ಸಿಂದರೇ ನಿರ್ಮಿಸಿದ ದೇವಾಲಯವೆಂದು ಗುರುತಿಸಬಹುದಾದ ಉಳಿದುಬಂದಿರುವ ದೇವಾಲಯಗಳನ್ನು ಗುರುತಿಸುವದಾಗುತ್ತಿಲ್ಲ. ಅಲ್ಲದೇ ಹೆಚ್ಚಿನ ದೇವಾಲಯಗಳಲ್ಲಿ ಈಚಿನವರೆಗೆ ಶಿಥಿಲಾವಸ್ಥೆಯಲ್ಲಿದ್ದು ಈಗ ನವೀನ ಶೈಲಿಯಲ್ಲಿ ಜೀರ್ಣೋದ್ಧಾರವಾಗಿವೆ. ಇಲ್ಲಿ ಉದಾಹರಣೆಗಾಗಿ (ಛಾಯಾಚಿತ್ರಗಳು ೨೧–೨೫) ನ್ಯಾಮತಿಯಲ್ಲಿನ ಒಂದು ಮಠಕ್ಕೆ ಬಳಸಿರುವ ಕಂಭ ಇತ್ಯಾದಿಗಳ ಚಿತ್ರಗಳನ್ನು ಕೊಡಲಾಗಿದೆ.

ರಂಜೋಳದ ಸಿಂದರ ಪ್ರದೇಶ ಕಲ್ಯಾಣದ ಚಾಲುಕ್ಯರ ಕೇಂದ್ರ ಪ್ರದೇಶದ ಪರಿಸರದಲ್ಲಿದ್ದುದರಿಂದ ಅಲ್ಲಿಯಾದರೂ ವೈಶಿಷ್ಟ್ಯಗಳನ್ನು ಗುರುತಿಸುವದಾಗದು.

ಈ ಹಿನ್ನೆಲೆಯಲ್ಲಿ ಇವು ಕಲಾಣದ ಚಾಲುಕ್ಯರ ದೇವಾಲಯ ವಾಸ್ತುಶೈಲಿಗೆ ಬದ್ಧವಾಗಿವೆ ಎಂಬುದಾಗಿ ಮಾತ್ರ ಹೇಳಬಹುದು. ಆದುದರಿಂದ ಅವುಗಳ ವರ್ಣನೆಯನ್ನು ಇಲ್ಲಿ ಮಾಡಲಾಗಿಲ್ಲ.

## ಉಲ್ಲೇಖಗಳು ಮತ್ತು ಟಿಪ್ಪಣೆಗಳು

೧ ರಾಜಶೇಖರ ಎಸ್., 'ಟೆಂಪಲ್ಸ್ ಎಟ್ ಕುರುಗೋಡು', ಜರ್ನಲ್ ಆಫ್ ಕರ್ನಾಟಕ ಯುನಿವರ್ಸಿಟಿ ಸಂಪುಟ ೧೦ (೧೯೭೪), ಪು. ೧೬೪-೧೭೮

೨ ಪಾಟೀಲ ಸಿ. ಎಸ್., ಟೆಂಪಲ್ಸ್ ಆಫ್ ರಾಯಚೂರ ಎಂಡ್ ಬಳ್ಳಾರಿ ಡಿಸ್ಟ್ರಿಕ್ಟ್ಸ್.

೩ ಕೆ. ಎಂ. ಸುರೇಶ್ ಮತ್ತು ಇತರರು, ಕರ್ನಾಟಕ ದೇವಾಲಯ ಕೋಶ: ಬಳ್ಳಾರಿ ಜಿಲ್ಲೆ.

೪ ರಮೇಶ ನಾಯಕ, 'ವಾಸ್ತು ಮತ್ತು ಮೂರ್ತಿಶಿಲ್ಪ,' ಬಾಲಸುಬ್ರಹ್ಮಣ್ಯ (ಸಂ.), ಕುರುಗೋಡು, ಪು. ೮೭-೧೨೪

೫ ವಾಸುದೇವ ಬಡಿಗೇರ, ಬಳ್ಳಾರಿ ಪರಿಸರದ ಸಾಂಸ್ಕೃತಿಕ ಪರಂಪರೆ.

೬ ಪಾಟೀಲ ಸಿ.ಎಸ್., ಪೂರ್ವೋಲ್ಲಿಖಿತ, ಪು.೧೫೩-೧೫೫; ಸುರೇಶ ಕೆ. ಎಂ. ಮತ್ತು ಇತರರು, ಪೂರ್ವೋಲ್ಲಿಖಿತ, ಪು. ೧೫-೧೬; ಬಾಲಸುಬ್ರಹ್ಮಣ್ಯ (ಸಂ.), ಕುರುಗೋಡು, ಪು.೯೮-೧೦೧; ವಾಸುದೇವ ಬಡಿಗೇರ, ಪೂರ್ವೋಲ್ಲಿಖಿತ, ಪು. ೨೯೫-೨೯೬.

೭ ಕ.ವಿ.ವಿ. ಶಾ.ಸಂ. ೧, ಬಳ್ಳಾರಿ ಜಿಲ್ಲೆ, ಬಳ್ಳಾರಿ ಶಾ.ಸಂ. ೭

೮ ಪಾಟೀಲ ಸಿ. ಎಸ್., ಪೂರ್ವೋಲ್ಲಿಖಿತ, ಪು.೧೫೯-೧೬೦; ಸುರೇಶ ಕೆ. ಎಂ. ಮತ್ತು ಇತರರು, ಪೂರ್ವೋಲ್ಲಿಖಿತ, ಪು. ೧೭-೧೮; ಬಾಲಸುಬ್ರಹ್ಮಣ್ಯ, (ಸಂ.), ಪೂರ್ವೋಲ್ಲಿಖಿತ, ಪು.೧೦೯-೧೧೩; ವಾಸುದೇವ ಬಡಿಗೇರ, ಪೂರ್ವೋಲ್ಲಿಖಿತ, ಪು. ೨೯೬-೨೯೭.

೯ ಕ.ವಿ.ವಿ. ಶಾ.ಸಂ. ೧ (ಬಳ್ಳಾರಿ ಜಿಲ್ಲೆ), ಬಳ್ಳಾರಿ ಶಾ.ಸಂ. ೧೦.

೧೦ ಪಾಟೀಲ ಸಿ. ಎಸ್., ಪೂರ್ವೋಲ್ಲಿಖಿತ, ಪು.೧೫೭-೧೫೯; ಸುರೇಶ ಕೆ. ಎಂ. ಮತ್ತು ಇತರರು, ಪೂರ್ವೋಲ್ಲಿಖಿತ, ಪು. ೧೮-೧೯; ಬಾಲಸುಬ್ರಹ್ಮಣ್ಯ (ಸಂ.), ಪೂರ್ವೋಲ್ಲಿಖಿತ, ಪು. ೧೦೩-೧೦೫; ವಾಸುದೇವ ಬಡಿಗೇರ, ಪೂರ್ವೋಲ್ಲಿಖಿತ, ಪು. ೨೯೭-೨೯೮.

೧೧ ಕ.ವಿ.ವಿ. ಶಾ. ಸಂ. ೧ (ಬಳ್ಳಾರಿ ಜಿಲ್ಲೆ), ಬಳ್ಳಾರಿ ಶಾ.ಸಂ.೮.

೧೨ ಸುರೇಶ ಕೆ. ಎಂ. ಮತ್ತು ಇತರರು, ಪೂರ್ವೋಲ್ಲಿಖಿತ, ಪು. ೨೩; ಬಾಲಸುಬ್ರಹ್ಮಣ್ಯ (ಸಂ.), ಪೂರ್ವೋಲ್ಲಿಖಿತ, ಪು. ೧೦೧-೧೦೩; ವಾಸುದೇವ ಬಡಿಗೇರ, ಪೂರ್ವೋಲ್ಲಿಖಿತ, ಪು. ೨೯೮.

೧೩ ಕ.ವಿ.ವಿ.ಶಾ.ಸಂ. ೧ (ಬಳ್ಳಾರಿ ಜಿಲ್ಲೆ), ಬಳ್ಳಾರಿ ಶಾ.ಸಂ. ೧೯.

೧೪ ಪಾಟೀಲ ಸಿ. ಎಸ್., ಪೂರ್ವೋಲ್ಲಿಖಿತ, ಪು.೧೬೩-೧೬೪; ಸುರೇಶ ಕೆ. ಎಂ. ಮತ್ತು ಇತರರು, ಪೂರ್ವೋಲ್ಲಿಖಿತ, ಪು. ೨೫-೨೬; ಬಾಲಸುಬ್ರಹ್ಮಣ್ಯ (ಸಂ.), ಪೂರ್ವೋಲ್ಲಿಖಿತ, ಪು. ೧೦೬-೧೦೯; ವಾಸುದೇವ ಬಡಿಗೇರ, ಪೂರ್ವೋಲ್ಲಿಖಿತ, ಪು. ೨೯೮-೨೯೯.

೧೫ ಕ.ವಿ.ವಿ. ಶಾ.ಶಂ. ೧ (ಬಳ್ಳಾರಿ ಜಿಲ್ಲೆ), ಬಳ್ಳಾರಿ ಶಾ.ಸಂ. ೧೦.

೧೬ ಪಾಟೀಲ ಸಿ. ಎಸ್., ಪೂರ್ವೋಲ್ಲಿಖಿತ, ಪು.೧೬೧-೧೬೨; ಸುರೇಶ ಕೆ. ಎಂ. ಮತ್ತು ಇತರರು, ಪೂರ್ವೋಲ್ಲಿಖಿತ, ಪು. ೨೧-೨೨; ವಾಸುದೇವ ಬಡಿಗೇರ, ಪೂರ್ವೋಲ್ಲಿಖಿತ, ಪು. ೨೮೫-೮೬; ಬಾಲಸುಬ್ರಹ್ಮಣ್ಯ (ಸಂ.), ಪೂರ್ವೋಲ್ಲಿಖಿತ, ಪು. ೧೧೩-೧೧೪.

೧೭ ಕ.ವಿ.ವಿ. ಶಾ.ಸಂ. ೧ (ಬಳ್ಳಾರಿ ಜಿಲ್ಲೆ), ಬಳ್ಳಾರಿ ಶಾ.ಸಂ. ೧೫.

೧೮ ಸುರೇಶ ಕೆ. ಎಂ. ಮತ್ತು ಇತರರು, ಪೂರ್ವೋಲ್ಲಿಖಿತ, ಪು. ೫೬; ವಾಸುದೇವ ಬಡಿಗೇರ, ಪೂರ್ವೋಲ್ಲಿಖಿತ, ಪು. ೨೮೬-೨೮೭.

೧೯ ಪಾಟೀಲ ಸಿ. ಎಸ್., ಪೂರ್ವೋಲ್ಲಿಖಿತ, ಪು.೧೭೯-೧೮೦; ಸುರೇಶ ಕೆ. ಎಂ. ಮತ್ತು ಇತರರು, ಪೂರ್ವೋಲ್ಲಿಖಿತ, ಪು. ೫-೬; ವಾಸುದೇವ ಬಡಿಗೇರ, ಪೂರ್ವೋಲ್ಲಿಖಿತ, ಪು. ೨೯೩.

೨೦ ಪಾಟೀಲ ಸಿ. ಎಸ್., ಪೂರ್ವೋಲ್ಲಿಖಿತ, ಪು.೧೭೮-೧೭೯; ಸುರೇಶ ಕೆ. ಎಂ. ಮತ್ತು ಇತರರು, ಪೂರ್ವೋಲ್ಲಿಖಿತ, ಪು. ೬-೭; ವಾಸುದೇವ ಬಡಿಗೇರ, ಪೂರ್ವೋಲ್ಲಿಖಿತ, ಪು. ೨೯೪.

೨೧ ಕ.ವಿ.ವಿ. ಶಾ.ಸಂ. ೧ (ಬಳ್ಳಾರಿ ಜಿಲ್ಲೆ), ಬಳ್ಳಾರಿ ಶಾ.ಸಂ. ೪೧.

೨೨ ಸುರೇಶ ಕೆ. ಎಂ. ಮತ್ತು ಇತರರು, ಪೂರ್ವೋಲ್ಲಿಖಿತ, ಪು. ೫೩-೫೪; ವಾಸುದೇವ ಬಡಿಗೇರ, ಪೂರ್ವೋಲ್ಲಿಖಿತ, ಪು. ೩೦೧-೩೦೨.

೨೩ ಕ.ವಿ.ವಿ. ಶಾ.ಸಂ. ೧ (ಬಳ್ಳಾರಿ ಜಿಲ್ಲೆ), ಬಳ್ಳಾರಿ ಶಾ.ಸಂ. ೬೧.

೨೪ ಪಾಟೀಲ ಸಿ. ಎಸ್., ಪೂರ್ವೋಲ್ಲಿಖಿತ, ಪು. ೧೪೯-೧೫೦; ವಾಸುದೇವ ಬಡಿಗೇರ, ಪೂರ್ವೋಲ್ಲಿಖಿತ, ಪು. ೩೦೦.

೨೫ ಕ.ವಿ.ವಿ. ಶಾ.ಸಂ. ೧ (ಬಳ್ಳಾರಿ ಜಿಲ್ಲೆ), ಬಳ್ಳಾರಿ ಶಾ.ಸಂ. ೩.

೨೬ ಪಾಟೀಲ ಸಿ. ಎಸ್., ಪೂರ್ವೋಲ್ಲಿಖಿತ, ಪು. ೧೩೧, ಮತ್ತು ಚಿತ್ರ ೧೮.

೨೭ ಎಸ್. ಐ.ಐ. ಸಂ. ೪, ಸಂ. ೨೬೦.

೨೮ ಕ.ವಿ.ವಿ. ಶಾಸನ ಸಂ. ೨ (ಕೊಪ್ಪಳ ಜಿಲ್ಲೆ), ಯಲಬುರ್ಗ, ಶಾ.ಸಂ. ೧೦.

೨೯ ಕ.ವಿ.ವಿ. ಶಾ.ಸಂ. ಸಂ. ೨ (ಕೊಪ್ಪಳ ಜಿಲ್ಲೆ), ಯಲಬುರ್ಗ, ಶಾ.ಸಂ. ೧೭.

# ಅಧ್ಯಾಯ - ೮

## ಸಮಾರೋಪ

ಪ್ರಾಚೀನ ಭಾರತದ, ವಿಶೇಷವಾಗಿ ಪ್ರಾಚೀನ ಕರ್ನಾಟಕದ ಆಡಳಿತ ಪದ್ದತಿಯಲ್ಲಿ ಒಂದು ಗಮನಾರ್ಹ ವಿಷಯವೆಂದರೆ, ಡಯಾರ್ಕಿ (Dyarchie) ಅಂದರೆ ದ್ವಿದಳ ರಾಜ್ಯ ಪದ್ದತಿ. ಈ ಪದವು ಸಾಮಾನ್ಯವಾಗಿ ಆಧುನಿಕ ರಾಜಕೀಯ ಸಿದ್ಧಾಂತಗಳಲ್ಲಿ ಬಳಸಲ್ಪಡುತ್ತದೆ. ಆದರೂ ಒಂದು ದೃಷ್ಟಿಯಿಂದ ಪ್ರಾಚೀನ ಕಾಲಕ್ಕೂ ಇದನ್ನು ಅನ್ವಯಿಸಬಹುದೆಂದು ನಮ್ಮ ಅಭಿಮತ. ಈ ಶಬ್ದದ ಆಧುನಿಕ ವ್ಯಾಖ್ಯೆ ಏನೇ ಇರಲಿ ತತ್ವಶಃ ಇದು ಒಂದೇ ಪ್ರದೇಶದಲ್ಲಿ ಸಮಾನಾಂತರ ಆಡಳಿತ ಪದ್ಧತಿಯನ್ನು ಸೂಚಿಸುತ್ತದೆ. ಅಂದರೆ ಒಂದು ರಾಜ್ಯದಲ್ಲಿ ಇಡೀ ಪ್ರದೇಶದ ತುಂಬ ರಾಜನ ಅಧಿಕಾರವೇ ಇದ್ದರೂ ಆ ಪ್ರದೇಶದ ಚಿಕ್ಕ ದೊಡ್ಡ ಭಾಗಗಳಲ್ಲಿ ಸಮಾನಾಂತರವಾಗಿ ಅಧಿಕಾರಿಗಳಿಂದ ಅಥವಾ ಸಾಮಂತರಿಂದ ಹೆಚ್ಚು ಕಡಿಮೆ ಸ್ವತಂತ್ರವಾಗಿ ಆಡಳಿತವು ನಡೆಸಲ್ಪಡುತ್ತಿತ್ತು. ಇದನ್ನೇ ಸಮಾನಾಂತರ ಅಥವಾ ದ್ವಿದಳ ಆಡಳಿತ ಪದ್ಧತಿ ಎಂದು ನಾವು ಕರೆದಿದ್ದೇವೆ.

ಈ ಸಾಮಂತರು ರಾಜರ ಅಧೀನರಾಗಿ ತಮ್ಮ ತಮ್ಮ ಪ್ರದೇಶಗಳಲ್ಲಿ ರಾಜನ ನಿಯಂತ್ರಣಕ್ಕೊಳಪಟ್ಟು ಸ್ಥಾನಿಕವಾಗಿ ಸ್ವತಂತ್ರವಾಗಿ ಆಡಳಿತ ನಡೆಸುತ್ತಿದ್ದರು. ಕರ್ನಾಟಕದ ಇತಿಹಾಸದಲ್ಲಿ ಆಗಿ ಹೋದ ಎಲ್ಲಾ ಸಾಮ್ರಾಜ್ಯಗಳಿಗೂ ಈ ಮಾತು ಅನ್ವಯಿಸುತ್ತದೆ.

ಹೀಗೆ ಆಡಳಿತ ನಡೆಸುತ್ತಿದ್ದವರು ಸಾಮಂತ, ಮಹಾಸಾಮಂತ, ಮಾಂಡಲಿಕ, ಮಂಡಲೇಶ್ವರ, ಮಹಾಮಂಡಲೇಶ್ವರ ಎಂದು ಮುಂತಾಗಿ ಕರೆಯಲ್ಪಡುತ್ತಿದ್ದರು. ಮಹಾಮಂಡಲೇಶ್ವರ, ಮಾಂಡಲಿಕ, ಸಾಮಂತ ಇವುಗಳಲ್ಲಿ ಅಧಿಕಾರದ ದೃಷ್ಟಿಯಿಂದ ಯಾರು ಹೆಚ್ಚಿನವರು, ಯಾರು ಕಡಿಮೆಯವರು ಎಂದು ನಿರ್ಧರಿಸಲು ಸಾಧ್ಯವಾಗುವದಿಲ್ಲ ಎಂಬ ನಮ್ಮ ಅಭಿಮತವನ್ನು ಒಂದನೇ ಅಧ್ಯಾಯದಲ್ಲಿ ವ್ಯಕ್ತಪಡಿಸಿದ್ದೇವೆ. ಆದರೆ ಕೆಲವು ವಿದ್ವಾಂಸರು ಮಾತ್ರ ಈ ಉಪಾಧಿಗಳಲ್ಲಿ ತಾರತಮ್ಯವನ್ನು ಗುರುತಿಸಿ ಒಂದು ರೀತಿಯ ಹಯರಾರ್ಕಿ (Hirearchy) ನಿರ್ಧರಿಸಲು ಯತ್ನಿಸಿದ್ದಾರೆ. (ಚನ್ನಬಸವಯ್ಯ ಹಿರೇಮಠ, ಕುರುಗೋಡಿನ ಸಿಂದರು ಒಂದು ಅಧ್ಯಯನ, ಪು.ಸಂ. ೧೨೮) ಆದರೆ ಇಂಥ ಅಭಿಪ್ರಾಯದಲ್ಲಿ ಒಂದು ಮುಖ್ಯ ತೊಡಕು ಎಂದರೆ, ನಮ್ಮ ಅನುಭವದ ಪ್ರಕಾರ ಬಹಳಷ್ಟು ಸಲ ಈ ಪದಗಳು ಸಮಾನಾರ್ಥವಾಗಿ

ಉಪಯೋಗಿಸಲ್ಪಟ್ಟಿವೆ. ಆದ್ದರಿಂದ ಇಂತಹ ಉಪಾಧಿಗಳು ಅವರವರ ಯೋಗ್ಯತೆ, ಪ್ರಭಾವ ಮತ್ತು ಅವರ ಅಧೀನ ಭೌಗೋಲಿಕ ವ್ಯಾಪ್ತಿಯನ್ನು ಅವಲಂಬಿಸಿರುತ್ತಿದ್ದವು ಎಂದು ಹೇಳಬಹುದು. ಹೀಗಾಗಿ ಈ ಉಪಾಧಿಗಳ ನಿಖರವಾದ ತಾರತಮ್ಯವನ್ನು ನಿರ್ಧರಿಸುವುದು ದುಸ್ತರ.

ಸಾಮಂತ ಮನೆತನಗಳ ಉಗಮ ಮತ್ತು ಆಳರಸರೊಡನೆ ಸಾಮಂತರಿಗೆ ಇರುತ್ತಿದ್ದ ಸಂಬಂಧ ಇವುಗಳನ್ನು ಮತ್ತು ಸಾಮ್ರಾಜ್ಯದ ದೃಷ್ಟಿಯಿಂದ ಸಾಮಂತ ಮನೆತನಗಳ ಅಭ್ಯಾಸದ ಮಹತ್ವವನ್ನು ಇಲ್ಲಿ ಚರ್ಚಿಸಲಾಗಿದೆ. ಸಾಮಂತ ಮನೆತನಗಳ ಉಗಮಕ್ಕೆ ಗುಪ್ತರ ಕಾಲದಿಂದ ಬ್ರಾಹ್ಮಣರಿಗೆ ಕೊಡುತ್ತಿದ್ದ ಭೂದಾನಗಳೇ ಕಾರಣ ಎಂಬ ಪ್ರಸಿದ್ಧ ವಿದ್ವಾಂಸರಾದ ದಿ. ಆರ್. ಎಸ್. ಶರ್ಮರವರ ಅಭಿಪ್ರಾಯವನ್ನು ಈ ಸಂದರ್ಭದಲ್ಲಿ ಪರಿಗಣಿಸಿ ಈ ಅಭಿಪ್ರಾಯ ಸಾಧುವಲ್ಲ. ಭೂದಾನಗಳಿಗೂ ಮಾಂಡಲಿಕತ್ವಕ್ಕೂ ಸಂಬಂಧವನ್ನು ಕಲ್ಪಿಸಲಾಗದು ಎಂಬ ನಮ್ಮ ವಿಚಾರವನ್ನು ವಿವರಿಸಿದ್ದೇವೆ.

ಸಾಮಂತ ಮನೆತನಗಳ ಇತಿಹಾಸದ ಅಭ್ಯಾಸವು ಕರ್ನಾಟಕದಲ್ಲಿ ಶಾಸನ ವಿದ್ಯೆಯ ಆದ್ಯ ಪ್ರವರ್ತಕರೆಂದು ಹೆಸರಾದ ಡಾ॥ ಜಾನ್ .ಫೇತ್‌ಫುಲ್. ಫ್ಲೀಟ್ ಅವರಿಂದ ಆರಂಭವಾಗಿ ಇಲ್ಲಿಯವರೆಗೆ ಹೇಗೆ ಮುಂದುವರಿದಿದೆ ಎಂಬ ಸಂಗತಿಯನ್ನು ಸ್ಥೂಲವಾಗಿ ವಿವರಿಸಿದ್ದೇವೆ. ಇಂಡಿಯನ್ ಅಂಟಿಕ್ವರಿ ಎಂಬ ನಿಯತಕಾಲಿಕೆಯ ಮೂಲಕ ಮತ್ತು ವಿಶೇಷವಾಗಿ ತಮ್ಮ ಡಯಾನಾಸ್ಟೀಸ್ ಆಫ್ ಕೆನರೀಸ್ ಡಿಸ್ಟ್ರಿಕ್ಟ್ (ಮುಂಬೈ ಗೆಝೆಟಿಯರನ ಸಂಪುಟ ೧, ಭಾಗ-೨) ಇದರ ಮುಖಾಂತರ ಅವರು ಅನೇಕ ಸಾಮಂತ ಮನೆತನಗಳನ್ನು ಗುರುತಿಸಿ. ಆಗಿನ ಕಾಲದಲ್ಲಿ ತಮಗೆ ದೊರೆತ ಮಾಹಿತಿ ಮೇಲೆ ಉತ್ಕೃಷ್ಟವಾದ ಟಿಪ್ಪಣೆಗಳನ್ನು ಬರೆದರು. ಇಂದು ಹೆಚ್ಚಿನ ಪೂರಕ ಮಾಹಿತಿಗಳು ದೊರೆತು ಇಂತಹ ಅಭ್ಯಾಸವನ್ನು ವಿಸ್ತರಿಸಲು ಶಕ್ಯವಾಗಿದೆ. ಆದರೂ ಫ್ಲೀಟ್‌ರವರ ಬರಹವೇ ಇಂದೂ ಸಹ ಮಾರ್ಗದರ್ಶಕವಾಗಿವೆ ಎಂಬುದರಲ್ಲಿ ಎರಡು ಮಾತಿಲ್ಲ. ಕರ್ನಾಟಕಕ್ಕೆ ಸಂಬಂಧಿಸಿದಂತೆ ಫ್ಲೀಟರ ನಂತರ "ಕದಂಬ ಕುಲ" ದ ಖ್ಯಾತಿಯ ಜಿ.ಎಮ್. ಮೊರೇಸ್ ಅವರೂ ಕೂಡ ಈ ಕ್ಷೇತ್ರದಲ್ಲಿ ಮಹತ್ವದ ಕೊಡುಗೆ ಕೊಟ್ಟಿದ್ದಾರೆ. "ಮಹಾಮಂಡಲೇಶ್ವರ್ಸ ಅಂಡರ್ ದಿ ಚಾಲುಕ್ಯಾಸ್ ಆಫ್ ಕಲ್ಯಾಣಿ" ಎಂಬ ದಿನಕರ ದೇಸಾಯಿ ಅವರ ಅಭ್ಯಾಸ ಪೂರ್ಣ ಗ್ರಂಥ, ಈ ವಿಷಯಕ್ಕೆ ನೇರವಾಗಿ ಸಂಬಂಧಿಸಿದ ಗ್ರಂಥವಾಗಿದೆ. ತದನಂತರದ ಕಾಲದಲ್ಲಿ ಡಾ॥ ಎ.ಎಸ್. ಆಳ್ತೆಕರ, ಡಾ॥ ಪಿ.ಬಿ. ದೇಸಾಯಿ. ಡಾ॥ ಶ್ರೀನಿವಾಸ ರಿತ್ತಿ, ಡಾ॥ ಬಿ.ಆರ್. ಗೋಪಾಲ ಇವರು ರಚಿಸಿದ ವಿಭಿನ್ನ ರಾಜಮನೆತನಗಳ ಇತಿಹಾಸಲದಲ್ಲಿ ಆಯಾ

ರಾಜಮನೆತನಗಳ ಕಾಲಕ್ಕೆ ಇದ್ದ ಸಾಮಂತ ಮನೆತನಗಳನ್ನು ಗುರುತಿಸಿ ವಿವರವಾದ ಮಾಹಿತಿಯನ್ನು ಕೊಟ್ಟಿದ್ದಾರೆ. ಡಾ॥ ಶ್ರೀಮತಿ ಝಕಿಯಾ ಅನ್ಸಾರಿ, ಡಾ॥ ಶ್ರೀಮತಿ ಬಾಲಾಂಬಾಳ್ ಇವರು ಕೆಲವು ಪ್ರಮುಖ ಸಾಮಂತ ಮನೆತನಗಳನ್ನು ಆರಿಸಿಕೊಂಡು ಅಭ್ಯಾಸ ಪೂರ್ಣ ಗ್ರಂಥ ರಚಿಸಿದ್ದಾರೆ. ತೀರಾ ಇತ್ತೀಚಿಗೆ ಡಾ॥ ಚನ್ನಬಸವಯ್ಯ ಹಿರೇಮಠ ಅವರು ಕುರುಗೋಡು ಸಿಂದರ ಗ್ರಂಥ ಹೊರ ತಂದಿದ್ದಾರೆ. ಇವೆಲ್ಲವುಗಳು ನಮ್ಮ ಅಭ್ಯಾಸಕ್ಕೆ ಮಹತ್ವದ ಆಕರಗಳಾಗಿದ್ದು, ಅವುಗಳನ್ನು ಪ್ರಬಂಧದಲ್ಲಿ ಸಂದರ್ಭಾನುಸಾರವಾಗಿ ವಿವರಿಸಲಾಗಿದೆ.

ಇಷ್ಟೆಲ್ಲ ಕೆಲಸವಾಗಿದ್ದರೂ ಈಗ ನಾವು ಈ ಕಾರ್ಯವನ್ನು ಕೈಕೊಂಡಿದ್ದು ಏಕೆ ಎಂಬ ಪ್ರಶ್ನೆ ಬರಬಹುದು, ಇದಕ್ಕೆ ಉತ್ತರವೆಂದರೆ ಸಂಶೋಧನೆಗೆ, ಕೊನೆ ಎಂಬುದೇ ಇಲ್ಲ. ಕಾಲಕಾಲಕ್ಕೆ ಶಾಸನಗಳೆಂಬ ಸಂಶೋಧನ ಸಾಮಗ್ರಿ ದೊರೆಯುತ್ತಲೇ ಇರುತ್ತವೆ. ಅದೂ ಅಲ್ಲದೆ ಹೊಸ ವಿಚಾರಗಳು, ಹೊಸ ಅರ್ಥವಿವರಣೆ ಇವು ಕೂಡಾ ಎಷ್ಟೋ ಹಳೆಯ ಸಿದ್ಧಾಂತಗಳನ್ನು ಪರಿಶೀಲಿಸುವಂತೆ ಮಾಡುತ್ತವೆ. ಹೀಗಾಗಿ ಸಂಶೋಧನೆ ಒಂದು ನಿರಂತರ ಪ್ರಕ್ರಿಯೆ. ಈ ದೃಷ್ಟಿಯಿಂದ ಈ ವಿಷಯಗಳಿಗೆ ಪ್ರಸ್ತುತ ಪ್ರಬಂಧಕ್ಕೆ ಈ ವಿಷಯವನ್ನು ಆರಿಸಿಕೊಳ್ಳಲಾಗಿದೆ.

ಈ ವಿಷಯವನ್ನು ಆರಿಸಿಕೊಳ್ಳುವಾಗ ವಿಷಯ ವ್ಯಾಪ್ತಿಯ ಬಗ್ಗೆ ಸ್ಥೂಲ ಕಲ್ಪನೆ ಇತ್ತಾದರೂ ಕೆಲಸ ಮಾಡುತ್ತ ಹೋದಂತೆ ವಿಚಾರಗಳು ಹೆಚ್ಚು ಸ್ಫುಟವಾಗತೊಡಗಿ ಒಂದು ರೀತಿಯಿಂದ ಕಠಿಣ ಪರಿಸ್ಥಿತಿಯನ್ನು ಎದುರಿಸುವ ಪ್ರಸಂಗ ಬಂದಿತೆಂದು ಹೇಳಬಹುದು. ಸದ್ಯದ ವಿಷಯದ ಅಭ್ಯಾಸಕ್ಕೆ ಮುಖ್ಯವಾದ ತೊಡಕೆಂದರೆ ಸಾಧನ ಸಾಮಗ್ರಿಗಳ ಕೊರತೆ ಮತ್ತು ಲಭ್ಯವಿದ್ದ ಸಾಮಗ್ರಿಗಳ ಅಸ್ಪಷ್ಟತೆ. ಈ ಅಭ್ಯಾಸಕ್ಕೆ ಮುಖ್ಯವಾದ ಸಾಧನೆಗಳೆಂದರೆ ಶಾಸನಗಳು. ಈ ಸಿಂದ ಮನೆತನಗಳಿಗೆ ಸೇರಿದ ನೂರಾರು ಶಾಸನಗಳು ಲಭ್ಯವಿವೆ. ಆದರೂ ಬಹಳಷ್ಟು ಸುಸ್ಥಿತಿಯಲ್ಲಿರಲಿಲ್ಲ. ಎಷ್ಟೋ ಶಾಸನಗಳು ಒಡೆದು ಹೋಗಿದ್ದು, ಅಥವಾ ಸವೆದು ಹೋಗಿದ್ದು, ಪೂರ್ಣ ಮಾಹಿತಿ ದೊರೆಯದೇ ಎಷ್ಟೋ ಸಲ ಹತಾಶವಾಗಿದ್ದೇವೆ. ಆದರೂ ಲಭ್ಯವಿದ್ದ ಹಳೆಯ ಮತ್ತು ಹೊಸ ಶಾಸನಗಳನ್ನು ಸಾಧ್ಯವಿದ್ದಷ್ಟು ಕೂಲಂಕಷವಾಗಿ ಪರಿಶೀಲಿಸಿ ಈ ಪ್ರಬಂಧವನ್ನು ಪ್ರಸ್ತುತ ಪಡಿಸಲು ಯತ್ನಿಸಲಾಗಿದೆ. ಇದೇ ಸಂದರ್ಭದಲ್ಲಿ ಈ ಶಾಸನ ಸಾಮಗ್ರಿಯ ಅಭ್ಯಾಸವು ನಡೆದು ಬಂದ ಬಗೆಯನ್ನು ಸ್ಥೂಲವಾಗಿ ವಿವರಿಸಲಾಗಿದೆ. ಅಲ್ಲದೇ ನಾವು ಅಭ್ಯಾಸಕ್ಕಾಗಿ ಆರಿಸಿಕೊಂಡ ಸಿಂದ ಮನೆತನಗಳ ಪ್ರಮುಖ ಶಾಸನಗಳ ಸಮೀಕ್ಷೆಯನ್ನೂ ಇಲ್ಲಿ ಮಾಡಲಾಗಿದೆ.

ಶಾಸನಗಳಿಗಾಗಿ ನಮಗೆ ದೊರೆಯುವ ಆಕರ ಗ್ರಂಥಗಳೆಂದರೆ ಪ್ರಮುಖ ಶಾಸನ ಗ್ರಂಥಗಳು. ಎಪಿಗ್ರಾಫಿಯಾ ಇಂಡಿಕಾ, ಎಪಿಗ್ರಾಫಿಯಾ ಕರ್ನಾಟಕಾ, ಸೌಥ್ ಇಂಡಿಯನ ಇನ್ಸಸ್ಕ್ರಿಪ್ಷನ್ಸ, ಕರ್ನಾಟಕ ವಿ.ವಿದ್ಯಾಲಯದ ಕನ್ನಡ ಸಂಶೋಧನ ಸಂಸ್ಥೆ ಪ್ರಕಟಸಿದ ಕರ್ನಾಟಕ ಇನ್ಸಸ್ಕ್ರಿಪ್ಷನ್ಸ ಎಂಬ ಸಂಪುಟಗಳು, ಹಂಪಿ ಕನ್ನಡ ವಿಶ್ವವಿದ್ಯಾಲಯದ ಜಿಲ್ಲಾವಾರು ಶಾಸನ ಸಂಪುಟಗಳು ಅಲ್ಲದೆ ವೈಯಕ್ತಿಕ ಡಾ : ಶ್ರೀನಿವಾಸ ರಿತ್ತಿಯವರ ಪ್ರಕಟಣೆಗಳಾದ ಇನ್ಸಸ್ಕ್ರಿಪ್ಷನ್ಸ ಫ್ರಾಮ್ ನಾಂದೇಡ ಡಿಸ್ಟ್ರಿಕ್ಟ, ಇನ್ಸಸ್ಕ್ರಿಪ್ಷನ್ಸ ಫ್ರಾಮ್ ಸೊಲ್ಲಾಪೂರ ಡಿಸ್ಟ್ರಿಕ್ಟ, ಇನ್ಸಸ್ಕ್ರಿಪ್ಷನ್ಸ ಫ್ರಾಮ್ ಕೊಲ್ಹಾಪೂರ ಡಿಸ್ಟ್ರಿಕ್ಟ ಎಂಬ ಸಂಪುಟಗಳು ಮಹತ್ವದಾಗಿವೆ. ಇವೂ ಅಲ್ಲದೆ ಭಾರತೀಯ ಪುರಾತತ್ವ ಸರ್ವೆಕ್ಷಣ ಇಲಾಖೆ ಶಾಸನ ವಿಭಾಗದವರು ಕಾಲ ಕಾಲಕ್ಕೆ ಪ್ರಕಟಿಸುತ್ತಿರುವ ಎನ್ಯೂವಲ್ ರಿಪೋರ್ಟ್ಸ ಆಫ ಇಂಡಿಯನ್ ಎಪಿಗ್ರಾಫಿ ಎಂಬ ಪ್ರಕಟಣೆಗಳು ಮಹತ್ವದಾಗಿವೆ. ಇದು ಅಲ್ಲದೆ ಕರ್ನಾಟಕ ವಿಶ್ವವಿದ್ಯಾಲಯವು ಪ್ರಕಟಿಸಿದ ನಿಯತ ಕಾಲಿಕೆಗಳು, ಮೈಸೂರು ವಿಶ್ವವಿದ್ಯಾಲಯದ, ಕನ್ನಡ ವಿಭಾಗದ ಪ್ರಬುದ್ಧ ಕರ್ನಾಟಕ, ಮಾನವೀಕ ಕರ್ಣಾಟಕ ಎಂಬ ನಿಯತ ಕಾಲಿಕೆಗಳು, ಕರ್ನಾಟಕ ಇತಿಹಾಸ ಅಕಾಡೆಮಿಯ ಇತಿಹಾಸ ದರ್ಶನ ಎಂಬ ನಿಯತ ಕಾಲಿಕೆಗಳು, ಇವಲ್ಲ ಉಪಯುಕ್ತ ಮಾಹಿತಿ ಒದಗಿಸುತ್ತವೆ. ಇಲ್ಲಿ ಅಭ್ಯಾಸಕ್ಕೆ ಆರಿಸಿಕೊಳ್ಳಲಾದ ಆರು ಸಿಂದ ಮನೆತನಗಳಲ್ಲಿ, ಅಟ್ಟಳೆ ನಾಡಿನ ಸಿಂದ ಮನೆತನದ ಅಭ್ಯಾಸ ನಮ್ಮ ಇತಿಹಾಸಕ್ಕೆ ಹೊಸದು. ಇತ್ತೀಚಿನ ಕಾಲದಲ್ಲಿ ಬೀದರ ಜಿಲ್ಲೆಯಲ್ಲಿ ದೊರೆತ ಕೆಲವು ಶಾಸನಗಳನ್ನು ಆಧರಿಸಿ ಆ ಮನೆತನದ ಬಗ್ಗೆ ಸಿಕ್ಕಷ್ಟು ಮಾಹಿತಿಯನ್ನು ಒದಗಿಸಲಾಗಿದೆ. ಈ ದಿಶೆಯಲ್ಲಿ ಆ ಪ್ರದೇಶದ ಹುಮ್ನಾಬಾದಿನ ದಿ. ಡಾ॥ ವಿ.ಎಸ್. ಕುಲಕರ್ಣಿಯವರ ಕಾರ್ಯವನ್ನು ನೆನೆಯುವದು ಅಗತ್ಯ. ಬಹಳ ಪರಿಶ್ರಮಪಟ್ಟು ತಮ್ಮ ಭಾಗದಲ್ಲಿಯ ನೂರಾರು ಶಾಸನಗಳನ್ನು ಸಂಗ್ರಹಿಸಿ, ವ್ಯವಸ್ಥಿತವಾಗಿ ಅಭ್ಯಸಿಸಿ ತಮ್ಮ ಮಹಾಪ್ರಬಂಧವಾದ "ಹಿಸ್ಟಾರಿಕಲ್ ಅ್ಯಂಡ್ ಕಲ್ಚರಲ್ ಸ್ಟಡೀಸ್ ಆಫ್ ದಿ ರೀಜನ್ ಅರೌಂಡ್ ಬಸವ ಕಲ್ಯಾಣ" ಎಂಬ ಪ್ರಬಂಧವನ್ನು ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿ ಡಾಕ್ಟರೇಟ್ ಪದವಿ ಪಡೆದಿದ್ದಾರೆ. ದುರ್ದೈವದಿಂದ ಅವರ ಅಕಾಲ ಮರಣದಿಂದಾಗಿ ಪ್ರಬಂಧವು ಪ್ರಕಟಗೊಂಡಿಲ್ಲ. ಇಲ್ಲೆ ಅವರು ಸಂಗ್ರಹಸಿಲಾದ ರಂಜೇರು ಮತ್ತು ಸುತ್ತಲಿನ ಪ್ರದೇಶದ ಶಾಸನಗಳು ನಮಗೆ ಮೂಲ ಸಾಮಗ್ರಿಯನ್ನು ಒದಗಿಸಿವೆ. ಈ ಪ್ರಬಂಧವು ನಮಗೆ ಆಕಸ್ಮಿಕವಾಗಿಯಾದರೂ ಅಭ್ಯಾಸಕ್ಕೆ ದೊರೆಯಿತು. ದಿ. ಕುಲಕರ್ಣಿಯವರಿಗೆ ನಮ್ಮ ಕೃತಜ್ಞತೆಗಳು.

ಹಾಗೆ ನೋಡಿದರೆ ಸಾಮಂತ ಮನೆತನಗಳು ಸ್ವತಂತ್ರವಾಗಿ ಆಳಿದ ಮನೆತನಗಳಲ್ಲ, ದೊಡ್ಡ ಸಾಮ್ರಾಜ್ಯದ ಅಧೀನವಷ್ಟೇ. ಆದರೆ ಆ ಸಾಮ್ರಾಜ್ಯಗಳ ಬೆಳವಣಿಗೆಗೆ ಅದೇ ಆಧಾರ ಸ್ಥಂಭಗಳಿದಂತೆ. ಆಳರಸರು ಎಷ್ಟೇ ಬಲಶಾಲಿಗಳಾಗಿದ್ದರೂ ವಿಶಾಲವಾದ ಸಾಮ್ರಾಜ್ಯದ ರಕ್ಷಣೆಯ ಭಾರವನ್ನು ಹೊತ್ತವರು ಈ ಸಾಮಂತರು. ಯಾವುದೇ ರಾಜ್ಯದ ಸರ್ವತೋಮುಖ ಬೆಳವಣಿಗೆಗೆ ಸಾಮಂತರ ಕೊಡುಗೆಯೇ ಮೂಲ ಆಧಾರ. ಹೀಗಿದ್ದರೂ ಅವರು ಅಧೀನ ಸ್ಥಾನದಲ್ಲಿ ಮಾತ್ರವಿದ್ದುದ್ದರಿಂದ ಆಯಾ ಕಾಲದ ಆಳರಸರು ಯಾರು, ಅವರ ಮನೆತನಗಳು ಯಾವವು ಎಂದು ಮುಂತಾದವುಗಳ ವಿಷಯಗಳನ್ನು ಪ್ರಸ್ತುತ ಅಭ್ಯಾಸಕಾಲದ ರಾಜಕೀಯ ಸ್ಥಿತಿಗತಿಗಳು ಎಂಬ ಎರಡನೆಯ ಅಧ್ಯಾಯದಲ್ಲಿ ವಿವರಿಸಲಾಗಿದೆ.

ಸಿಂದರ ಉಗಮದ ಬಗ್ಗೆ ಹಲವು ಚರ್ಚೆಗಳಾಗಿವೆ. ಈ ಪ್ರಬಂಧದಲ್ಲಿ ಸ್ಥೂಲವಾಗಿ ನಾವು ಇದನ್ನು ಪ್ರಸ್ತಾಪಿಸಿದ್ದೇವೆ. ಆರೂ ಸಿಂದ ಮನೆತನಗಳು ಹೆಚ್ಚು ಕಡಿಮೆ ಕಲ್ಯಾಣ ಚಾಲುಕ್ಯರ ಸಮಕಾಲಿನರೆಂದು ಹೇಳಬಹುದು. ಈ ಮನೆತನದ ಅಯಾ ಕಾಲದ ಅರಸರಿಗೆ ಇವರು ಹೇಗೆ ಬೆಂಬಲಿಗರಾಗಿದ್ದರು ರಾಜಕೀಯ ಏರುಪೇರುಗಳಿಂದ ಅವರ ಸ್ಥಾನಗಳಲ್ಲಿ ಏನು ಏರುಪೇರುಗಳಾದವು ಎಂಬುದನ್ನು ಕಾಣಬಹುದಾಗಿದೆ.

ಸಿಂದ ಮನೆತನಗಳು ಹೇಗೆ ಅಸ್ತಿತ್ವಕ್ಕೆ ಬಂದವು ಮತ್ತು ಯಾವ ಕಾಲಕ್ಕೆ ಬಂದವು ಎಂಬ ವಿಷಯವನ್ನು ಸಿಂದ ವಂಶದ ಉಗಮ ಮತ್ತು ಉಗಮದ ಕಾಲ ಎಂಬ ಮೂರನೆಯ ಅಧ್ಯಾಯದಲ್ಲಿ ವಿವರಿಸಿದ್ದೇವೆ. ನಾವು ತೋರಿಸಿದಂತೆ ಸಿಂದರ ಮೂಲವನ್ನು ಪೌರಾಣಿಕ ಯುಗಕ್ಕೆ ಕೊಂಡೊಯ್ಯುವ ಪ್ರಯತ್ನವಿದಾಗಿದೆ. ಆದರೆ ಇತಿಹಾಸದ ದೃಷ್ಟಿಯಿಂದ ಇದು ಸಮಂಜಸವೆನಿಸುವದಿಲ್ಲ. ಅವರು ಸುಮಾರು ಹತ್ತನೇ ಶತಮಾನದಿಂದ ಪ್ರವರ್ಧಮಾನಕ್ಕೆ ಬಂದರು ಎಂದು ಈ ಅಧ್ಯಾಯದಲ್ಲಿ ಹೇಳಿದ್ದೇವೆ. ಈ ಹಿಂದೆ ನೋಡಿದಂತೆ. ಈ ವಂಶದ ಕಥೆ ನಿಡುದೋಳ ಸಿಂಧ ಎಂಬ ವ್ಯಕ್ತಿಯಿಂದ ಆರಂಭವಾಗುತ್ತದೆ. ಸಾಕ್ಷಾತ್ ಶಿವ, ಸಿಂದು ಇವರಿಗೆ ಇವನು ಹುಟ್ಟಿದನೆಂಬ ಐತಿಹ್ಯವು ಶಾಸನಗಳಲ್ಲಿ ನಮೂದಿತವಾಗಿದೆ. ಅಲ್ಲದೆ ಇವನು ಮಯೂರಶರ್ಮನ ಮಗಳನ್ನು ಮದುವೆ ಆದನೆಂಬ ಕಥೆಯೂ ಶಾಸನಗಳಲ್ಲಿ ವರ್ಣಿತವಾಗಿದೆ. ಕೆಲ ವಿದ್ವಾಂಸರು ಇವನೇ ಸಿಂದ ವಂಶದ ಮೂಲ ಪುರುಷನೆಂದು ಈ ಐತಿಹ್ಯಕ್ಕೆ ಐತಿಹಾಸಿಕ ಸ್ವರೂಪ ಕೊಡಲು ಯತ್ನಿಸಿದ್ದಾರೆ ಆದರೆ ಮನೆತನಗಳಿಗೂ ಕರಹಾಟಕ್ಕೂ ಸಂಬಂಧವಿದ್ದು ಮೂಲ ಸಿಂದ ಮನೆತನ ಅಲ್ಲಿಯೇ ಇದ್ದು ಅಲ್ಲಿಂದ ಟಿಸಿಲು ಒಡೆದು ಬೇರೆ ಬೇರೆ ಮನೆತನಗಳಾಗಿ ಆಡಳಿತದಲ್ಲಿದ್ದರು ಎಂಬುದು ನಮ್ಮ ಊಹೆ ಆಗಿದೆ. ಸಿಂದ ಆಳಿಕೆಯಿಂದ ಅವರ

ಪ್ರದೇಶಕ್ಕೆ ಸಿಂದವಾಡಿ ಎಂಬ ಹೆಸರು ಬಂದಿತೆಂಬುದು ಸರಿಯಲ್ಲ. ಸಿಂದವಾಡಿ ಎಂಬುದು ಸಿಂದರು ಅಧಿಕಾರಕ್ಕೆ ಬರುವ ಮೊದಲೇ ಅಸ್ತಿತ್ವದಲ್ಲಿದ್ದು, ಆ ಪ್ರದೇಶವನ್ನು ಬಹುಕಾಲ ನೊಳಂಬ ಪಲ್ಲವರೆಂಬ ಮಾಂಡಲಿಕರು ಆಳುತ್ತಿದ್ದರು. ಸಿಂದವಾಡಿಯೂ ಹೆಚ್ಚಾಗಿ ಬಳ್ಳಾರಿ ಪ್ರದೇಶಕ್ಕೆ ಸೀಮಿತವಾಗಿತ್ತು ಎಂಬುದನ್ನು ತೋರಿಸಿದ್ದೇವೆ.

ಸಿಂದ ಮನೆತನಗಳ ರಾಜಕೀಯ ಚರಿತ್ರೆ ಎಂಬ ನಾಲ್ಕನೆಯ ಅಧ್ಯಾಯವು ಪ್ರಸ್ತುತ ಪ್ರಬಂಧದ ಮುಖ್ಯಭಾಗ. ಇಲ್ಲಿ ಶಾಸನಗಳ ಆಧಾರದ ಮೇಲಿಂದ ಈ ಬೇರೆ ಬೇರೆ ಮನೆತನಗಳಲ್ಲಿ ಆಳಿದ ವ್ಯಕ್ತಿಗಳ ಹೆಸರುಗಳನ್ನು ಅವರ ವಂಶಾವಳಿಯನ್ನು ಮತ್ತು ಕಾಲಾನುಕ್ರಮವನ್ನು ನಿರ್ಧರಿಸಲು ಯತ್ನಿಸಿದ್ದೇವೆ. ಪ್ರಮುಖ ತೊಡಕು ಎದುರಾದುದು ಇಲ್ಲಿಯೇ. ಬೇರೆ ಬೇರೆ ಶಾಸನಗಳಲ್ಲಿಯ ವಿಭಿನ್ನ ಹೇಳಿಕೆಗಳು, ಅಸ್ಪಷ್ಟವಾದ ಹೆಸರುಗಳು, ಎಷ್ಟೋ ಶಾಸನಗಳಲ್ಲಿ ತೇದಿಗಳು ಇಲ್ಲದಿರುವಿಕೆ ಅಥವಾ ಅವು ಅಸಮಂಜಸವಾಗಿರುವವು ಹೀಗಾಗಿ ಇವೆಲ್ಲವುಗಳಿಂದ ಒಂದು ಸ್ಪಷ್ಟ ಚಿತ್ರಣ ಕೊಡಲು ಸಾಧ್ಯವಾಗಿಲ್ಲ. ಈ ವಿಭಿನ್ನ ಮನೆತನಗಳಲ್ಲಿಯ ಸಾಮಂತರು ತಮ್ಮ ತಮ್ಮ ಪ್ರಭಾವದಿಂದ ಸಮಕಾಲೀನ ರಾಜಕೀಯ ಇತಿಹಾಸದಲ್ಲಿ ತಮ್ಮ ತಮ್ಮ ಪಾತ್ರ ವಹಿಸಿದರು. ವಿಶೇಷವಾಗಿ ಬೆಳಗುತ್ತಿ ಸಿಂದರು ಮತ್ತು ಯಲಬುರ್ಗಿ ಸಿಂದರು ಆಳರಸರ ಬೆಂಬಲಕ್ಕೆ ನಿಂತು ರಾಜ್ಯ ರಕ್ಷಣೆ ಮತ್ತು ರಾಜ್ಯ ವಿಸ್ತರಣೆಗೆ ಕಾಲಕ್ಕೆ ನೆರವಾದರು. ಸಮಕಾಲಿನ ರಾಜಕೀಯ ಸ್ಥಿತಿಗತಿಗಳು ಅಷ್ಟೊಂದು ಶಾಂತವಾಗಿರಲಿಲ್ಲ, ಗೋವೆಯ ಕದಂಬರು, ಪಾಂಡ್ಯರು ಮುಂತಾದ ಚಿಕ್ಕ ಪುಟ್ಟ ಸಾಮಂತರ ಕಿರುಕುಳ ಇದ್ದೇ ಇರುತ್ತಿತ್ತು ಇವುಗಳನ್ನು ಸದೆಬಡೆಯುವುದು ಸಿಂದರ ಮುಖ್ಯ ಕಾರ್ಯವಾಗಿತ್ತು. ಚಾಲುಕ್ಯ ವಿಕ್ರಮಾದಿತ್ಯನ ಆಳಿಕೆಯಲ್ಲಿ ಹೊಯ್ಸಳರ ಉಪಟಳವೊಂದು ಪ್ರಮುಖ ಘಟನೆಯಾಗಿತ್ತು. ಹೊಯ್ಸಳರು ಚಾಲುಕ್ಯರ ಅಧೀನರಾಗಿದ್ದರೂ ಆ ಮನೆತನದ ಮಹತ್ವಾಂಕ್ಷಿಯಾದ ವಿಷ್ಣುವರ್ಧನ ಹೆಚ್ಚು ಹೆಚ್ಚು ಅಧಿಕಾರ ಪಡೆಯಲು ಹವಣಿಸುತ್ತಿದ್ದನು. ಮೇಲಿಂದ ಮೇಲೆ ರಾಜ್ಯದ ಮೇಲೆ ದಾಳಿ ಮಾಡುತ್ತಿದ್ದನು ಇವೆಲ್ಲವುಗಳನ್ನು ಸದೆಬಡೆಯುವ ಕಾರ್ಯವನ್ನು ಸಿಂದರು ಸಮರ್ಥವಾಗಿ ನಿರ್ವಹಿಸಿದರು. ಆ ಕಾಲದ ಇನ್ನೊಂದು ಪ್ರಮುಖ ಘಟನೆ ಎಂದರೆ ಕಳಚುರಿಗಳ ಅಟ್ಟಹಾಸ, ಚಾಲುಕ್ಯ ವಂಶದೊಡನೆ ರಕ್ತ ಸಂಬಂಧವನ್ನು ಹೊಂದಿದ್ದ ಬಹು ಮಹತ್ವಾಂಕ್ಷಿಯಾದ ೨ನೇ ಬಿಜ್ಜಳನು ಆ ರಾಜ್ಯದ ಏಳ್ಗೆಗೆ ನಿಜವಾದ ತೊಡಕಾದನು. ಮೊದ ಮೊದಲು ಸಾಮಂತನಾಗಿ ಮಂಗವೇಢೆ ಪ್ರದೇಶದಲ್ಲಿ ಅಧಿಕಾರದಲ್ಲಿದ್ದುಕೊಂಡು ರಾಜಧಾನಿ ಕಲ್ಯಾಣದ ಮೇಲೆ ಕಣ್ಣಿಟ್ಟನು. ಈ ವೇಳೆಗೆ ಸಮರ್ಥನಾದ ೬ನೇ ವಿಕ್ರಮಾದಿತ್ಯನ ಕಾಲ ಮುಗಿದು ಸಾಮ್ರಾಜ್ಯದ ಮೇಲಿನ ಹಿಡಿತ

ಸಡಿಲವಾಗತೊಡಗಿತ್ತು. ಬಿಜ್ಜಳನ್ನು ಈ ಸಂಧಿಯನ್ನು ಸಾಧಿಸಿ ಚಾಲುಕ್ಯ ೩ನೇ ತೈಲನನ್ನು ಸೋಲಿಸಿ ಕಲ್ಯಾಣವನ್ನು ಆಕ್ರಮಿಸಿ ಸಾಮ್ರಾಜ್ಯದ ಮೇಲೆ ಅಧಿಪತ್ಯವನ್ನು ವಹಿಸಿಕೊಂಡನು. ಇದು ಸಿಂದರಿಗೆ ನುಂಗಲಾರದ ತುತ್ತಾಯಿತು. ಅವರು ಸಾಂಪ್ರದಾಯಿಕವಾಗಿ ಚಾಲುಕ್ಯರ ಕಟ್ಟಾ ನಂಬಿಗಸ್ಥ ಸಾಮಂತರಾಗಿದ್ದರು. ಮೊದಮೊದಲು ಬಿಜ್ಜಳನ ವಿರುದ್ಧ ಅವರಿಗೆ ಬೆಂಬಲಿಗರಾಗಿ ನಿಲ್ಲುವುದು ಸಾಧ್ಯವಾಯಿತಾದರೂ. ಕೊನೆಗೆ ಬಿಜ್ಜಳ ಮತ್ತು ಅವನ ನಂತರ ಬಂದ ಸಂಕಮನ ಅಧಿಪತ್ಯವನ್ನು ಒಪ್ಪಿಕೊಳ್ಳಬೇಕಾಯಿತು. ಕಳಚುರಿಗಳ ಆಧಿಪತ್ಯ ಬಹುಕಾಲ ಬಾಳಲಿಲ್ಲ. ಆರಂಭಗೊಂಡ ೨೦ ವರ್ಷಗಳಲ್ಲಿಯೇ ಅದು ಮುಕ್ತಾಯ ಕಂಡಿತು. ಚಾಲುಕ್ಯ ೪ನೇ ಸೊಮೇಶ್ವರನು ಕಳಚುರಿ ಆಳ್ವಿಕೆಯನ್ನು ಮುಗಿಸಲು ಸಮರ್ಥನಾದರೂ ಹೆಚ್ಚುಕಾಲ ಅಧಿಕಾರದಲ್ಲಿ ಉಳಿಯಲಿಲ್ಲ. ಆದರೂ ಸ್ವಾಮಿಭಕ್ತರಾದ ಸಿಂದರು ಮತ್ತೆ ಅವನನ್ನು ಕೂಡಿಕೊಂಡರು.

ಇತ್ತ ಹೊಯ್ಸಳರ ಆಕ್ರಮಣಕಾರಿ ಚಟುವಟಿಕೆಗಳು ಹೆಚ್ಚಾದವು. ಚಾಲುಕ್ಯರ ನಿಷ್ಠಾವಂತ ಬೆಂಬಲಿಗರಾದ ಬೆಳಗುತ್ತಿ ಸಿಂದರು ಅವರ ಕಂಗಣ್ಣಿಗೆ ಗುರಿಯಾದರು. ಈಗ ಅಧಿಕಾರಕ್ಕೆ ಬಂದ ೨ನೇ ಬಲ್ಲಾಳನು ನಿರಂತರವಾಗಿ ಈ ಪ್ರದೇಶದ ಮೇಲೆ ದಾಳಿ ಮಾಡಿದನು. ಅವನ ರಾಣಿಯಾದ ಉಮಾದೇವಿಯೂ ಬೆಳಗುತ್ತಿ ಪ್ರದೇಶದ ಮೇಲೆ ಮಾಡಿದ ದಾಳಿಗಳಲ್ಲಿ ಅನೇಕ ವೀರರು ಮರಣ ಹೊಂದಿದ ದಾಖಲೆಗಳು ಆ ಪ್ರದೇಶದ ವೀರಗಲ್ಲುಗಳಲ್ಲಿ ದೊರೆಯುತ್ತವೆ.

ಈ ಕಾಲದ ಇನ್ನೊಂದು ಪ್ರಮುಖ ಘಟನೆಯೆಂದರೆ, ಮೊದಲಿನ ಚಾಲುಕ್ಯ ಸಾಮ್ರಾಜ್ಯದ ಉತ್ತರ ಭಾಗದಲ್ಲಿ ಅವರ ಮಾಂಡಲಿಕರಾಗಿದ್ದ ಸೇವುಣರ ಏಳ್ಗೆಗೆ ಕಳಚುರಿ ಬಿಜ್ಜಳನು ಚಾಲುಕ್ಯ ಸಾಮ್ರಾಜ್ಯಕ್ಕೆ ಉಂಟುಮಾಡಿದ ಆಘಾತ. ಇತ್ತ ಹೊಯ್ಸಳ ಬಲ್ಲಾಳನು ಉತ್ತೇಜಿತನಾದಂತೆ ಅತ್ತ ಸೇವಣರೂ ಜಾಗ್ರತಗೊಂಡರು. ಚಾಲುಕ್ಯ ಸಾಮ್ರಾಜ್ಯಕ್ಕೆ ಎರಡೂ ಕಡೆಗಳಿಂದ ಒತ್ತಡ ಉಂಟಾಯಿತು, ಹೀಗಾಗಿ ಕೊನೆಗೆ ಚಾಲುಕ್ಯ ೪ನೇ ಸೊಮೇಶ್ವರನು ಕಲ್ಯಾಣವನ್ನು ಬಿಟ್ಟು ಹೋಗುವಂತಾಯಿತು. ಸಿಂದ ಮನೆತನಗಳಿಗೆ ಇದು ಸಂದಿಗ್ಧ ಪರಿಸ್ಥಿತಿ. ಬೆಳಗುತ್ತಿ ಸಿಂದರು ಕೊನೆಗೂ ಹೊಯ್ಸಳ ಬಲ್ಲಾಳನ ಅಧಿಕಾರವನ್ನು ಒಪ್ಪಿಕೊಂಡರು. ಯಲಬುರ್ಗಿ ಸಿಂದರು ಸೇವುಣರ ಅಧೀನಕೊಳಗಾಗಬೇಕಾಯಿತು. ಈಗ ರಾಜಕೀಯ ಕ್ಷೇತ್ರದಲ್ಲಿ ಇಬ್ಬರು ಎದುರಾಳಿಗಳು ಉಳಿದುಕೊಂಡರು. ಅವರು ಸೇವುಣ ಭಿಲ್ಲಮ ಹಾಗೂ ಹೊಯ್ಸಳ ಬಲ್ಲಾಳ. ಚಾಲುಕ್ಯ ಸಾಮ್ರಾಜ್ಯದ ಹೃದಯ ಭಾಗದಲ್ಲಿ ಅಂದರೆ ಬೆಳ್ವೊಲ ಪ್ರದೇಶದಲ್ಲಿ ಎರಡೂ ಎದುರಾಳಿಗಳು ನಿರಂತರವಾಗಿ ಹೋರಾಡಿ ಕೊನೆ ಕೊನೆಗೆ ಚಾಲುಕ್ಯ ಸಾಮ್ರಾಜ್ಯ ವಿಭಜಿತವಾಗಿ ತುಂಗಭದ್ರೆಯ ಮೇಲ್ಭಾಗದಲ್ಲಿ ಸೇವುಣರು ಮತ್ತು ದಕ್ಷಿಣದಲ್ಲಿ ಹೊಯ್ಸಳರು ತಮ್ಮ ತಮ್ಮ ರಾಜ್ಯಗಳನ್ನು

ಕಟ್ಟಿಕೊಂಡು ಆಳತೊಡಗಿದರು. ಇದೇ ಹೊತ್ತಿನಲ್ಲಿ ಇನ್ನೂ ಒಂದು ಬೆಳವಣಿಗೆ ನಡೆಯಿತು ಅದೇನೆಂದರೆ, ಸಾಮ್ರಾಜ್ಯದ ಪೂರ್ವದ ದಿಕ್ಕಿನಲ್ಲಿ ಕಾಕತೀಯರು ತಲೆಎತ್ತಿದರು. ಸೇವುಣ, ಹೊಯ್ಸಳರೊಡನೆ ಕಾಕತೀಯರೂ ಕೂಡ ಚಾಲುಕ್ಯರ ಮಾಂಡಲೀಕರೆ ಆಗಿದ್ದರು. ಈಗ ನಡೆದ ಬೆಳವಣಿಗೆಗಳನ್ನು ಕಂಡು ಉತ್ತೇಜಿತರಾದರು. ಸೇವುಣ, ಹೊಯ್ಸಳರೊಡನೆ ಸೋಮೇಶ್ವರನ ಕಾದಾಟದಿಂದ ಹಾಗೂ ಸೇವುಣ ಹೊಯ್ಸಳ ಹೋರಾಟಗಳಿಂದಾಗಿ ಕಾಕತೀಯರ ಬಗ್ಗೆ ಯಾರ ಲಕ್ಷವೂ ಹೋಗಲಿಲ್ಲ. ಹೀಗಾಗಿ ಅವರು ಇಂದಿನ ಆಂಧ್ರ ಪ್ರದೇಶದ ಭಾಗದಲ್ಲಿ ಸ್ವತಂತ್ರರಾಗಿ ಆಳತೊಡಗಿದರು. ವಾರಂಗಲ್ಲಿನಲ್ಲಿ ತಮ್ಮ ರಾಜಧಾನಿಯನ್ನು ಸ್ಥಾಪಿಸಿಕೊಂಡರು. ಇದರಿಂದಾಗಿ ಚಾಲುಕ್ಯ ಸಾಮ್ರಾಜ್ಯವು ಮತ್ತೂ ಒಂದು ತುಂಡಾಗಿ ಮೂರು ಭಾಗಗಳಾಗಿ ವಿಂಗಡಿಸಲ್ಪಟ್ಟಿತ್ತು.

ಭೌಗೋಳಿಕವಾಗಿ ಕಾಕತೀಯರಿಗೆ ಹೆಚ್ಚು ಸಮೀಪವಾಗಿದ್ದ ಅಟ್ಟಳೆ ನಾಡಿನ ಸಿಂದರು ಕಾಕತೀಯರ ಬಣ ಸೇರಿ ಅವರ ಪರವಾಗಿ ಸೇವುಣ ಸಿಂಘಣನೊಡನೆ ಹೋರಾಡಿದ ದಾಖಲೆಗಳು ಸಿಗುತ್ತವೆ. ಈ ರಾಜಕೀಯ ವಿಪ್ಲವದಿಂದಾಗಿ ಎಲ್ಲ ಸಿಂದ ಮನೆತನಗಳು ಸಾವಕಾಶವಾಗಿ ಅಸ್ತಂಗತವಾದವು. ಇವೆಲ್ಲ ಸಂಗತಿಗಳ ವಿವರಗಳನ್ನು ಆಧಾರ ಪೂರಕವಾಗಿ ಈ ಅಧ್ಯಾಯದಲ್ಲಿ ಕೊಡಲಾಗಿದೆ.

ಈ ಆರು ಸಿಂದ ಮನೆತನಗಳು ಚಾಲುಕ್ಯ ಸಾಮ್ರಾಜ್ಯದಲ್ಲಿಯೇ ಬೇರೆ ಬೇರೆ ಬೇರೆ ಪ್ರದೇಶಗಳನ್ನು ಆಳುತ್ತಿದ್ದರು. ಬೆಳಗುತ್ತಿ ಸಿಂದರ ಪ್ರದೇಶವು ಬೆಳಗವರ್ತಿ ರಾಜ್ಯ ಎಂದು ಹೆಸರಾಗಿತ್ತು. ಬೆಳಗವರ್ತಿ ಎಂದರೆ ಇಂದಿನ ದಾವಣಗೆರೆ ಜಿಲ್ಲೆಯ ಹೊನ್ನಾಳಿ ತಾಲೂಕಿನ ಬೆಳಗುತ್ತಿ. ಈ ರಾಜ್ಯದಲ್ಲಿ ಎಡವಟ್ಟೆ–೭೦, ರಟ್ಟಪಳ್ಳಿ–೭೦, ನರಿಯಳಗೆ–೩೦ ಇತ್ಯಾದಿಯಗಿ ಚಿಕ್ಕ ಚಿಕ್ಕ ವಿಭಾಗಳದ್ದಿವು. ಮತ್ತು ಇವಕ್ಕೆ ಸಂಬಂಧಿಸಿದಂತೆ ಹಲವಾರು ಗ್ರಾಮಗಳ ಹೆಸರುಗಳು ಶಾಸನಗಳಲ್ಲಿ ಸಿಗುತ್ತವೆ. ಇದೆ ರೀತಿ ಯಲಬುರ್ಗಿ ಸಿಂದರ ರಾಜಧಾನಿ ಯರಂಬರಗೆ ಅಂದರೆ ಇಂದಿನ ಕೊಪ್ಪಳ ಜಿಲ್ಲೆಯಲ್ಲಿ ತಾಲೂಕಿನ ಮುಖ್ಯಸ್ಥಳವಾದ ಯಲಬುರ್ಗಿ ಈ ಪ್ರದೇಶದಲ್ಲಿ ಕಿಸುಕಾಡು–೭೦, ಕೆಳವಡಿ–೩೦೦, ನರೆಯಂಗಲ್ಲ–೧೨ ಇತ್ಯಾದಿಯಾಗಿ ಚಿಕ್ಕ ವಿಭಾಗಳಿದ್ದವು. ಇವರ ಶಾಸನದಲ್ಲಿಯೂ ಹಲವಾರು ಗ್ರಾಮಗಳ ಹೆಸರುಗಳು ಬರುತ್ತವೆ. ಬಳ್ಳಾರಿ ಜಿಲ್ಲೆಯ ಕುರುಗೋಡಿನ ಸುತ್ತಲಿನ ಪ್ರದೇಶವು ವಿಶೇಷವಾಗಿ ಬಲ್ಲಕುಂದೆ–೩೦೦ ಕುರುಗೋಡು ಸಿಂದರ ಆಳಿಕೆಯ ಪ್ರದೇಶವಾಗಿತ್ತು. ಹಾಗೆಯೇ ಬಿದರ ಜಿಲ್ಲೆಯ ರಂಜೇರು ಯಂಬ ಗ್ರಾಮದ ಸುತ್ತಮುತ್ತಿಲಿನ ಪ್ರದೇಶ ಅಟ್ಟಳೆ ನಾಡಿನ ಆಳಿಕೆಯ ಪ್ರದೇಶ ಈ ಎಲ್ಲ ಪ್ರದೇಶಗಳಿಗೆ ಸಂಬಂಧಿಸಿದ ಲಭ್ಯವಿದ್ದ ಶಾಸನಗಳಲ್ಲಿ ಇರುವ ಗ್ರಾಮಗಳನ್ನು ಶಕ್ಯವಿದ್ದಲ್ಲಿ ಈಗಿನ

ಗ್ರಾಮಗಳೊಂದಿಗೆ ಗುರುತಿಸಿ ಆಯಾ ಪ್ರದೇಶಗಳ ಸ್ಥೂಲವಾದ ಚಿತ್ರವೊಂದನ್ನು ಪಡೆಯಬಹುದಷ್ಟೆ ನಿಖರವಾಗಿ ಮೇರೆ ಗುರುತಿಸುವದು ಅಸಾಧ್ಯದ ಮಾತು. ಆಯಾ ಪ್ರದೇಶಗಳಲ್ಲಿ ಸಿಗುವ ಗ್ರಾಮಗಳ ಮತ್ತು ತತ್ಸಮಾನವಾದ ಇಂದಿನ ಗ್ರಾಮಗಳ ಹೆಸರಗಳನ್ನು ಪಟ್ಟಿ ಮಾಡಿ ಈ ಐದನೇಯ ಅಧ್ಯಾಯ ಭಾಗದಲ್ಲಿ ಕೊಟ್ಟಿದ್ದೇವೆ ಇದೇ ಅಧ್ಯಾಯದ ಆಡಳಿತ ಮತ್ತು ಅರ್ಥ ವ್ಯವಸ್ಥೆ ವಿಭಾಗದಲ್ಲಿ ಆಡಳಿತಕ್ಕೆ ಸಂಬಂಧಿಸಿದ ಅಧಿಕಾರಿಗಳ ಹೆಸರುಗಳು, ಕರ, ಸುಂಕ ತೆರಿಗೆಗಳ ವಿವರಗಳು, ಭೂಮಿಯ ಪ್ರಕಾರಗಳು, ಅಳತೆ ಸಾಧನೆಗಳು ಇತ್ಯಾದಿಗಳನ್ನು ವಿವರಿಸಲಾಗಿದೆ. ಈ ಆಡಳಿತ ಮತ್ತು ಅರ್ಥವ್ಯವಸ್ಥೆಯನ್ನು ಚಾಲುಕ್ಯಾ ಸಾಮ್ರಾಜ್ಯದ ಆಡಳಿತ ಮತ್ತು ಅರ್ಥವ್ಯವಸ್ಥೆಗೆ ಅನುಗುಣವಾಗಿ ಇದ್ದು ಆ ಬಗ್ಗೆ ಸಿಂದರ ಶಾಸನಗಳಲ್ಲಿ ಹೆಚ್ಚಿನ ವಿವರ ಅಥವಾ ಹೊಸ ವಿಷಯಗಳೇನು ಸಿಗುವದಿಲ್ಲ ಪುನರುಕ್ತಿಯನ್ನು ತಪ್ಪಿಸಲು ಸಿಂದ ಶಾಸನಗಳಿಗೆ ಸಂಬಂಧಿಸಿದಂತೆ ಮಾತ್ರ ವಿವರಗಳನ್ನು ಸಂಗ್ರಹಿಸಿಕೊಡಲಾಗಿದೆ.

ಧರ್ಮ ಮತ್ತು ಸಾಹಿತ್ಯ ಇವು ನಮ್ಮ ಸಂಸ್ಕೃತಿಯ ಬಹುಮುಖ್ಯ ಅಂಗಗಳು. ರಾಜಕೀಯ ಹಾಗೂ ಅರ್ಥವ್ಯವಸ್ಥೆ ನಮ್ಮ ವ್ಯವಹಾರಿಕ ಜೀವನಕ್ಕೆ ಉಪಯುಕ್ತವಾದರೆ ಧರ್ಮ, ಸಾಹಿತ್ಯಗಳು ನಮ್ಮ ಆತ್ಮೋನ್ನತಿಗೆ, ಸಂಸ್ಕಾರಕ್ಕೆ ಅಗತ್ಯವಾದ ವಿಷಯಗಳು. ಇವೆರಡು ನಮ್ಮ ಪ್ರಾಚೀನ ರಾಜ್ಯ ವ್ಯವಸ್ಥೆಯ ಅವಿಭಾಜ್ಯ ಅಂಗಗಳಾಗಿದ್ದುದರಿಂದಲೇ ನಮ್ಮ ವಿಶಿಷ್ಟ ಸಂಸ್ಕೃತಿಯ ಬೆಳವಣಿಗೆಗೆ ದಾರಿಯಾಯಿತು. ಹಾಗೆ ನೋಡಿದರೆ ಆಧುನಿಕ ಮಾತಿನಲ್ಲಿ ಹೇಳಬೇಕಾದರೆ ನಿಜವಾದ ಅರ್ಥದಲ್ಲಿ ಧರ್ಮ ನಿರಪೇಕ್ಷತೆ. ನಮ್ಮ ಪ್ರಾಚೀನ ಧರ್ಮವ್ಯವಸ್ಥೆಯ ಜೀವಾಳ. ಧರ್ಮ ನಿರಪೇಕ್ಷತೆ ಎಂದರೆ ಧರ್ಮವನ್ನು ಬಿಟ್ಟು ಬಿಡಬೇಕೆಂದಲ್ಲ, ಅದರ ಬದಲಾಗಿ ಧರ್ಮದ ಮೂಲ ತತ್ವಗಳನ್ನು ಅರಿತುಕೊಂಡು ಎಲ್ಲ ಧರ್ಮಗಳನ್ನು ಸಮಾನವೆಂದು ನೋಡುವುದು. ಬಹು ಹಿಂದಿನಿಂದಲೂ ಬಂದ ಈ ಪರಂಪರೆಯನ್ನೇ ಪ್ರಾಚೀನ ಆಳರಸರು ಅನುಸರಿಸಿದರು. ಹೀಗಾಗಿ ನಮ್ಮ ದೇಶದಲ್ಲಿ ಅನೇಕ ಧರ್ಮಗಳು ಜೊತೆ ಜೊತೆಯಾಗಿ ಬಾಳುವುದು ಸಾಧ್ಯವಾಯಿತು. ಆಳರಸರು ತಮ್ಮ ವೈಯಕ್ತಿಕವಾದ ಯಾವ ಧರ್ಮವನ್ನು ಅನುಸರಿಸುತ್ತಿದ್ದರು ಎಂಬುವದು ತಿಳಿಯಲಾರದಷ್ಟು ಎಲ್ಲ ಧರ್ಮಗಳನ್ನೂ ಅವರು ಪ್ರೋತ್ಸಾಹಿಸಿದ್ದರು. ಹೀಗಾಗಿ ಎಲ್ಲ ಧರ್ಮಗಳು ಒಂದೇ ಸಮನಾಗಿ ನಮ್ಮ ನಾಡಿನಲ್ಲಿ ಬೆಳೆದುಬಂದವು. ಕಲ್ಯಾಣ ಚಾಲುಕ್ಯರ ಸಾವಿರಾರು ಶಾಸನಗಳು ಮತ್ತು ಆ ಕಾಲದಲ್ಲಿ ಮೂಡಿ ಬಂದ ಸಾಹಿತ್ಯಿಕ ಕೃತಿಗಳು ಈ ಮಾತನ್ನು ಅಕ್ಷರಶಃ ಎತ್ತಿ ಹಿಡಿಯುತ್ತವೆ. ಚಾಲುಕ್ಯ ಸಾಮ್ರಾಜ್ಯದ ಭಾಗಗಳಾದ ಸಿಂದರ ಪ್ರದೇಶಗಳೂ ಈ ಮಾತಿಗೆ ಹೊರತಾಗಿಲ್ಲ. ತಮ್ಮ ಆಳರಸರಂತೆ ಪ್ರಚಲಿತವಿದ್ದ ಎಲ್ಲ ಧರ್ಮಗಳನ್ನು ಅವರು ಪುರಸ್ಕರಿಸಿದ್ದರು.

ಆಗ ಪ್ರಚಲಿತವಿದ್ದ ಕಾಳಾಮುಖ ಶೈವ, ಜೈನ ಮತಗಳು ಅವರ ಪ್ರದೇಶಗಳಲ್ಲಿ ಅಭಿವೃದ್ಧಿ ಕಂಡವು. ಅಸಂಖ್ಯ ದೇವಾಲಯಗಳ ನಿರ್ಮಾಣ ಅವುಗಳ ನಿರ್ವಹಣೆಗೆ ದಾನ ದತ್ತಿಗಳನ್ನು ನೀಡಿ, ಅವುಗಳನ್ನು ನಡೆಸಿಕೊಂಡು ಬರುವ ಯತಿಗಳ ನಿರ್ವಹಣೆಗೆ, ದೇವಾಲಯಗಳಲ್ಲಿ ಪೂಜೆ ಪುನಸ್ಕಾರಗಳು ಶೈಕ್ಷಣಿಕ ಚಟುವಟಿಕೆಗಳು ಅಖಂಡವಾಗಿ ನಡೆಯುವಂತೆ ಏರ್ಪಾಡು ಮಾಡಿದ್ದರು, ಕೆರೆ ಕಟ್ಟೆ ಕಟ್ಟಿಸುವುದು, ಬಾವಿ ತೋಡಿಸುವುದು ಮುಂತಾದ ಸಾರ್ವಜನಿಕ ಕಾರ್ಯಗಳು ನಿರಂತರವಾಗಿ ನಡೆದವು.

ಸಿಂದರ ಕಾಲದಲ್ಲಿ ಪ್ರಚಲಿತ ಪ್ರಮುಖ ಧರ್ಮಗಳೆಂದರೆ ಕಾಳಾಮುಖ ಶೈವ ಮತ್ತು ಜೈನ ಧರ್ಮಗಳು ವೈಷ್ಣವ ಧರ್ಮವು ಅಸ್ತಿತ್ವದಲ್ಲಿ ಇದ್ದಿತು ಎಲ್ಲ ಸಿಂದ ಮನೆತನಗಳ ಸಾಮಂತರು ಈ ಧರ್ಮಗಳ ಅಭಿವೃದ್ಧಿಗಾಗಿ ತಮ್ಮ ಕೊಡುಗೆ ನೀಡಿದರು. ಕುರುಗೋಡು, ರಂಜೇರು, ಬೆಳಗುತ್ತಿ ಮುಂತಾದ ಕಡೆಗಳಲ್ಲಿ ಬೇರೆ ಬೇರೆ ಹೆಸರಿನಿಂದ ಈಶ್ವರ ದೇವಾಲಯಗಳನ್ನು ನಿರ್ಮಿಸಿದರು. ಇದ್ದ ದೇವಾಲಯಗಳಿಗೆ ದಾನ ದತ್ತಿಗಳಿಂದ ಪುಷ್ಟಿಕರಿಸಿದರು. ಇಂತಹ ದೇವಾಲಯಗಳ ಮೇಲ್ವಿಚಾರಣೆಯನ್ನು ನಿಷ್ಠಾವಂತ ಯತಿಗಳುವಹಿಸುತ್ತಿದ್ದರು, ಕೆಲವು ಶಾಸನಗಳನ್ನು ಇಂತಹ ಯತಿ ಪರಂಪರೆಯ ವಿವರ ದೊರೆಯುತ್ತವೆ ಜೈನ ಧರ್ಮದ ಬಗ್ಗೆ ಬಹಳಷ್ಟು ವಿವರ ದೊರೆಯದಿದ್ದರು ಈ ಧರ್ಮವು ಸಾಕಷ್ಟು ಪ್ರಬಲವಿದ್ದಿತು ಎಂದು ಕಲ್ಪಿಸಲು ಆಧಾರಗಳು ಇವೆ. ಜೈನ ಬಸದಿಗಳ ಮತ್ತು ಜೈನ ಯತಿಗಳ ಉಲ್ಲೇಖ ಇರುವದನ್ನು ಈ ಅಧ್ಯಾಯದಲ್ಲಿ ತಿಳಿಸಲು ಯತ್ನಿಸಿದ್ದೇವೆ.

ಧಾರ್ಮಿಕ ಕ್ಷೇತ್ರದಲ್ಲಿ ಸಿಂದರ ಕಾಲದಲ್ಲಿ ನಡೆದ ಪ್ರಮುಖ ಬೆಳವಣಿಗೆ ಎಂದರೆ ಬಸವಣ್ಣನವರ ಉದಯ. ಬಿಜ್ಜಳನ ಕಾಲಕ್ಕೆ ಅವನ ಮಂತ್ರಿಯಾಗಿ ತದನಂತರ ಕೂಡಲ ಸಂಗಮಕ್ಕೆ ತೆರಳಿ ಅಲ್ಲಿಂದ ಧಾರ್ಮಿಕ, ಸಾಮಾಜಿಕ, ಕ್ಷೇತ್ರಗಳಲ್ಲಿ ಅಸೀಮ ಬದಲಾವಣೆ ತಂದು ಹೊಸ ಕ್ರಾಂತಿಯ ಹರಿಕಾರರಾದ ವಿಷಯವು ಎಲ್ಲರಿಗೂ ತಿಳಿದಿದ್ದಾಗಿದೆ. ಒಂದು ದೃಷ್ಟಿಯಿಂದ ಇದು ವೀರಶೈವ ಧರ್ಮದ ಹೊಸ ಯುಗದ ಆರಂಭಕಾಲ ಎಂದು ಹೇಳಬಹುದು. ಆದರೆ ಪ್ರಸ್ತುತ ನಮ್ಮ ಅಭ್ಯಾಸದ ಅವಧಿಯ ಕಾಲದಲ್ಲಿ ಅದಿನ್ನೂ ಸಾಕಷ್ಟು ಪ್ರಭಾವ ಬೀರಿದ್ದಿಲ್ಲ ಎನ್ನಬಹುದು. ಆದರೂ ವೀರಶೈವ ಧರ್ಮದ ಅತೀ ಮುಖ್ಯ ಅಂಶವಾದ ಶಿವಭಕ್ತಿಯು ಹೆಚ್ಚು ಹೆಚ್ಚು ಪ್ರಭಾವನ್ನು ಬೀರುತ್ತಿದ್ದೀತು ಎಂಬುದು ಸ್ಪಷ್ಟವಾಗುತ್ತದೆ. ಕುರುಗೋಡಿನ ಸಿಂದ ಒಂದನೇ ರಾಚಮಲ್ಲ ಮತ್ತು ಎರಡನೇಯ ರಾಚಮಲ್ಲರ ಉದಾಹರಣೆ ಇದಕ್ಕೆ ಸಾಕ್ಷಿ. ಶಿವಭಕ್ತಿಯಲ್ಲಿ ಪಾರಮ್ಯವನ್ನೇ ಪಡೆದ ಇವರು ಬಸವಣ್ಣನವರ ಪ್ರಭಾವಕ್ಕೆ ಒಳಪಟ್ಟಿದ್ದರು ಎಂಬುದು

ಸೂಚಿತವಾದರೂ ಇವರು ನಿಜವಾದ ವೀರಶೈವರೇ ಆಗಿದ್ದರು ಎಂಬ ನಿರ್ಣಯ ಉಚಿತವಲ್ಲವೆಂಬುದನ್ನು ಈ ಅಧ್ಯಾಯದಲ್ಲಿ ತೋರಿಸಿದ್ದೇವೆ. ಒಟ್ಟಿನಲ್ಲಿ ಧಾರ್ಮಿಕ ಸ್ಥಿತಿಗತಿಗಳು ಇವರು ಚಾಲುಕ್ಯರ ಪರಂಪರೆಯನ್ನು ಮುಂದುವರೆಸಿದರು ಎಂಬುದನ್ನು ಎಲ್ಲ ವಿವರಣೆಗಳಲ್ಲಿ ತೋರಿಸಿದ್ದೇವೆ.

ಸಿಂದರ ಆಳಿಕೆಗೆ ಒಳಪಟ್ಟ ಪ್ರದೇಶಗಳಲ್ಲಿ ಸಂಬಂಧಿಸಿದಂತೆ ಸಾಹಿತ್ಯ ಬೆಳವಣಿಗೆ ಕುರಿತು ಇದೆ ಅಧ್ಯಾದಲ್ಲಿ ಚರ್ಚಿಸಲಾಗಿದೆ. ಸಿಂದ ಸಾಮಂತರು ಆಳಿದ ಕಾಲವೂ ಕರ್ನಾಟಕದಲ್ಲಿ ಸಾಹಿತ್ಯದ ಅತ್ಯಂತ ಉಚ್ಛ್ರಾಯ ಕಾಲ. ಸಾಮ್ರಾಜ್ಯದ ತುಂಬ ಅನೇಕ ಕವಿಗಳು, ದಾರ್ಶನಿಕರು, ಶಾಸ್ತ್ರಜ್ಞರೆಲ್ಲರು ಈ ಕಾಲದಲ್ಲಿ ಇದ್ದರೂ ಸಿಂದರ ಆಳಿಕೆಗೆ ಒಳಪಟ್ಟ ಪ್ರದೇಶಗಳಲ್ಲಿ ಇಂತಹ ಉದಾರಣೆಗಳು ಕಡಿಮೆ. ಆದ್ದರಿಂದ ಅಂತಹ ವಿವರಗಳು ಹೆಚ್ಚು ಉಲ್ಲೇಖಿಸಿಲ್ಲ.

ಕನ್ನಡ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಈ ಕಾಲದಲ್ಲಿ ಎರಡು ಪ್ರಮುಖ ಬೆಳವಣಿಗೆಗಳು ನಡೆದವು. ಒಂದು ರಗಳೆ ಎಂಬ ಛಂದೋ ಪ್ರಕಾರದ ಜನಪ್ರಿಯತೆ ಮತ್ತು ಬಸವಣ್ಣನವರು ಮತ್ತು ಅವರ ಅನುಯಾಯಿಗಳು ಸೃಷ್ಟಿಸಿದ ವಚನಗಳ ಎಂಬ ಅಮೋಘ ಸಾಹಿತ್ಯ ಪ್ರಕಾರ ರಗಳೆ ಇದಕ್ಕೂ ಪೂರ್ವದಲ್ಲಿ ಸಾಹಿತ್ಯ ಲೋಕಕ್ಕೆ ಪರಿಚಿತವಿದ್ದರೂ ಅದನ್ನು ಕಾವ್ಯ ರಚನೆಯಲ್ಲಿ ಅಳವಡಿಸಿಕೊಂಡು ಬಹಳಷ್ಟು ಪ್ರಚಾರಕ್ಕೆ ತಂದವನು ಹರಿಹರ. ಸಿಂದ ಆಳಿಕೆ ಪ್ರದೇಶಗಳ ಶಾಸನಗಳಲ್ಲಂತೂ ಈ ರಗಳೆ ಉಲ್ಲೇಖ ಬರುವುದು ಒಂದು ವೈಶಿಷ್ಟ್ಯ. ಕುರುಗೋಡಿನ ಶಾಸನಗಳಲ್ಲಿ ಒಂದು ರಗಳೆಯ ಉಲ್ಲೇಖ ಕುರಿತು ಈ ಭಾಗದಲ್ಲಿ ಚರ್ಚಿಸಲಾಗಿದೆ.

ಗ್ರಾಂಥಿಕ, ಸಾಹಿತ್ಯಿಕ, ಪ್ರಕಾರವಾದ ಇನ್ನೊಂದು ವೈಶಿಷ್ಟ್ಯ ಪ್ರಕಾರವೆಂದರೆ ಶಾಸನ ಸಾಹಿತ್ಯ. ಶಾಸನ ಲೇಖನ ಪರಂಪರೆ ನಮ್ಮಲ್ಲಿ ಕ್ರಿ.ಪೂ. ಮೂರನೇ ಶತಮಾನದಿಂದ ಆರಂಭವಾಗಿ ನಿರಂತರವಾಗಿ ಹದಿನಾರನೇ ಶತಮಾನದ ವರೆಗೆ ನಡೆಯುತ್ತಾ ಬಂದಿದೆ. ಶಾಸನಗಳ ರಚನೆ ಉದ್ದೇಶ ಏನೇ ಇದ್ದರೂ ಅವುಗಳನ್ನು ಅನೇಕ ಸಲ ನಮ್ಮ ಕವಿಗಳು ಸಾಹಿತ್ಯ ಸೃಷ್ಟಿಗೆ ಬಳಸಿಕೊಂಡರೆಂಬವುದು ಮಹತ್ವದ ವಿಷಯ ಕರ್ನಾಟಕದಲ್ಲಿ ಈ ಹೊಸ ವಿಧಾನ ಕನ್ನಡ ಭಾಷೆಗೆ ಸಂಬಂಧಿಸಿದಂತೆ ಕಲ್ಯಾಣ ಚಾಲುಕ್ಯರ ಕಾಲಕ್ಕೆ ಆರಂಭಗೊಂಡಿತೆಂದು ಹೇಳಬಹುದು. ಕನ್ನಡ ಭಾಷೆ ಶಾಸನ ಲೋಕದಲ್ಲಿ ಕದಂಬ ಕಾಲದಲ್ಲಿ ಮೊದಲ ಹೆಜ್ಜೆ ಇಟ್ಟರೂ ಅದು ಪ್ರಬುದ್ಧ ಸಾಹಿತ್ಯವಾಗಿ ಬೆಳೆದುದು ಕಲ್ಯಾಣ ಚಾಲುಕ್ಯರ ಕಾಲದಿಂದ ಆಳರಸರ, ರಾಣಿಯರ, ಅಧಿಕಾರಿಗಳ ವರ್ಣನೆಮಾಡುವಾಗ ಭೂ ಪ್ರದೇಶದ ಸೃಷ್ಟಿ ಸೌಂದರ್ಯಗಳ ವರ್ಣಿಸುವಾಗ, ವೀರ ಯೋಧರ

ಧೈರ್ಯ ಶೌರ್ಯಗಳನ್ನು ಹೊಗಳುವಾಗ, ದೇವರ ಮಹಿಮೆಯನ್ನು ಕೊಂಡಾಡುವಾಗ ಇನ್ನೂ ಅನೇಕ ಪ್ರಸಂಗಗಳಲ್ಲಿ ಕವಿಗಳು ತಮ್ಮ ಜಾಣ್ಮೆ ಪ್ರದರ್ಶಿಸಲು ಚೆನ್ನಾಗಿ ಸಾಹಿತ್ಯವನ್ನು ಬಳಸಿಕೊಂಡಿದ್ದಾರೆ. ಶಾಸನ ಸಾಹಿತ್ಯ ಎಂಬ ಹೊಸ ಸಾಹಿತ್ಯ ಪ್ರಕಾರವೇ ನಿರ್ಮಾಣಗೊಂಡಿತ್ತು. ಸಿಂದ ಪ್ರದೇಶಕ್ಕೆ ಸಂಬಂಧಿಸಿದಂತೆ ಈ ಸಾಹಿತ್ಯ ಎಷ್ಟರಮಟ್ಟಿಗೆ ಬೆಳೆದಿತ್ತು ಎಂದು ಉದಾಹರಣೆ ಸಹಿತವಾಗಿ ಈ ವಿಭಾಗದಲ್ಲಿ ವಿವರಿಸಿದ್ದೇವೆ. ಹೀಗೆ ಈ ಆರನೇ ಅಧ್ಯಾಯದಲ್ಲಿ ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಧರ್ಮ ಮತ್ತು ಸಾಹಿತ್ಯಿಕ ಸ್ಥಿತಿಗತಿಗಳನ್ನು ಕುರಿತು ಸಾಧ್ಯವಿದಷ್ಟು ವಿವರಗಳನ್ನು ಈ ಅಧ್ಯಾಯದಲ್ಲಿ ಸಂಗ್ರಹಿಸಲಾಗಿದೆ.

ಸಿಂದ ವಂಶೀಯರ ವಾಸ್ತುಶಿಲ್ಪಕ್ಕೆ ಸಂಬಂಧಿಸಿದಂತೆ ಹೆಚ್ಚು ಮಾಹಿತಿ ಲಭ್ಯವಾಗುವದು ಕುರುಗೋಡಿನ ಸಿಂದರ ಪ್ರದೇಶದಲ್ಲಿಯೇ. ಗ್ರನೈಟ್ (ಕಣಶಿಲೆ) ಕಲ್ಲಿನ ಬೆಟ್ಟಗಳ ಪರಿಸರದಲ್ಲಿ ಸಿಂದರ ಪ್ರದೇಶವಿದ್ದುದರಿಂದ ಅವರ ದೇವಾಲಯಗಳ ನಿರ್ಮಾಣಕ್ಕೆ ವಾಸ್ತು ಶಿಲ್ಪಿಗಳು ಸಹಜವಾಗಿಯೇ ಆ ಕಲ್ಲನ್ನು ಬಳಸಿದ್ದಾರೆ. ಇವು ವಾಸ್ತುಕಲಾ ದೃಷ್ಟಿಯಿಂದ ಈ ದೇವಾಲಯಗಳು ಬಹಳ ಸರಳವಾಗಿವೆ. ನಮಗೆ ತಿಳಿದಿರುವ ಎಲ್ಲ ದೇವಾಲಯಗಳೂ ಸರಳ ಅಧಿಷ್ಠಾನ, ಗೋಡೆ ಮತ್ತು ಶಿಖರವನ್ನು ಹೊಂದಿದ್ದುದರ ಸೂಚನೆ ನೀಡುತ್ತವೆ. ಮೂಲಪ್ರಾಸಾದಗಳು ಫಾಂಸನಾ (ಕದಂಬನಾಗರ) ಮಾದರಿಯಲ್ಲಿವೆ. ಅದರಂತೆ ಹೆಚ್ಚಿನ ದೇವಾಲಯಗಳೆಲ್ಲವೂ ಉಪಪೀಠದ ಮೇಲೆ ನಿಂತಿರುವದು ಗಮನಾರ್ಹವಾಗಿದೆ. ಪ್ರಾಯಶಃ ಕಣಶಿಲೆ ಕಠಿಣ ಶಿಲೆಯಾದುದರಿಂದ ಶಿಷ್ಟ್ (ಬಳಪದ ಕಲ್ಲು) ಬಳಸಿ ನಿರ್ಮಾಣವಾದ ಕಲ್ಯಾಣದ ಚಾಲುಕ್ಯರ ದೇವಾಲಯಗಳಷ್ಟು ಸೂಕ್ಷ್ಮ ಕೆತ್ತನೆಗಳು ಇಲ್ಲಿ ಕಾಣುತ್ತಿಲ್ಲ. ಹೆಚ್ಚಿನ ದೇವಾಲಯಗಳು ಏಕಕೂಟ (ಒಂದೇ ಗರ್ಭಗೃಹವುಳ್ಳ) ದೇವಾಲಯಗಳು. ಆದರೆ ತ್ರಿಕೂಟ (ಮೂರು ಮೂರುಗರ್ಭಗೃಹಗಳುಳ್ಳ) (ಉದಾ: ಕುರುಗೋಡಿನ ರಾಮೇಶ್ವರ) ಮತ್ತು ಪಂಚಕೂಟ (ಐದು ಗರ್ಭಗೃಹಗಳುಳ್ಳ) (ಉದಾ: ಕೋಳೂರಿನ ರಾಘಣ್ಣ ಅಥವಾ ಸೂರ್ಯನಾರಾಯಣ ದೇವಾಲಯ) ಮಾದರಿಯಲ್ಲಿಯೂ ಅಪರೂಪಕ್ಕೆ ದೇವಾಲಯಗಳಿರುವದನ್ನು ಗಮನಿಸಬೇಕು. ಇನ್ನೊಂದು ಉಲ್ಲೇಖನೀಯ ವಿಚಾರವೆಂದರೆ ಕುರುಗೋಡಿನ ಸಂಗಮೇಶ್ವರ ದೇವಾಲಯದ ತಲವಿನ್ಯಾಸವು ಪ್ರದಕ್ಷಿಣಾಪಥವನ್ನು ಒಳಗೊಂಡಿರುವದು. ಕಲ್ಯಾಣದ ಚಾಲುಕ್ಯರ ಮತ್ತು ಅವರ ಮಾಂಡಲೀಕ ಅರಸರಾಳಿದ ಪ್ರದೇಶಗಳಲ್ಲಿ ಪ್ರದಕ್ಷಿಣಾಪಥವುಳ್ಳ ದೇವಾಲಯಗಳು ತೀರ ಅಪರೂಪ. ಮುಂದೆ ವಿಜಯನಗರದ ಅರಸರ ಕಾಲದಲ್ಲಿ ಹಂಪೆಯಲ್ಲಿ ನಿರ್ಮಾಣವಾದ ಕೃಷ್ಣ, ವಿಜಯವಿಠ್ಠಲ ಮುಂತಾದ ಕೆಲವು ದೇವಾಲಯಗಳಿಗೆ ಒಳಪ್ರದಕ್ಷಿಣಾಪಥವಿರುವದನ್ನು

ಗಮನಿಸಬೇಕು. ಆ ಹಿನ್ನೆಲೆಯಲ್ಲಿ ಕುರುಗೋಡಿನ ಸಂಗಮೇಶ್ವರ ದೇವಾಲಯವು ಇಂತಹ ವಿನ್ಯಾಸಕ್ಕೆ ಪೂರ್ವಭಾವಿಯಾಗಿದೆ ಎಂಬುದಾಗಿ ಹೇಳಬಹುದು. ಹೀಗಿದ್ದಾಗ್ಯೂ ಇವು ಕಲ್ಯಾಣದ ಚಾಲುಕ್ಯರ ದೇವಾಲಯ ವಾಸ್ತುಶೈಲಿಗೆ ವ್ಯತಿರಿಕ್ತವಾಗಿವೆ ಎಂದು ಹೇಳಲಾಗದು. ಉಳಿದ ಸಿಂದ ವಂಶೀಯರ ದೇವಾಲಯಗಳಿಗೆ ಕೂಡ ಈ ಮಾತು ಅನ್ವಯವಾಗುತ್ತದೆ. ಒಂದೇ ವ್ಯತ್ಯಾಸವೆಂದರೆ ಕುರುಗೋಡು ಸಿಂದರ ಪ್ರದೇಶದಲ್ಲಿ ಗ್ರಾನೈಟ್ ಶಿಲೆ ಬಳಕೆಯಾಗಿದೆಯಾದರೆ, ಇತರೆಡೆಗಳಲ್ಲಿ ಬಳಪದ ಶಿಲೆ ಪ್ರಧಾನವಾಗಿ ಬಳಕೆಯಾಗಿದೆ. ಹೀಗಾಗಿ ಹೆಚ್ಚು ಅಲಂಕಾರಿಕವಾಗಿ ಇತರೆಡೆಯ ದೇವಾಲಯಗಳು ಕಾಣುತ್ತಿವೆ.

ಈ ಪ್ರಬಂಧಕ್ಕೆ ಅನುಬಂಧ ಸೇರಿಸಿದ್ದು ಅದರಲ್ಲಿ ಈ ಸಿಂದ ಮನೆತನಗಳಿಗೆ ಸಂಬಂಧಿಸಿದ ಇದರುವರೆಗೆ ಲಭ್ಯವಿದ್ದ ಶಾಸನಗಳ ಪ್ರತಿ ಪಾಠವನ್ನು ಅಭ್ಯಾಸದ ಸೌಕರ್ಯಕ್ಕಾಗಿ ಕೊಡಲಾಗಿದೆ.

# ಗ್ರಂಥ ಋಣ

## ಶಾಸನ ಆಕರಗಳು


| | | |
|---|---|---|
| ಇಂಡಿಯನ್ ಎಂಟಿಕ್ವರಿ | ಸಂಪುಟ ೩೦ | ನೋಟ್ಸ ಆನ್ ಇಂಡಿಯನ್ ಹಿಸ್ಟರಿ ಆ್ಯಂಡ್ ಜಿಯಾಗ್ರಾಫಿ, ಜೆ.ಎಫ್. ಫ್ಲೀಟರವರ ಲೇಖನ, ಪು.ಸಂ. ೧೦೬-೧೧೦ ಮತ್ತು ೨೪೯ ರಿಂದ ೨೬೮. ೧೯೦೧ |
| ಎಪಿಗ್ರಾಪಿಯಾ ಇಂಡಿಕಾ | ಸಂಪುಟಗಳು ೩, ೧೪, ೨೦ | ಭಾರತೀಯ ಸರ್ವೇಕ್ಷಣ ಇಲಾಖೆ, ದೆಹಲಿ |
| ಎಪಿಗ್ರಾಪಿಯಾ ಕರ್ನಾಟಿಕಾ | ಸಂಪುಟಗಳು ೭ (ಹಳೆಯವು), ೧೧ | ಮೈಸೂರು ವಿಶ್ವವಿದ್ಯಾನಿಲಯ, ಪ್ರಕಟಣೆ, ಮೈಸೂರು. |
| ಎನುವಲ್ ರಿಪೋರ್ಟ್ಸ ಆನ್ ಸೌಥ ಇಂಡಿಯನ್ ಎಪಿಗ್ರಾಫಿ | | ಭಾರತೀಯ ಪುರಾತತ್ವ ಇಲಾಖೆ, ದೆಹಲಿ |
| ಎನುವಲ್ ರಿಪೋರ್ಟ್ಸ ಆನ್ ಇಂಡಿಯನ್ ಎಪಿಗ್ರಾಫಿ | | ಭಾರತೀಯ ಪುರಾತತ್ವ ಇಲಾಖೆ, ದೆಹಲಿ |
| ಕನ್ನಡ ವಿಶ್ವವಿದ್ಯಾಲಯ, ಶಾಸನ ಸಂಪುಟಗಳು | ಸಂಪುಟ ೧ (ಬಳ್ಳಾರಿ), ಸಂಪುಟ ೮ (ಬೀದರ) | ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ ಹೊಸಪೇಟೆ |
| ಕರ್ನಾಟಕ ಇನ್ಸಸ್ಕ್ರಿಪ್ಷನ್ಸ | ಸಂಪುಟಗಳು ೪, ೫, ೬ | ಕನ್ನಡ ಸಂಶೋಧನಾ ಸಂಸ್ಥೆ, ಕ.ವಿ.ವಿ. ಧಾರವಾಡ |
| ಕಾರ್ಪಸ್ ಇನ್ಸಸ್ಕ್ರಿಪ್ಷಮ್ ಇಂಡಿಕಾರಮ್ | ಸಂಪುಟ ೩ (ಗುಪ್ತರ ಶಾಸನಗಳು) | |

| | | |
|---|---|---|
| ಬಾಂಬೆ ಕರ್ನಾಟಕ ಇನ್ಸ್ಕ್ರಿಪ್ಷನ್ಸ | ಸಂಪುಟ ೧, ಭಾಗ ೧, | ಆರ್ಕಿಯಾಲಜಿಕಲ್ ಸರ್ವೆ ಆಫ್ ಇಂಡಿಯಾ, ದೆಹಲಿ |
| ಜರ್ನಲ್ಸ ಆಫ್ ಬಾಂಬೆ ಬ್ರ್ಯಾಂಚ ಆಫ್ ರಾಯಲ್ ಎಶಿಯಾಟಿಕ್ ಸೊಸೈಟಿ | | ಮುಂಬೈ |
| ಸೌಥ ಇಂಡಿಯನ್ ಇನ್ಸ್ಕ್ರಿಪ್ಷನ್ಸ | ಸಂಪುಟಗಳು ೧೫, ೧೮, ೯ (ಭಾಗ-೧) ೨೦, ೪, ೧೧ (ಭಾಗ-೨) | ಆರ್ಕಿಯಾಲಜಿಕಲ್ ಸರ್ವೆ ಆಫ್ ಇಂಡಿಯಾ, ದೆಹಲಿ |
| ಎಮ್.ಎ.ಆರ್ | | ೧೯೨೯ |


## ಇತರ ಆಕರ ಗ್ರಂಥಗಳು, ಲೇಖನಗಳು


| | | |
|---|---|---|
| ಅನ್ಸಾರಿ ಝೆಡ್.ಕೆ | ಸಮ್ ಫ್ಯುಡಿಟರಿ ಫ್ಯಾಮಿಲಿಸ್ ಆಫ್ ಮಿಡೆವಲ್ ಕರ್ನಾಟಕ-ಎ ಸ್ಟಡಿ | ಶ್ರೀ ಹರಿ ಪ್ರಕಾಶನ, ಧಾರವಾಡ. ೧೯೯೮ |
| ಅಳತೆಕರ ಎ.ಎಸ್. | ರಾಷ್ಟ್ರಕೂಟಸ್ ಆಂಡ್ ದೇರ್ ಟೈಮ | |
| ಇಸಿಕವಾ ಕಾನ್ | ಹಿಸ್ಟಾರಿಕಲ್ ಜಿಯಾಗ್ರಾಫಿ ಆಫ್ ದಿ ವೆಸ್ಟರ್ನ ಡೆಕ್ಕನ್ | ಮಹಾಪ್ರಬಂಧ (ಅಪ್ರಕಟಿತ) ಕ.ವಿ.ವಿ., ಧಾರವಾಡ. ೧೯೯೨ |
| ಕಲಬುರ್ಗಿ ಎಮ್.ಎಮ್. | ಶಾಸನಗಳಲ್ಲಿ ಶಿವಶರಣರು | ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ, ಡಂಬಳ, ಗದಗ ೧೯೭೦ |
| ಕುಲಕರ್ಣಿ ವಿ.ಎಸ್. | ಹಿಸ್ಟಾರಿಕಲ್ ಆ್ಯಂಡ್ ಕಲ್ಚರಲ್ ಸ್ಟಡೀಸ್ ಅರೌಂಡ್ ಬಸವ ಕಲ್ಯಾಣ | ಮಹಾಪ್ರಬಂಧ (ಅಪ್ರಕಟಿತ) ಕರ್ನಾಟಕ ವಿಶ್ವವಿದ್ಯಾಲಯ, ೧೯೭೯ |

| | | |
|---|---|---|
| ಕೋಯಿಲೊ, ವಿಲಿಯಮ್ | ದಿ. ಹೊಯ್ಸಳ ವಂಶ | ಮುಂಬೈ |
| ಗಾಯಿ ಜಿ.ಎಸ್. | ಇನ್ಸಸ್ಕ್ರಿಪ್ಷನ್ಸ ಆಫ್ ದಿ ಕದಂಬಸ್ | ಐ.ಸಿ.ಎಚ್.ಆರ್., ದೆಹಲಿ |
| ಗೋಪಾಲ ಬಿ.ಆರ್. | ಮೈನರ್ ಡಯಾನಾಸ್ಟೀಜ ಆಫ್ ಸೌಥ್ ಇಂಡಿಯಾ, ಕರ್ನಾಟಕ | ನ್ಯೂ ಎರಾ ಪಬ್ಲಿಕೇಷನ್ಸ್, ಮದ್ರಾಸ್ ೧೯೮೨, |
| ಗೋಪಾಲ ಬಿ.ಆರ್. | ದಿ ಚಾಲುಕ್ಯಾಸ ಆಫ್ ಕಲ್ಯಾಣ ಆ್ಯಂಡ್ ಕಲಚುರಿಸ್ | ಕ.ವಿ.ವಿ., ಧಾರವಾಡ. ೧೯೮೧ |
| ಗೋಪಾಲ ಬಿ.ಆರ್. | ಎ ಹಿಸ್ಟರಿ ಆಫ್ ಕರ್ನಾಟಕ | ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೭೦ |
| ಪಾಟೀಲ ಸಿ.ಎಸ್. | ಟೆಂಪಲ್ಸ್ ಆಫ್ ರಾಯಚೂರ ಆ್ಯಂಡ್ ಬಳ್ಳಾರಿ ಡಿಸ್ಟ್ರಿಕ್ಟ್ಸ್ | ಪುರಾತತ್ವ ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, ೧೯೯೨ |
| ಡರೆಟ್ | ಹೊಯ್ಸಳ ವಂಶ | ಆಕ್ಸಪರ್ಡ ಯುನಿವರ್ಸಿಟಿ ಪ್ರೆಸ್ |
| ದೀಕ್ಷಿತ ಡಿ.ಪಿ. | ಎ ಪೊಲಿಟಿಕಲ್ ಹಿಸ್ಟರಿ ಆಫ್ ದಿ ಚಾಲುಕ್ಯಾಸ ಆಫ್ ಬದಾಮಿ | ಅಭಿನವ ಪಬ್ಲಿಕೇಷನ್ಸ್, ದೆಹಲಿ, ೧೯೮೦ |
| ದೇಸಾಯಿ ದಿನಕರ | ಮಹಾಮಂಡಳೇಶ್ವರಾಸ್ ಅಂಡರ್ ದಿ ಚಾಲುಕ್ಯಸ ಆಫ್ ಕಲ್ಯಾಣ | ೧೯೩೫ |
| ದೇಸಾಯಿ ಪಿ.ಬಿ. | ಜೈನಿಜಮ್ ಇನ್ ಸೌಥ್ ಇಂಡಿಯಾ ಆ್ಯಂಡ್ ಸಮ್ ಜೈನ ಎಪಿಗ್ರಾಫ್ಸ, ಕೊಲ್ಲಾಪುರ. | ಗುಲಾಬಚಂದ, ಹೀರಾಚಂದ ದೋಶಿ, ಜೈನ ಸಂಸ್ಕೃತಿ ಸಂರಕ್ಷಣಾ ಸಂಘ, ಸೊಲ್ಲಾಪೂರ |

| | | |
|---|---|---|
| ನರಸಿಂಹಮೂರ್ತಿ ಎ.ಬಿ. | ಯಾದವಾಸ್ ಆಫ್ ದೇವಗಿರಿ | ಗೀತಾ ಬುಕ್‌ಹೌಸ್, ಮೈಸೂರ |
| ಪಾಡಿಗಾರ ಎಸ್.ವ್ಹಿ. | ಇನ್ಸ್ಕ್ರಿಪ್ಷನ್ಸ ಆಫ್ ದಿ ಚಲುಕ್ಯಸ್ ಆಫ್ ಬಾದಾಮಿ | ಐಸಿಎಚ್‌ಆರ್, ಬೆಂಗಳೂರು, ೨೦೧೦ |
| ಪಾಟೀಲ ಭೋಜರಾಜ | ನಾಗರಖಂಡ-೭೦ | ಮಲೆನಾಡು ಅಧ್ಯಯನ ಸಂಸ್ಥೆ, ಆನಂದಪುರ ೧೯೯೫ |
| ಫ್ಲೀಟ್ ಜೆ.ಎಫ್. | ಡೈನಾಸ್ಟೀಜ್ ಆಫ್ ಕೆನರಿಸ್ ಡಿಸ್ಟ್ರಿಕ್ಟ್ಸ (ಪರಿಷ್ಕೃತ-ಬಾಂಬೆ ಗೆಝಿಟಿಯರ್ - ಸಂಪುಟ - ೧ ಭಾಗ - ೨) | ಮುಂಬಯಿ ೧೮೯೬ |
| ಬಾಲಂಬಾಳ್ | ಫ್ಯುಡೆಟರಿಸ್ ಆಫ್ ಸೌಥ ಇಂಡಿಯಾ | ೧೯೭೮ |
| ಬಾಲಸುಬ್ರ್ಮಣ್ಯ (ಸಂ) | ಕುರುಗೋಡು | ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೪ |
| ಮುಗಳಿ ರಂ. ಶ್ರೀ | ಕನ್ನಡ ಸಾಹಿತ್ಯ ಚರಿತ್ರೆ | ಗೀತಾ ಬುಕ್ ಹೌಸ್ ೨೦೦೫ |
| ಮೊರೆಸ ಜೆ.ಎಮ್ | ಕದಂಬ ಕುಲ | ಎಶಿಯನ್ ಎಜುಕೇಶನ್ ಸರ್ವಿಸ್, ನ್ಯೂ ದೆಲ್ಲಿ-ಮದ್ರಾಸ ೧೯೩೧ |
| ರಮೇಶ ಕೆ.ವ್ಹಿ. | ಹಿಸ್ಟರಿ ಆಫ್ ಸೌಥ ಕೆನರಾ | ಕ.ವಿ.ವಿ. ಧಾರವಾಡ ೧೯೭೦ |
| ರಾಮಚಂದ್ರಮೂರ್ತಿ ಎಸ್.ಎಸ್. | ಇನ್ಸ್ಕ್ರಿಪ್ಷನ್ಸ ಆಫ್ ದಿ ಕಾಕತೀಯಸ್ | ಐ.ಸಿ.ಎಚ್.ಆರ್ ಬೆಂಗಳೂರು ೨೦೧೧ |

| | | |
|---|---|---|
| ರಾಜಶೇಖರ ಎಸ್. | ಟೆಂಪಲ್ಸ್ ಎಟ್ ಕುರುಗೋಡು | ಜರ್ನಲ್ ಆಫ್ ಕ.ವಿ.ವಿ. ಧಾರವಾಡ. ಸಂ. ೧೦, ಪು. ೧೬೪-೭೮, ೧೯೭೪ |
| ರಿತ್ತಿ ಎಸ್.ಎಚ್. | ಸೇವುಣ್ಣ | ಕ.ವಿ.ವಿ., ಧಾರವಾಡ. ೧೯೭೩ |
| ರಿತ್ತಿ .ಎಸ್. ಎಚ್. | ಇನ್ಸ್ಕ್ರಿಪ್ಷನ್ಸ ಫ್ರಾಮ್ ಸೊಲ್ಲಾಪೂರ ಡಿಸ್ಟ್ರೀಕ್ಟ್, ಧಾರವಾಡ. | ಶ್ರೀಹರಿ ಪ್ರಕಾಶನ, ಧಾರವಾಡ ೧೯೮೮ |
| ರಿತ್ತಿ .ಎಸ್. ಎಚ್. | ಇನ್ಸ್ಕ್ರಿಪ್ಷನ್ಸ ಫ್ರಾಮ್ ಕೊಲ್ಹಾಪೂರ ಡಿಸ್ಟ್ರೀಕ್ಟ್ | ಹಂಪಿ ಕನ್ನಡ ವಿ.ವಿ., ಹಂಪಿ ೨೦೦೦ |
| ರಿತ್ತಿ ಎಸ್.ಎಚ್. (ಸಂಪಾದಿತ) | ಪ್ರಾಚೀನ ಕರ್ನಾಟಕದ ಆಡಳಿತ ಪರಿಭಾಷಾ ಕೋಶ | ಪ್ರಾಚ್ಯವಸ್ತು ಸಂಗ್ರಹಾಲಯದ ನಿರ್ದೇಶನಾಲಯ, ಮೈಸೂರು |
| ರಿತ್ತಿ .ಎಸ್. ಎಚ್. (ಸಂಪಾದಿತ) | ಕರ್ನಾಟಕ ಗ್ರಾಮ ಸೂಚಿ | ಕನ್ನಡ ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು (೧೯೯೩) |
| ರಿತ್ತಿ ಎಸ್.ಎಚ್., ಗೋಪಾಲ ಬಿ.ಆರ್. (ಸಂಪಾದಿತ) | ಇನ್ಸ್ಕ್ರಿಪ್ಷನ್ಸ ಆಫ್ ದಿ ವಿಜಯನಗರ ರೂಲರ್ | ಐ.ಸಿ.ಎಚ್.ಆರ್, ಬೆಂಗಳೂರು ೨೦೦೮ |
| ರಿತ್ತಿ ಎಸ್. ಎಚ್., ಶೇಕಳೆ ಜಿ.ಸಿ. | ಇನ್ಸ್ಕ್ರಿಪ್ಷನ್ಸ ಫ್ರಾಮ್ ನಾಂದೇಡ ಡಿಸ್ಟ್ರೀಕ್ಟ್, ನಾಂದೇಡ. | ಯಶವಂತ ಮಹಾವಿದ್ಯಾಲಯ, ನಾಂದೇಡ ೧೯೬೮ |
| ರೈಸ್ ಎಲ್.ಎಸ್. | ಮೈಸೂರು ಆ್ಯಂಡ್ ಕೂರ್ಗ ಇನ್‌ಸ್ಕ್ರೀಪನ್ಸ | ಆರ್ಚಿಬಾಲ್ಡ ಕನಸೆಂಟ ಕಂ ಲಿ. ಲಂಡನ್ ೧೯೦೯ |
| ವಾಸುದೇವ ಬಡಿಗೇರ | ಬಳ್ಳಾರಿ ಪರಿಸರದ ಸಾಂಸ್ಕೃತಿಕ ಪರಂಪರೆ | ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೨ |

| | | |
|---|---|---|
| ವೆಂಕಟಾಚಲ ಶಾಸ್ತ್ರಿ ಟಿ.ವಿ. | ಕನ್ನಡ ಛಂದಸ್ಸಿ ಸ್ವರೂಪ | ಡಿ.ವ್ಹಿ.ಕೆ ಮೂರ್ತಿ ಪ್ರಕಾಶನ, ಮೈಸೂರು ೧೯೭೮ |
| ಶಿರೂರ ಬಿ.ವ್ಹಿ. | ಯಲಬುರ್ಗಿ ಸಿಂದರು | ಪ್ರಸಾರಾಂಗ ಕ.ವಿ.ವಿ., ಧಾರವಾಡ. |
| ಸಂಪಾದಿತ ಮಂಡಳಿ | ಉಪಾಯನ (ಡಿ.ಎಲ್. ನರಸಿಂಹಚಾರ್ಯ ಅಭಿನಂದನಾ ಗ್ರಂಥ) | ಸಂಭಾವನಾ ಪ್ರಕಾಶನ ಸಮಿತಿ ಬೆಂಗಳೂರು ೧೯೬೭ |
| ಹಿರೇಮಠ ಚನ್ನಬಸವಯ್ಯ | ಕುರುಗೋಡಿನ ಸಿಂದರು-ಒಂದು ಅಧ್ಯಯನ | ಸಂಗಣ್ಣನವರು ಅಗಡಿ, ಸಂಸ್ಕೃತಿ ಪ್ರತಿಷ್ಠಾನ, ಕೊಪ್ಪಳ ೧೯೯೫ |

**ನಿಯತಕಾಲಿಕೆಗಳು**

| | | |
|---|---|---|
| ಗೋಪಾಲ .ಬಿ.ಆರ್. | ಬೀದರ ಜಿಲ್ಲೆಯ ಶಾಸನಗಳು | ಮಾನವೀಕ ಕರ್ಣಾಟಕ ಸಂಪುಟ-೪, ಸಂಚಿಕೆ-೧, ೧೯೭೩, ಪು.ಸಂ. ೩೭ff ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು. |
| ಗೋಪಾಲ .ಬಿ.ಆರ್. | ರಂಜೋಲ ಗ್ರಾಮದ ಶಾಸನಗಳು | ಮಾನವೀಕ ಕರ್ಣಾಟಕ ಸಂಪುಟ ೪, ಸಂಚಿಕೆ ೨, ಪು.ಸಂ. ೩೪ ff ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು ೧೯೭೪ |
| ಗೋಪಾಲ .ಬಿ.ಆರ್. | ರಂಜೋಲ ಗ್ರಾಮದ ಶಾಸನಗಳು ೫, ೬, ೭ | ಮಾನವೀಕ ಕರ್ಣಾಟಕ ಸಂಪುಟ ೪, ಸಂಚಿಕೆ ೨, ಪು.ಸಂ. ೧೧೧ ff ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು ೧೯೭೪ |
| ಗೋಪಾಲ ಬಿ.ಆರ್. | ರಂಜೋಲ ಗ್ರಾಮದ ಸಿಂದರ ಶಾಸನ | ಕರ್ನಾಟಕ ಭಾರತಿಯಿಂದ ಪುನರ್ ಮುದ್ರಣ ಕವಿವಿ, ಧಾರವಾಡ. |

# ಕಾಲಾನುಕ್ರಮದಲ್ಲಿ ಶಾಸನಗಳ ಅನುಬಂಧ

| | | |
|---|---|---|
| ೧ | ಜೆ.ಬಿ.ಬಿ.ಆರ್.ಎ.ಎಸ್. ನಂ. ೧೧ ಪಿಪಿ ೨೨೪ | ಶಕೆ ೮೭೨ |
| ೨ | ಜೆ.ಬಿ.ಬಿ.ಆರ್.ಎ.ಎಸ್. ನಂ. ೧೧ ಪಿಪಿ ೨೩೯ ಎಫ್.ಎಫ್. ಎಸ್.ಐ.ಐ. ೧೫, ನಂ. ೪೨ | ಶಕೆ ೮೨೨ |
| ೩ | ಎಸ್.ಐ.ಐ. ೯, ಭಾಗ ೧, ನಂ. ೧೦೦ ಕ.ವಿ.ಶಾ.ಸಂ. ೧ (ಬಳ್ಳಾರಿ) ನಂ. ೪೫ | ಕ್ರಿ.ಶ. ೧೦೪೫ |
| ೪ | ಎಸ್.ಐ.ಐ. ೧೧. ಭಾಗ ೧, ನಂ. ೧೦೯, | ಕ್ರಿ.ಶ. ೧೦೫೨–೧೦೫೩ |
| ೫ | ಕ.ಇ. ೪, ನಂ. ೨೫ | ಕ್ರಿ.ಶ. ೧೧೧೧ |
| ೬ | ಎ.ಕ. ೭, ಎಸ್.ಕೆ. ೩೧೬ | ಕ್ರಿ.ಶ. ೧೧೧೭ |
| ೭ | ಕ.ವಿ. ಶಾ.ಸಂ. ೧, (ಶಿರಗುಪ್ಪೆ) ನಂ. ೪೧ | ಕ್ರಿ.ಶ. ೧೧೨೦ |
| ೮ | ಕ.ಇ. ೬, ನಂ. ೨೫ | ಕ್ರಿ.ಶ. ೧೧೨೮ |
| ೯ | ಎಸ್.ಐ.ಐ. ೯, ಭಾಗ ೧, ನಂ. ೨೨೬ | ಕ್ರಿ.ಶ. ೧೧೩೨ |
| ೧೦ | ಕ.ವಿ.ಶಾ.ಸಂ. ೧, (ಶಿರಗುಪ್ಪ) ನಂ. ೪೨ | ಕ್ರಿ.ಶ. ೧೧೩೭ |
| ೧೧ | ಎ.ಕ. ೧೧, ದಾಗೆ ೪೩ | (ಕ್ರಿ.ಶ. ೧೧೩೮) |
| ೧೨ | ಎಸ್.ಐ.ಐ. ೯, ಭಾಗ ೧, ನಂ. ೨೩೫, ಕ.ವಿ.ಶಾ.ಸಂ. ೧ (ಬಳ್ಳಾರಿ) ನಂ. ೬೧ | ಕ್ರಿ.ಶ. ೧೧೪೧ |
| ೧೩ | ಕ.ವಿ.ಶಾ.ಸಂ. ೧ (ಶಿರಗುಪ್ಪೆ) ನಂ. ೪೦ | ಕ್ರಿ.ಶ. ೧೧೪೨ |
| ೧೪ | ಎಸ್.ಐ.ಐ. ೧೫ ನಂ. ೨೮, ಜೆಬಿಬಿಆರ್ಎ ಎಸ್. ನಂ. ೧೧, ಪಿಪಿ. ೨೫೩ | ಕ್ರಿ.ಶ. ೧೧೪೪ |
| ೧೫ | ಎಸ್.ಐ.ಐ. ೯, ಭಾಗ ೧, ನಂ. ೨೩೫ | ಕ್ರಿ.ಶ. ೧೧೪೪ |
| ೧೬ | ಎಸ್.ಐ.ಐ. ೯, ಭಾಗ ೧, ನಂ. ೩೨೨ | ಕ್ರಿ.ಶ. ೧೧೪೫ |
| ೧೭ | ಎಸ್.ಐ.ಐ.೯, ಭಾಗ ೧, ನಂ. ೨೫೩ | ಕ್ರಿ.ಶ. ೧೧೪೮ |
| ೧೮ | ಎಸ್.ಐ.ಐ. ೯, ಭಾಗ ೧, ನಂ. ೧೦೯ ಕ.ವಿ.ಶಾ.ಸಂ. ೧, (ಹಗರಿಬೊಮ್ಮನಹಳ್ಳಿ) ೩೦೪ | ಕ್ರಿ.ಶ. ೧೧೫೨–೧೧೫೩ |
| ೧೯ | ಎಸ್.ಐ.ಐ.೧೫, ನಂ. ೨೩೬ | ಕ್ರಿ.ಶ. ೧೧೫೫ |
| ೨೦ | ಜೆ.ಬಿ.ಬಿ.ಆರ್.ಎ.ಎಸ್. ನಂ. ೧೧, ಪಿಪಿ. ೨೩೯ | ಕ್ರಿ.ಶ. ೧೧೬೨ |

| | | |
|---|---|---|
| ೨೧ | ಕ.ಇ. ೪, ನಂ. ೧೩ | ಕ್ರಿ.ಶ. ೧೧೬೫ |
| ೨೨ | ಇ.ಐ. ೨೦, ನಂ. ೧೨ಎ (ಪಿ.ಪಿ. ೧೦೯) | ಕ್ರಿ.ಶ. ೧೧೬೭ |
| ೨೩ | ಎಸ್.ಐ.ಐ. ೧೫, ನಂ. ೧೧೭ | ಕ್ರಿ.ಶ. ೧೧೭೧ |
| ೨೪ | ಎ.ಕ. ೭, ಎಚ್.ಎಲ್. ೪೫ | ಕ್ರಿ.ಶ. ೧೧೭೫ |
| ೨೫ | ಎಸ್.ಐ.ಐ. ೯, ಭಾಗ ೧, ನಂ. ೨೯೬<br>ಕ.ವಿ.ಶಾ.ಸಂ. ೧ (ಬಳ್ಳಾರಿ) ನಂ. ೮ | ಕ್ರಿ.ಶ. ೧೧೭೬ |
| ೨೬ | ಎಸ್.ಐ.ಐ. ೯, ಭಾಗ ನಂ. ೨೯೭<br>ಕವಿಶಾ.ಸಂ. ೧ (ಬಳ್ಳಾರಿ) ನಂ. ೮ | ಕ್ರಿ.ಶ. ೧೧೭೭ |
| ೨೭ | ಎ.ಕ. ೭, ಎಚ್.ಎಲ್. ೫೦ | ಕ್ರಿ.ಶ. ೧೧೮೦ |
| ೨೮ | ಇ.ಐ. ೩, ನಂ. ೪೨, ಪಿ.ಪಿ. ೨೦೬ | ಕ್ರಿ.ಶ. ೧೧೮೨ |
| ೨೯ | ಇ.ಐ. ೨೦, ನಂ. ೧೨, ಬಿಪಿಪಿ ೧೧೭ | ಕ್ರಿ.ಶ. ೧೧೮೭ |
| ೩೦ | ಕ.ವಿ.ಶಾ.ಸಂ. ೮, (ಬೀದರ) ನಂ. ೫೮ | ಕ್ರಿ.ಶ. ೧೧೯೦ |
| ೩೧ | ಎಸ್.ಐ.ಐ. ೯, ಭಾಗ ೧, ನಂ. ೧೫೯<br>ಕ.ವಿ.ಶಾ.ಸಂ. ೧, (ಶಿರಗುಪ್ಪೆ) ನಂ. ೧ | ಕ್ರಿ.ಶ. ೧೧೯೨ |
| ೩೨ | ಎಸ್.ಐ.ಐ. ೯, ಭಾಗ ೧, ನಂ. ೧೫೯ | ಕ್ರಿ.ಶ. ೧೧೯೨ |
| ೩೩ | ಎ.ಕ. ೭, ಎಚ್.ಎಲ್. ೩೭ | ಕ್ರಿ.ಶ. ೧೧೯೬ |
| ೩೪ | ಎ.ಕ. ೭, ಎಚ್.ಎಲ್. ೨೮ | ಕ್ರಿ.ಶ. ೧೧೯೭ |
| ೩೫ | ಎಸ್.ಐ.ಐ. ೧೫, ನಂ. ೭೪ | ಕ್ರಿ.ಶ. ೧೧೯೮ |
| ೩೬ | ಎ.ಕ. ೭, ಎಚ್.ಎಲ್. ೨೫ | ಕ್ರಿ.ಶ. ೧೨೦೮ |
| ೩೭ | ಎ.ಕ. ೭, ಎಚ್.ಎಲ್. ೪೪ | ಕ್ರಿ.ಶ. ೧೨೧೫ |
| ೩೮ | ಎ.ಕ. ೭, ಎಚ್.ಎಲ್. ೪೮ | ಕ್ರಿ.ಶ. ೧೨೧೬ |
| ೩೯ | ಎಸ್.ಐ.ಐ. ೧೫, ನಂ. ೧೬೫ | ಕ್ರಿ.ಶ. ೧೨೨೦ |
| ೪೦ | ಎಕ ೭, ಎಚ್.ಎಲ್. ೨೦ | ಕ್ರಿ.ಶ. ೧೨೨೨ |
| ೪೧ | ಎಕ ೭, ಎಚ್.ಎಲ್. ೪೬ | ಕ್ರಿ.ಶ. ೧೨ ನೇ ಶತಮಾನ |
| ೪೨ | ಎಕ ೭, ಎಚ್.ಎಲ್. ೫೧ | ಕ್ರಿ.ಶ. ೧೨ ನೇ ಶತಮಾನ |
| ೪೩ | ಕ.ಇ. ೪, ನಂ ೩೮ | ಕ್ರಿ.ಶ. ೧೨ ನೇ ಶತಮಾನ |
| ೪೪ | ಕ.ವಿ.ಶಾ.ಸಂ. ೭, (ಬೀದರ) ನಂ. ೫೯ | ಕ್ರಿ.ಶ. ೧೨ ನೇ ಶತಮಾನ |

| | | |
|---|---|---|
| ೪೫ | ಕ.ವಿ.ಶಾ.ಸಂ. ೮ (ಬೀದರ), ನಂ. ೬೦ | ಕ್ರಿ.ಶ. ೧೨ ನೇ ಶತಮಾನ |
| ೪೬ | ಕ.ವಿ.ಶಾ.ಸಂ. ೭ (ಬೀದರ), ನಂ. ೧ | ಕ್ರಿ.ಶ. ೧೨ ನೇ ಶತಮಾನ |
| ೪೭ | ಕ.ವಿ.ಶಾ.ಸಂ.೧, (ಬಳ್ಳಾರಿ), ನಂ. ೧೯ | ಕ್ರಿ.ಶ. ೧೨ ನೇ ಶತಮಾನ |
| ೪೮ | ಜೆ.ಬಿ.ಬಿ.ಆರ್.ಎ.ಎಸ್. ೧೧, ಪಿಪಿ. ೨೪೭ | – |
| ೪೯ | ಜೆ.ಬಿ.ಬಿ.ಆರ್.ಎ.ಎಸ್. ೧೧, ಪಿಪಿ. ೨೭೪ | – |
| ೫೦ | ಎಸ್.ಐ.ಐ. ೯, ಭಾಗ ೧, ನಂ. ೨೩೭<br>ಕ.ವಿ.ಶಾ.ಸಂ.೧ (ಬಳ್ಳಾರಿ), ನಂ. ೬೨ | – |
| ೫೧ | ಕ.ವಿ.ಶಾ.ಸಂ. ೧ (ಬಳ್ಳಾರಿ), ನಂ. ೧೮ | – |
| ೫೨ | ಎ.ಕ. ೭, ಎಚ್.ಎಲ್. ೬೯ | – |
| ೫೩ | ಎ.ಕ. ೭, ಎಚ್.ಎಲ್. ೯೮ | – |
| ೫೪ | ಕ.ಇ. ೪, ನಂ. ೧೧ | – |
| ೫೫ | ಎ.ಕ. ೭, ಎಚ್.ಎಲ್. ೭ | – |

# ಬೆಳಗುತ್ತಿ ಸಿಂದರ ಶಾಸನಗಳು

## ೧

ಸ್ಥಳ : ಮೇದೂರು, ಹಿರೆಕೇರೂರ ತಾಲೂಕ, ಧಾರವಾಡ ಜಿಲ್ಲೆ
(ಈಶ್ವರ ದೇವಸ್ಥಾನದ ಗೋಡೆಯ ಮೇಲೆ ಇರುವ ಕಲ್ಲು)
ಉಲ್ಲೇಖ : ಕಇ. IV, ನಂ. ೩೯
ಅರಸ : ಚಾಲುಕ್ಯ ೬ನೇ ವಿಕ್ರಮಾದಿತ್ಯ
ಸಾಮಂತ : -----
ಕಾಲ : ಕ್ರಿ.ಶ. ೧೧೧೧

೧ ಶ್ರೀಮದ್ದೈತ್ಯಹರೇಸ್ವರಾಂಬುಜಭವರು ತ್ರೈವರ್ಗಮುಷ್ಣಾಂ[ಶ]-
೨ ತ್ಸೋ[ಮಾಂ]ಗಾರಬುಧೇಂದ್ರಮಂತ್ರಿ ಕವಿ ಮಂದಾಹ(ಹೀ)ಂದ್ರಕೇತುಗ್ರಹೋ
೩ ವಾಕ ಫಣೀಶ್ವರರ್ತ್ಥಿಗಧಿಪರ್ಬ್ರಹ್ಮಣ್ಯದಿಶಾಂಬಿಕಾ ಸಾಮ್ಯಾ
೪ ಹಂ ನಮಗೀಗೆ ಮಂಗಳಮಹಾ ಶ್ರೀಯುಂ ಜಯಶ್ರೀಯುಮಂ ॥
೫ [ಸ್ವ]ಸ್ತಿ ಸಮಸ್ತಭುವನಾಶ್ರಯ ಶ್ರೀಪೃಥ್ವೀವಲ್ಲಭ ಮಹಾರಾಜಾ-
೬ ಧಿರಾಜ ಪರಮೇಶ್ವರ ಪರಮಭಟ್ಟಾರಕಂ ಸತ್ಯಾಶ್ರಯಕುಳತಿಳಕಂ ಚಾಳು-
೭ ಕ್ಯಾಭರಣಂ ಶ್ರೀಮತ್ತ್ರಿಭುವನಮಲ್ಲದೇವರ ವಿಜಯರಾಜ್ಯಮುತ್ತರೋತ್ತರಾಭಿ-
೮ ವೃದ್ಧಿಪ್ರವರ್ದ್ಧಮಾನಮಾಚಂದ್ರಾರ್ಕತಾರಂಬರಂ ಸಲುತ್ತಮಿರೆ ॥
೯ ತತ್ಪಾದಪದ್ಮೋಪಜೀವಿ ಸಮಸ್ತ ಪ್ರಶಸ್ತಿ ಸಹಿತಂ ಶ್ರೀಮನ್ಮಮಹಾ-
೧೦ ಪ್ರಧಾನ ದಣ್ಡನಾಯಕಂ ಗೋವಿಂದರಸರ್ವ್ವನವಾಸಿಪನ್ನಿರ್ಚ್ಛಾಸಿರಮುಮಂ ಸಾ-
೧೧ ನ್ತ[ಳಗೆ]ಸಾಸಿರಮುಮಂ ದುಷ್ಟನಿಗ್ರಹ ವಿಶಿಷ್ಟ ಪ್ರತಿಪಾಳನದಿನಾಳು-
೧೨ ತ್ತಮಿರೆ । ಸಮಧಿಗತಪಂಚಮಹಾಶಬ್ದ ಮಹಾಮಂಡಳೇಶ್ವರಂ ಕರಹಟ-
೧೩ ಪುರವಾರಧೀಶ್ವರಂ ಕದನಮಾಹೇಶ್ವರಂ ಮಾಳಚಿದೇವಿಲಬ್ಧವರಪ್ರಸಾದಾಸಾದಿತ
೧೪ ಸಮಸ್ತಮಹೀಮಣ್ಡಳಂ ವಿಜಯಲಕ್ಷ್ಮೀಕರ್ಣ್ನಕುಣ್ಡಳ ನೀಳಧ್ವಜವಿರಾಜಮಾನಂ
೧೫ [ದಾ]ನಕಾನೀನಂ ಮಲ್ಲಳತೂರ್ಯ್ಯನಿರ್ಗ್ಘೋಷಣಂ ಗುಣರತ್ನಭೂಷಣ ಸಿನ್ದ
೧೬ ಮಾರ್ತ್ತಣ್ಡ ವಿಜಯದೋರ್ದ್ದಣ್ಡ ಫಣಿರಾಜವಂಶಂ ಸುಜನಾವತಂಶಂ ವ್ಯಾಘ್ರಮೃಗಲಾಂಛ-
೧೭ ನಂ ಯೋಗಕಾಂಚನಂ ಸೌರ್ಯ್ಯಪಾರಾಯಣಂ ವೈರಿನಾರಾಯಣನರಸಂಕರಗಸಂ
೧೮ . . . ಂಕುಶಂ ನಾಮಾದಿ ಸಮಸ್ತ ಪ್ರಶಸ್ತಿ ಸಹಿತಂ ಶ್ರೀಮನ್ಮಹಾಮಣ್ಡಳೇಶ್ವರಂ ನ-
೧೯ . . . ರೆಡೆವಟ್ಟ ೭೦ಮನರಕೆಱ್ ಪನ್ನೆರಡುಮನಿವು ಮೊದಲಾಗೆ ದತ್ತ
೨೦ . . . ಬಾಡಂಗಳ ಮನ್ನೆಯಮಂ ದುಷ್ಟನಿಗ್ರಹ ವಿಶಿಷ್ಟಪ್ರತಿಪಾಳನ
೨೧ . . . ತ್ತ ಮಿಙ್ದ ಶ್ರೀಮಚ್ಚಾಳುಕ್ಯವಿಕ್ರಮವರ್ಷದ ೩೬ನೆಯ ನನ್ದನ ಸಂವತ್ಸ-
೨೨ . . . ಪು[ಷ್ಯ] ಬಹುಳ ೧೦ ಬೃಹಚ್ಪತಿವಾರಮುತ್ತರಾಯಣಸಂಕ್ರಾನ್ತಿನಿಮಿತ್ತ
೨೩ . . . ರೆಡೆವಟ್ಟೆ ೭೦ ಱ ಮೊದಲ ಬಾಡಂ ಮೇಜವುರದ ಮಾಕಳೇಶ್ವರದೇವರ [ಮಸೆಣ]-
೨೪ . . . ರ ಖಂಡಸ್ಫುಟಿತಜೀರ್ಣ್ನೋದ್ಧಾರಕ್ಕಂ ತಪೋಧನರಾಹಾರದಾನಕ್ಕಂ ಶ್ರೀಮದಾಚಾ-

ಸ್ಥಳ : ಗೊಗ್ಗ, ಶಿಕಾರಿಪುರ ತಾಲೂಕು, ಶಿವಮೊಗ್ಗ ಜಿಲ್ಲೆ
(ಸಿದ್ಧೇಶ್ವರ ದೇವಸ್ಥಾನಕ್ಕೆ ಪೂರ್ವದಲ್ಲಿ ನೆಟ್ಟ ಕಲ್ಲು)
ಉಲ್ಲೇಖ : ಎಕ. VII (ಹಳೆ), ಎಸ್.ಕೆ. ೩೧೩
ಅರಸ : ಚಾಲುಕ್ಯ ವಿಕ್ರಮಾದಿತ್ಯ
ಸಾಮಂತ : ಚಟ್ಟರಸ
ಕಾಲ : ಕ್ರಿ.ಶ ೧೧೧೭

೧ ಪ್ರತ್ಯಕ್ಷವಸ್ತು ವಿಷಯಾಯ . . . . . . . ಸ್ಥಿತಿಪ್ರಳಯಸಂಭವ . . .
೨ ಸಡವ್ವಾರ್ತ್ಮನೇ ವಿಜಿತಕೋಪ . . . . . . . . . . . . . . . . .
೩ ಪ್ರಭವೇ ಶಿವಾಯ
೪ ಸ್ವಸ್ತಿ ಸಮಸ್ತಭವನಾಶ್ರಯಂ ಶ್ರೀಪ್ರೀಥ್ವೀವಲ್ಲಭ ಮಹಾರಾಜಾಧಿರಾ . .
೫ ರಮೇಶ್ವರ ಪರಮಭಟ್ಟಾರಕ ಸತ್ಯಾಶ್ರಯಕುಳತಿಳ . .
೬ ಉಕ್ಯಾಭರಣಂ ಶ್ರೀಮತ್ರಿಭುವನಮಲ್ಲದೇವರ ವಿಜಯರಾ
೭ ಜ್ಯಮುತ್ತರೋತ್ತರಾಭಿವ್ರಿದ್ಧಿಪ್ರವರ್ದ್ಧಮಾನಮಾಚಂದ್ರಾರ್ಕ್ಕತಾ
೮ ರಂಬರಂ ಸಲುತ್ತಮಿರೆ ॥ ಸ್ವಸ್ತಿ ಸಮಸ್ತಪ್ರಸಸ್ತಿಸಹಿತಂ ಶ್ರೀಮ
೯ ನ್ಮಹಾಪ್ರಧಾನಂ ದಂಡನಾಯಕಂ ಗೋವಿಂದರಸರು ಬನವಸೆ . .
೧೦ ರ್ಚ್ಛಾಸಿರಮುಮಂ ಸುಖದಿನಾಳುತ್ತಿರಲಾ ಬಳಯ ಕಂಪಣ ಎಡೆ . .
೧೧ ಟ್ಟೆ ೭೦ ಕ್ಕ ಸ್ವಸ್ತಿ ಸಮಧಿಗತಪಂಚಮಹಾಸಬ್ದ ಮಹಾಮಂಡಳಕ . .
೧೨ ಷ್ಟಭಯದಾಯಕಂ ಕರಹಡಪುರವರಾಧೀಶ್ವರಂ ಕದನಮಹೇ . .
೧೩ ಮಾಳಚಿದೇವೀಲಬ್ಧವರಪ್ರಸಾದಾಸಾದಿತಸಮಸ್ತಮಹಾಮಂಡ . .
೧೪ ವಿಜಯಲಕ್ಷ್ಮೀಕರ್ಣ್ನಕುಂಡಳ ನೀಳಧ್ವಜವಿರಾಜಮಾನ ದಾನಕಾನೀ .
೧೫ ಲ್ಲಳತೂರ್ಯ್ಯಘೋಷಣ ಗುಣರತ್ನಭೂಷಣಂ ಸಿಂದಮಾರ್ತ್ತಂಡ . .
೧೬. ಯುದೋರ್ದ್ದಂಡ ಫಣಿರಾಜವಂಶ ಸುಜನಾವತಂಸ ವ್ಯಾಘ್ರಮ್ರಿ . .
೧೭ ಛನ ವಿನಿಯೋಗಕಾಂಚನ ಸೌರ್ಯ್ಯಪರಾಯಣ ವೈರಿನಾರಾಯ . .
೧೮ ನಾಮಾದಿಪ್ರಸಸ್ತಿಸಹಿತಂ ಶ್ರೀಮನ್ಮಹಾಮಂಡಳಕಂ ಚಟ್ಟರಸರು . . .
೧೯ ಯನಾಗಿ ಸುಖದಿನಾಳುತ್ತಿರಲಾ ಬಳಯ ಹೆಬ್ಬಾಳ . . . . .
೨೦ ಭು ಹೆಗಡೆ ಗಾಳಮಯ್ಯನ ಮಗಂ ಸರ್ವ್ವನ್ಯಸೆಟ್ಟಿ ತಮ್ಮ ಮಾಡಿಸಿ . . . .
೨೧ ವಾಲೆಯಕ್ಕೆ ಖಂಡಸ್ಫುಟಿತನವಕರ್ಮ್ಮಪೂಜಾನಿಮಿತ್ತಕ್ಕಂ . . . . .
೨೨ ರ್ಗ್ಗಂಚಾತ್ರರ್ಗ್ಗ(೦)ಮಸನಾಚ್ಛಾದನಕ್ಕಂ ವೃತ್ತಿವಿಕ್ಕುವೆಂದು ॥ ಸ್ವಸ್ತಿ ಶ್ರೀಮಚ್ಚಾಳು . .
೨೩ ಕ್ರಮವರ್ಷದ ೪೧ ನೆಯ ಹೇಮಳಂಬಿಸಂವತ್ಸರದ ಚೈ . . . . . .
೨೪ ಸು ೧ ಆದಿವಾರದ ದಿನ ಸೋಮಗ್ರಹಣಪರ್ವ್ವನಿಮಿತ್ತದಂದು . . . .
೨೫ ಮುಖಸಮೆಯಸಮುದ್ಧರಣಶಕ್ತಿಪರಿಧಿಯ ಪರ್ವ್ವತಾವಳಿಯಲಿ . . . .
೨೬ ಕಸಂತತಿಯ ಕ್ರಿಯಾಶಕ್ತಿಪಂಡಿತರ ಶಿಶ್ಯರ್ ॥ ಪಱಿದುದು ಮೊಸಬಂಧವೆಂಬ ತೆ . .
೨೭ ದುರಿತಾವಳಿಯೆಂಬ ಕಂಭಮಂ ಮಱಿದುದು ಕಾಮನೆಂಬ ಪರಿಕಾಱಿರ . . . . .

## ೩

| | | |
|---|---|---|
| **ಸ್ಥಳ** | : | ಹರಿಹರ, ಹರಿಹರ ತಾಲೂಕು, ದಾವಣಗೆರೆ ಜಿಲ್ಲೆ (ಹರಿಹರದ ಹರಿಹರೇಶ್ವರ ದೇವಸ್ಥಾನ ಸ್ಥಳದಲ್ಲಿ ೨ನೇ ಕಲ್ಲು) |
| **ಉಲ್ಲೇಖ** | : | ಎಕ. XI, ದಾಗೆ. ೪೩ |
| **ಅರಸ** | : | ಕಲಚುರಿ ೨ನೇ ಬಿಜ್ಜಳ |
| **ಸಾಮಂತ** | : | ಬೆಳಗುತ್ತಿ ಸಿಂದ ಎರಡನೇ ಈಶ್ವರದೇವ |
| **ಕಾಲ** | : | [ಕ್ರಿ.ಶ ೧೧೩೮] |

೧ ಸ್ವಸ್ತಿ ಶ್ರೀ ಜಿಯಾಭ್ಯುದಯಶ್ಚ್ಯ ನಮಃ ಕಮಳನಾಭಾಯ ವಿಷ್ಣವೇ ಪ್ರಭವಿಷ್ಣವೇ ।

೨ ಜಗದಿಂದೀವರಾನನ್ದಬಂಧವೇ ಶೌರ್ಯ್ಯಸಿಂಧವೇ ॥ ಪಾತು ವೋ ಮೇದಿನೀ

೩ ದೋಳಾ ಬಾಳೇಂದುದ್ಯುತಿ ಶೋಭಿನೀ । ದಂಷ್ಟ್ರಾ ಮಹಾವರಾಹಸ್ಯ ಪಾತಾಳಗ್ರಿಹದೀಪಿಕಾ । ಪರಿಧಾವಂ ನಕ್ರಚಕ್ರ

೪ ಕ್ರಮಣ ರಮಣ ಸಂಜಾತಕಲ್ಲೋಳಮಾಳಾ ಸ್ಫುರದುದ್ಯತ್ಸೀಕರೌಘಸ್ಥಗಿತಗಗನದಿಗ್ಮಂ

೫ ಡಳಂ ಚಾರುಚಾಮಿಕರರತ್ನಬ್ರಾತನಾನಾರುಚಿನಿಚಯವಿಳಾಸಾಸ್ಪದಂ ಶೋ

೬ ಭಿಕುಂಭಾಸುರಜಂಬೂದ್ವೀಪಮಂ ಸುತ್ತಿದು(ದು)ದತಿಬಹಳಧ್ವಾನರೌದ್ರಂ ಸಮು

೭ ದ್ರಂ ॥ ವ ॥ ಆ ರತ್ನಾಕರವೇಷ್ಟಿತಮಪ್ಪ ಜಂಬೂದ್ವೀಪದ ನಟ್ಟ ನಡುವೆ ॥ ಅಮರಗಣಸೇ

೮ ವ್ಯವತಿತುಂಗಿಮಸಿಖರಬ್ರಾಜಿನಿಖಿಳತಾರಾ ಚಕ್ರಭ್ರಮಣಾ

೯ ವಳ ದಿವಿಜೋತ್ತಮನಿಳಯಂ ಮಂದರಾಚಳಂ ರಂಜಿಸುಗುಂ ॥ ವ ॥ ಆ ಮನ್ದರಮ

೧೦ . . . ಧರದಕ್ಷಿಣದಿಗ್ಮಂಡಳಕ್ಕೆ ಮಣ್ಡನಮುಮೆನಿಸಿ ॥ ಕ ॥ ಸನ್ತತವಿಳಾಸ

೧೧ . ತಭೂಶ್ಕಾನ್ತಂ ಕಮನೀಯನಗರನನ್ದನಲಕ್ಷ್ಮೀಕಾನ್ತಂ ಧಾತ್ರೀಕಾನ್ತೆಯ

೧೨ . ನ್ತಳವೆನೆ ತೋಪ್ಪುದೊಪ್ಪಿ ಕುನ್ತಳದೇಶಂ ॥ ತತ್ಕುಂತಳಧರಾತಳಾಧಿಪತ್ಯ

೧೩ . . ಆನೇಕಚಾಳುಕ್ಯಚಕ್ರೇಶ್ವರಪ್ರವರ್ತನಾಬ್ಯತಿಕ್ರಮಣದೊಳು ॥ ಮಾಲವಮಾ

೧೪ . . . . . ದಿಹರಣಂಘ್ರಿತಪಲ್ಲವಪಲ್ಲವಾವನೀಪಾಳಕಮಣ್ಡಳಂ ಮುಕುಳಹಸ್ತ

೧೫ . . ತ್ತಲಲಾಟಲಾಟಭೂಮಿಲಲನಾಧಿಪಂ ವಿಶದನೂನುಕಳಂಗಕಳಂಗನೆಂಬುದಾಭೀಳಪರಾ

೧೬ ಕ್ರಮಕ್ರಮವನೆಯ್ದೆ ಜಗಂ ಜಗದೇಕಮಲ್ಲನ ॥ ತತ್ಕಾಲದೊಳು ॥ ಧರಣೀಚಕ್ರಕ್ಕಧಿಷ್ಠಾನಮಿದೆನಿ

೧೭ . ದುದಾತ್ಮೀಯದೋರ್ದ್ದಂಡವುನ್ಮತ್ತರಿಪುಬ್ರಾತಾಸುವಾತಾಸನದೆ ತಣಿದುದಾಶಾತಖಳ್ಗಾಹಿ

೧೮ ವಿದ್ವದ್ವರಚೇತಶ್ಪ್ರೀತಿಸನ್ತರ್ಪ್ಪಣದೇ ಸಫಲವಾಯ್ತರ್ತ್ಥಿವಾಶಾಕರೀಂದ್ರೋತ್ಕರಕನ್ನೋರ್ಱತೀರ್ನ್ನ

೧೯ ವಾಯ್ತುಜ್ವಳಯಶವೆನಿಪಂ ಬಿಜ್ಜಳಕ್ಷೋಣಿಪಾಳ । ಆ ಧರಣೀಶ್ವರಪದಸೇವಾ

೨೦ ಧೀನಂ ಸಕಳವಿಮಳಗುಣಗಣರತ್ನಾಂಭೋಧಿನಿರಾಕ್ರಿತವಿದಿಡ್ವಾಧಂ ಶ್ರೀವೀರಪಾಂಡ್ಯಭೂಪ

೨೧ ನುದಾರ । ಆ ವಿಭುವಿನನುಜನಖಿಳಕಳಾವಿದನಾನಮಿತವೀರವೈರಿನೃಪಾಳಂ ಸೇವಿತಗು

೨೨ ರು ಹರಿಹರಭೂದೇವಂ ನಿಗಳಂಕಮಲ್ಲ ಕಾಮನೃಪಾಳಂ ॥ ತದಗ್ರತನೂಜಂ ॥ ಪಂಡಿತಪಾಂಡ್ಯನ

೨೩ ನೂಜಂ ಪಂಡಿತಮಂಡಳಸರೋಜವನಮಾರ್ತ್ತಂಡಂ ಮಂಡಳಿಕ ಗಂಡಗಿರಿಪವಿದಂಡಂ ಶ್ರೀವಿಜ

೨೪ ಯಪಾಂಡ್ಯನಾಹವಶೌಣ್ಡ ॥ ಆ ಪಾಂಡ್ಯಮಂಡಳಾಧೀಶ್ವರಂ ನೊಣಂಬವಾಡಿಮೂವತ್ತಿರ್ಚ್ಛಾಸಿರ

೪೯ ನೆಂಬವಂಗಳುರ್ವ್ವ ದಳ್ಳುರಿ ಚಟ್ಟಮನೆಂಬ ಜೆಟ್ಟಿಗಂ ॥ ವ ॥ ತದನಂತರಂ ತದ್ವಂಶದೊಳು ॥ ಆತತಕೀರ್ತಿ ಮಾಚರಸನಾನತರಕ್ಷ

೫೦ ಣದಕ್ಷವಿಕ್ರಮಂ ನೀತಿನಿರಂತರಾಭ್ಯುದಯಮಾನಿತಮಾನ್ಯನುದಾರಶೌರ್ಯ್ಯಸಂಜಾತ ಯಶೋವಿತಾನ ವಳಯಾಶ್ರಿತದಿ

೫೧ ಗ್ವಳಯಪ್ರಪಂಚಸುದ್ಯೋತಿತಭಾನುತೇಜನುದಿತೋದಿತಭಾಗ್ಯನುದಗ್ರಪೌರುಷಂ ॥ ಕಾದಿದ ಕಾಳೆಗಂಗಳನದೇಂಯಸ

೫೨ ಗೊಣ್ಡ ಪೆರ್ಮ್ಮಾಡಿದೇವ ಶಸ್ತ್ರೋದಿತವೈರಿಭೂಪರುಧಿರಹ್ರದಮಗ್ನಮಣಿವ್ರಜಂಗಳಂ ಭೇದಿಸಿ ಕಾಣ್ಬರಿನ್ನುವರಿರಾಜಪುರ

೫೩ . ಳ ಸೀಮೆಯೆಲ್ಲಿ ಸಂಪಾದಿತಪೋತಯಾತ್ರಿಕಜನಂ ಪುಗಲೊಲ್ಲದೆ ವಾರ್ದ್ಧಿಮಧ್ಯಮಂ ॥ ಅದಲ್ಲದೆಯುಂ ಕಲಿಯಂ ಮೂದಲಿ

೫೪ . . ತ ಪಂದೆಯನೆಲೇ ಪೋಗೆನ್ದು ಸಂಗ್ರಾಮದಿಂ ತೊಲಗಿರ್ಪ್ಪಂತೆಯೆಲುನ್ನತಾಂಶುಯುಗದೊಳು ವಕ್ಷಸ್ಥಳೋದ್ದೇಶದೊಳ್ಸ

೫೫ ಲೆ ಪೂರ್ಬ್ಬಾಂಗದೊಳಾವಗಂ ತುಱುಗಿ ತೋಱುತ್ತಿರ್ಪ್ಪ ಶಸ್ತ್ರಬ್ರಣಾವಳ ವೀರಾಂಗನೆ ಕೂಡೆ ಕಣ್ದೆಱೆದ

೫೬ . . ತೊಪ್ಪುಗುಂ ಸಂತತಂ ॥ ಕ್ಷೀರಸಮುದ್ರದಂತೆ ಕಮಳೋದ್ಭವನೀಶ್ವರನಂತುಮಾವರಂ ಮೇರುಗಿರೀಂದ್ರದಂತೆ

೫೭ . . ಬುಧಾಶ್ರಯನಂಬುಜನಾಭನಂತೆ ವಿಸ್ಫಾರಿತ ವಿಕ್ರಮದ್ಯುಮಣಿಯಂತಿರೆ ಸತ್ವದವರ್ತ್ತಿಯೆಂಬುದೀ ಧಾರಿಣಿ

೫೮ [ಮಾ]ಚಿದೇವನರಪಾಳನನೂರ್ಜ್ಜಿತಪುಣ್ಯಶೀಳನಂ ॥ ವ ॥ ಯಿಂತೆನಿಸಿದ ಸಿಂದಾನ್ವಯಗಗನ ಸುಧಾರೋಚಿಯಪ್ಪ ಮಾಚಿ

೫೯ . . . ಗೆ ॥ ಕೆ ॥ ರತಿಗಂ ಪಾರ್ಬ್ಬತಿಗವರುಂಧತಿಗಂ ಮಿಗಿಲಾದ ರೂಪು ಸೌಭಾಗ್ಯ ಪತಿಬ್ರತಗುಣದಿನೊಪ್ಪಿರೆ ಹಿ

೬೦ . . . ತೆ ಚಟ್ಟಲದೇವಿಯಗ್ರಮಹಿಶಿಯೆನಿಪ್ಪಳು ॥ ಕುಲದಿಂದಂ ಬಲದಿಂದಮುನ್ನತಿಕೆಯಿಂ ಸೌಭಾಗ್ಯದಿಂ ಭಾಗ್ಯ

೬೧ . ಚಲದಿಂ ರೂಪವಿಳಾಸದಿಂ ವಿಭವದಿಂ ಚಾರಿತ್ರದಿಂ ಪೆರ್ಮ್ಮೆಯಿಂ ಲಲರಾರತ್ನವಿದೆಂದು ಧಾತ್ರಿ ಪೊಗಳ್ಗುಂ

೬೨ . . ರದಿಂ ಪೂಣ್ದು ನಿರ್ಮ್ಮಳೆಯಂ ಚಟ್ಟಲದೇವಿಯಂ ಪತಿಹಿತಪ್ರಾರಂಭಭೂಜಾತೆಯಂ ॥ ತದನುಜನುದಾರ ಚಿ

೬೩ . . ಕದನಕ್ರೀಡಾವಿನೋದನುದ್ಧತದರ್ಪ್ಪಂ ಬಿದುರಪರಾಕ್ರಮನಾದಂ ವಿದಿತಗುಣಂ ಮಲ್ಲದೇವನೂರ್ಜ್ಜಿತ ತೇಜ ॥

೬೪ . . . ಭುವಿನ ತಮ್ಮಂ ಸಕಾಳಾವನಿಪ್ರಖ್ಯಾತಕೀರ್ತ್ತಿ ಸದ್ಗುಣವಿಭವಕ್ಕಾವಾಸಮೆನಿಸಿದಂ ಸಂಬಾವಿತನ

೬೫ . . ರಸನಗ್ರಜಂಗತಿಭಕ್ತ ॥ ವ್ರಿ ॥ ಬಳಭದ್ರಂಗೆ ಮುರಾರಿ ಧರ್ಮ್ಮತನೆಯಂಗಾ ಭೀಮಸೇನಂ ಮಹೀತಳ ವಿಖ್ಯಾ

೬೬ . . ನಿಪ್ಪ ದಾಶರಥಿಗಾ ಸೌಮಿತ್ರಿಯಂತೆನೆ ನಿಶ್ಚಳಭಕ್ತಿಬ್ರತಶುದ್ಧಿಯಿಂ ವಿನಯದಿಂ ಶೂರತ್ವದಿಂ ಕೂಡಿ ನಿರ್ಮ್ಮಳ

೬೭ . . . ಸಕೆಯ್ವನಯ್ಯರಸನಣ್ಣಂಗಗ್ರಜ ಸ್ನೇಹದಿಂ ॥ ದಾನಗುಣಂ ಕಣ್ದೆಱೆದುದು ಕಾನೀನಂ ಮಗುಳೆ ಹು

೬೮ . . . ೦ಗೆನಿಪಂ ಸೂನ್ರಿತವಚನ ನಿಧಾನಂ ಮಾನಿತನಯ್ಯರಸನಖಿಳದಾನವಿನೋದಂ ॥ ಅನ್ತೆನಿಸಿದ್ಯೆಹರಸ

